ವಿರಿಂಚಾದ್ಯಮರಪದ (ಕುವ್ಯಾಸ. ೧೧-೧೪). ತುಸು$_1$: ೨. ಹಣ ಬ್ಯಾಂಕಿನಲ್ಲಿಡುವ ಬದಲು ನಾನು ನನ್ನ ಮಕ್ಕಳ ದೇಹದಲ್ಲಿ ತುಸು ರಕ್ತವನ್ನು ತುಂಬುವುದಕ್ಕೆ ಯತ್ನಿಸುತ್ತೇನೆ (ಮಹಾತ್ಮಾ. ೨೧): ಅವನು ತುಸು ಆಲೋಚನೆ ಮಾಡಿದ (ಹಾಹುತ್ತ. ೯೭). [ ? ]

**ತುಸ$_4$** 'ತುಸಂ' ನೋ.

**ತುಸಂ, ತುಸ$_4$. ತುಸು$_2$** (ಅ). ಸ್ವಲ್ಪವೇ ; ಕೊಂಚಮಟ್ಟಿಗೆ: ಕಾಲವಕ್ಕಿಗೆ ತುಸಮೆ ಹಾರಲಿದೆ ದಾರಿ (ಗೀವಿಂ. ೧೧೭-೬). ತುಸ$_4$ : ಕನ್ನಡಿಯ ಮುಂಗಡೆ ತುಸ ನಿಲುವೆ (ಗಣೇಶ. ೪೯-೪): ತಂದೆ ತುಸ ಸಿಡುಕಾಡೆ ಮಿಡುಕಾಡಿ ... ತಾಯ ಬೆಂಬಳಿವಿಡಿಯುತ (ಭಾವಜೀ. ೩-೫೭). ತುಸು$_2$ : ಅದು ಹೀಗೆ ಏಕೆ ಮತ್ತು ಹೇಗೆ ಮಾನ್ಯವಾಗಬಹುದೆಂಬುದನ್ನು ತುಸು ವಿಸ್ತರಿಸುವೆವು (ಗೀತಾಸಂ. ೧೪): ಹುಸಿನಗುತ ಬಂದೇವ ನಸುನಗುತ ಬಾಳೋಣ ತುಸು ನಗುತ ತೆರಳೋಣ (ಗರಿ. ೧೦೩-೧೦); ಅವಳ ಕೊರಳು ತುಸು ಕೊಂಕಾಯಿತು (ಜಾಣಪ. ೩೩).

ತುಸವಾತ್ರ, ತುಸುಮಾತ್ರ = ಅತ್ಯಲ್ಪ ; ಲೇಶಮಾತ್ರ : ನಾ ಕೊಟ್ಟ ವರದೊಳು ತುಸಮಾತ್ರ ತಪ್ಪದು ಕೇಳಾಯತಾಕ್ಷಿ (ಮೋಹತ. ೪-೨೪); ಕೈದುಡುಕಿ ತುಸು [ ಪಾಠಾಂ. ಸ ] ಮಾತ್ರಮೆನೆ ಫಲುಗುಣನ ತುರಗಂಗಳಂ ತಂದು ನಿಮಿಷದೊಳ್ ನಿಲಿಸಿದರ್ (ಜೈಮಿಭಾ. ೨೭-೫). [ < ತುಸ$_3$ ]

**ತುಸಪುಸ** (ನಾ). (ಗೊಂದಲ, ಗಡಿಬಿಡಿ, ಬೇಸರಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಬೆಳಗ್ಗಿಂದ ಬೆಳಗಿನವರೆಗೂ ಕದನ ಕಾದಾಟ ನೋಡಿ ನೋಡಿ ನನಗೂನೂ ಒಳಗೊಳಗೇ ತುಸಪುಸ ಪ್ರಾರಂಭವಾಯಿತು (ಜಿಂಗೂಲಿ. ೨೪).

**ತುಸಮುಸ** (ನಾ). (?) : ತುಸಮುಸವೆಂಬೀ ಶಬ್ದವನುಸುರುತ ಶಿವಭೂತಿ ಮುನಿಪನೇಕಾಗ್ರತೆಯಿಂ (ಭವ್ಯಾಮ್ಮ. ೩೭). 'ತುಷಮುಷ' ಪರಾ. [?]

**ತುಸವ** (ನಾ). ಒಬ್ಬಾತನ ಹೆಸರು (?) : ಪೂರಟಿ ಗೋಸಾಸಿಗರಾ ಮಱು ಧರ್ಮಾ ತುಸವನಿನ್ ಪಡೆದು (ಇಆ. VIII, ೨೮೫-೪; 706). [ ? ]

**ತುಸು$_1$** 'ತುಸ$_3$' ನೋ.

**ತುಸು$_2$** 'ತುಸಂ' ನೋ.

**ತುಸ್ತ** (ನಾ). ೧. ಸುಟ್ಟ ಅಥವಾ ಹುರಿದ ಮಾಂಸ ; ಸುಂಟಗೆ. ೨. ಸುಟ್ಟ ಅಥವಾ ಹುರಿದ ಮಾಂಸದ ಕರಿಕಾದ ಮೇಲ್ಪದರ. ೩. ಹಣ್ಣಿನ ತೊಗಟೆ. 'ಬುಸ್ತ' ಪರಾ. [ < ಸಂ. ಚುಸ್ತ ]

**ತುಹಿನ** (ಗು). ೧. ತಂಪಾದ ; ಶೀತಲವಾದ. 'ತುಹಿನಕಿರಣ' ಪರಾ. (ನಾ). ೨. ಮಂಜು ; ಹಿಮ : ಸರಸಮೃಣಾಳಿಕೆಯಂ ಮೃದುತರ ತುಹಿನಂ ಕೊರಗಿಪಂತೆ ಶಾಂತಿರಸಕ್ಕಾಗರಮೆನಿಪ ತಪಮೆ ನಿನ್ನಂ ಕೊರಗಿಸುತಿರೆ (ಕಾದಂಉ. ೫೫೫). ೩. ಬೆಳುದಿಂಗಳು ; ಚಂದ್ರಿಕೆ : ತುಹಿನ ಸದೃಶಕಾಂತಿಯಿಂದ ಶೋಭಾಯಮಾನವಾದುದಾಗಿ (ಜ್ಯೋತಿರ್ವಿ. ೨೧೧). ೪. ಕರ್ಪೂರ : " ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ ಹಿಮವಾಳುಕಂ ಚೀನಿ ತುಹಿನಂ ಪನ್ನೆಯಕ್ಕು" (ಮಂಗರಾ. ೯೯-೨೨). [ಸಂ.]

**ತುಹಿನಕಣ** (ನಾ). ಮಂಜಿನ ಸಣ್ಣ ಹನಿ ; ಹಿಮಬಿಂದು : ಚಂದ್ರಿಕೆಯಂ ಸೇವಿಸಿದ ಚಕೋರಕ್ಕೆ ಬಾಟಿತ್ತಿಯೋ ತುಹಿನಕಣಂ (ಪಂಪಾಮಾ. ೧೦-೪೦). [ ತುಹಿನ + ಕಣ$_3$ ]

**ತುಹಿನಕರ** (ನಾ). = ತುಷಾರಕರ: ದಿಗ್ನಾಯಕಚೂಡಾಮಣಿ ಲಗ್ನೋದಯ ಶಿಖರನೊಪ್ಪಿದಂ ತುಹಿನಕರಂ (ಅಜಿಪು. ೬-೪೧) ; ಇವರೆನ್ನ ಪುಣ್ಯಕೀರ್ತಿ ಪ್ರಭಾವನಧಿವರ್ಧನತುಹಿನಕರರೂಪರು (ಸಿದ್ಧರಾ. ೧-೨). [ ಸಂ. ]

**ತುಹಿನಕಿರಣ** (ನಾ). = ತುಷಾರಕರ : ಬೆಳಗುವ ಪಳಿಕಿನ ಸಱಿಯೊಂದು ... ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೧೫೦ ಶೂದ್ರಕ). [ ತುಹಿನ + ಕಿರಣ$_1$ ]

**ತುಹಿನಕ್ಷೋಣೀಧ್ರ** (ನಾ).=ತುಷಾರಾದ್ರಿ: ಎಲೆ ಇದಲ್ತೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳ್ (ಶಮುದ. ೫೭ ಪ್ರಯೋ). [ ತುಹಿನ + ಕ್ಷೋಣೀಧ್ರ ]

**ತುಹಿನಕ್ಷ್ಮಾಧರ** (ನಾ). =ತುಷಾರಾದ್ರಿ : ತುಹಿನಕ್ಷ್ಮಾಧರ ಜಾತಾಲೋಲೇಕ್ಷಣ ... ಜಯ ಸೂಕ್ಷ್ಮಾಕಾರಾ (ಉದ್ಭದೀ. ೩-೩). [ ತುಹಿನ + ಕ್ಷ್ಮಾಧರ ]

**ತುಹಿನಗಿರಿ** (ನಾ). = ತುಷಾರಾದ್ರಿ : ಬಳಸಿರ್ದಭ್ರಾಳಿಯಿಂದಂ ತುಹಿನಗಿರಿ ಶಿಲಾಪಟ್ಟವೆಂಬಂತೆ ಚೆಲ್ವಾದ ಲತಾಂತಂ (ಕಾದಂಪೂ. ೭೯); ಹೊಳೆಹೊಳೆವ ಕೋಕನದಪಂಕಿಗಳ ಬಣ್ಣಮುಜ್ವಲದಿಂದ್ರಚಾಪದಾಕಾರಮಂ ಸಂತತಂ ಪಳಿವಂತೆ ಕೊಳದೊಳಾರಾಜಿಸಿತು ತುಹಿನಗಿರಿರಾಜನಂದನೆಯ ಕಣ್ಗೆ (ಜೈಮಿಭಾ. ೧೫-೧೦). [ ತುಹಿನ + ಗಿರಿ$_1$ ]

**ತುಹಿನಗು** (ನಾ). = ತುಷಾರಕರ : ಅತಿಬಳ ತುಹಿನಗು ನಿರ್ಝರತತಿಯೆನಿಸಿದ ಮದ್ಗಿರೀಂದ್ರಮಂ ಚಂಡಕರದ್ಯುತಿ ಪುಗದು (ಚಂದ್ರಪು. ೫-೭೨). 'ತೀಕ್ಷ್ಣಗು' ಹೋ. [ ಸಂ. ]

**ತುಹಿನತೆ** (ನಾ). ತಂಪು ; ಚಳಿ ; ಶೈತ್ಯ : ಅದಱ ಗೌರವದ ಶುದ್ಧತೆಯ ತುಹಿನತೆಯ ಸವಿಗಂಪಿನ ಉರವಣೆಯ ಸೊಗಸಿಂಗೆ ಕಣ್ಮನಂ ದಣಿದು (ಸಿದ್ಧರಾ. ೬-೫೬). [ ಸಂ. ತುಹಿನತಾ ]

**ತುಹಿನದೀಧಿತಿ** (ನಾ). = ತುಹಿನಪ್ರದ್ಯೋತ : ಶರತ್ತುಹಿನದೀಧಿತಿಬಿಂಬ ವಿಡಂಬ ಕೀರ್ತಿ (ಎಕ. V, ಅರಸೀ. ೧೧೨-೪ : ಸು. 1100). [ತುಹಿನ + ದೀಧಿತಿ]

**ತುಹಿನಪವನ** (ನಾ). ತಂಪಾದ ಗಾಳಿ ; ತಂಗಾಳಿ : ನಿಜಸ್ವಾಂತೋತ್ಪಲಕ್ಕತ್ಯಧಿಕವಿಕಸನಶ್ರೀಯನಾದೇಯಕಾಯಂ ತನುಜಾತಂ ಸ್ವರ್ಣನಾಭಂ ತುಹಿನಪವನ ಸಂಸ್ಪರ್ಶದಂತೀಯೆ...ಅರಸುಗೆಯುತ್ತಿರ್ದನಾ ಪದ್ಮನಾಭಂ (ಚಂದ್ರಪು. ೨-೬೬). [ ತುಹಿನ + ಪವನ ]

**ತುಹಿನಪ್ರದ್ಯೋತ** (ನಾ). ತಂಪಾದ ಬೆಳಕನ್ನುಳ್ಳವನು ; ಚಂದ್ರ : ತುಹಿನಪ್ರದ್ಯೋತನುಂ ಶುಕ್ರನುಮೊಡನಿರೆ ಜಾಮಿತ್ರದೊಳ್ ಪುಣ್ಯಕಾಂತಾರಹಿತಂ ಮೋಕ್ಷ್ ಪುತ್ರಹೀನಂ (ಜಾತತಿ. ೨೧-೮). [ತುಹಿನ + ಪ್ರದ್ಯೋತ]

**ತುಹಿನಬಿಂದು** (ನಾ). = ತುಹಿನಕಣ : ಹಿಮಸಿಕ್ತಪತ್ರದಿಂ ಬಿಳ್ದುವು ತುಹಿನಬಿಂದು ತೋರಮಳೆಹನಿಗಳೋಲ್ (ಶ್ರೀರಾಮಾ. ೨೦೦-೦೭೭). [ತುಹಿನ + ಬಿಂದು]

**ತುಹಿನಭೂಮಿಧ್ರ** (ನಾ). = ತುಷಾರಾದ್ರಿ: ತುಹಿನಭೂಮಿಧ್ರಕ್ಕೆ ಸಾರ್ದಂ ಹರಪ್ರಿಯಂ (ಚಂದ್ರಪು. ೯-೬೭). [ ತುಹಿನ + ಭೂಮಿಧ್ರ ]

**ತುಹಿನಮಹೀಧರ** (ನಾ). = ತುಷಾರಾದ್ರಿ: ಕನಕಶಾಂತಿಕುಮಾರಂ...ಒಂದು ದೆವಸಂ ಕ್ರೀಡಾನಿಮಿತ್ತಂ ತುಹಿನಮಹೀಧರಕ್ಕೆ ಪೋಗಿ (ಶಾಂತಿಪು.೯-೧೭ ವ). [ ತುಹಿನ + ಮಹೀಧರ ]

**ತುಹಿನರ್ತು** (ನಾ). ಹೇಮಂತ ಋತು ; ಚಳಿಗಾಲ : ಹಬ್ಬಿ ತುಂತುರ್ ಮಂಜು, ಮುಬ್ಬಾಯ್ತು, ತುಹಿನರ್ತುಸಂಧ್ಯೆ ! (ಶ್ರೀರಾಮಾ. ೨೦೫-೨೯೬). [ ತುಹಿನ + ಋತು ]

**ತುಹಿನಶಿಖರಿ** (ನಾ). = ತುಷಾರಾದ್ರಿ : ಮೇಘಾವಳಿ ಕಱಗುಂ ತುಹಿನಶಿಖರಿಯಿಂ [ಪಾಠಾಂ. ಕಿರಣದಿಂ] ಗಂಗೆವರಂ (ಜಟ್ಟಮು. ೮-೨). [ ತುಹಿನ + ಶಿಖರಿ ]

**ತುಹಿನಾಂಶು** (ನಾ). = ತುಹಿನಕರ. 'ತುಹಿನಾಂಶುಬಿಂಬ' ಪರಾ. [ ತುಹಿನ + ಅಂಶು ]

**ತುಹಿನಾಂಶುಬಿಂಬ** (ನಾ). = ತುಹಿನಾಂಶುಮಂಡಳ : ಪೆಱದೆಗೆದ ತಮಂ ತಟ್ಟಿತ್ತೆಮೆದುಱುಗಲೆನಲ್ಪೂರ್ವದಿಗ್ವಧೂವದನಂ ಕಣ್ತೆಱೆದವೊಲದೇಂ ಬೆಳರ್ತುದೊ ಕೀಱಿದೆಡೆ ತುಹಿನಾಂಶುಬಿಂಬಮುದಯಿಪ ಪದದೊಳ್ (ಮಲ್ಲಿಪು. ೭-೨೭). [ ತುಹಿನಾಂಶು + ಬಿಂಬ ]

**ತುಹಿನಾಂಶುಮಂಡಳ** (ನಾ). ಚಂದ್ರಮಂಡಲ; ಚಂದ್ರಬಿಂಬ : ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂಡಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ (ಜಗವಿ. ೧೬-೧೩೫).
[ ತುಹಿನಾಂಶು + ಮಂಡಳ (= ಮಂಡಲ) ]

**ತುಹಿನಾಂಸು** (ನಾ). = ತುಹಿನಕರ: ಗುಣಾರ್ಣ[ವ]ತುಹಿನಾಂಸು ಶೋಭನನುದಾರದ ತಾಯ್ಮನೆ (ಸೌಇಇ. XX, ೭೬-೩೪ : 1118).
[ ℙ ಇದು 'ತುಹಿನಾಂಶು' ಎಂಬುದರ ಅಪಲಿಖಿತ ]

**ತುಹಿನಾಗಜೆ** (ನಾ). ಹಿಮವಂತನ ಮಗಳು; ಪಾರ್ವತಿ: ತುಹಿನಾಗಜಾರ್ಧಾಂಗ ... ಎಮ್ಮಯ ಕೃತಿಯ ಭೂಗಗನದಿಗ್ಭರಿತವಾಗಿ ಪಸರಿಸುವಿನಂ ಸಾಗಿಸುವುದಳ್ಕಱಿಂದೆ (ಭಾವಚಿಂ. ೧-೧). [ಸಂ. ತುಹಿನಾಗಜಾ]

**ತುಹಿನಾಚಲ, ತುಹಿನಾಚಳ** (ನಾ). = ತುಷಾರಾದ್ರಿ : ಕನಕನಿಭಪ್ರಭಾಂಘ್ರಿಯುಗನಂ ತುಹಿನಾಚಲವರ್ಣಮಧ್ಯದೇಹನಂ ... ಕಂಡು (ಪಂಚತಂ. ೧೬೦-೧): ನಿಜಶರೀರವಮಂ ಕೆಡಹಿ ತುಹಿನಾಚಲದೊಳು ಸಜ್ಜನರ ಗತಿವಡೆವೆಂ (ಜೈಮಿಭಾ. ೨೪-೭೬). ತುಹಿನಾಚಳ: ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡವಮಂ ಬಾಯ್ಕೊಳಿಸಿ ಬಂದು ವಿಜಯಕಟಕಂ ಬಿಡಿದು ತುಹಿನಾಚಳ ಸಿಂಧೂಪಾಂತದೊಳ್ ಬಿಟ್ಟರೆ (ಶಾಂತಿಪು. ೧೧-೫೬ ವ): ಸುಂದರ ತುಹಿನಾಚಳ ಸಂಕ್ರಂದನಗಜ ... ಯಶೋಭಾಸುರನೆಂದು ಮನಂಗೊಂಡು (ಸುಕುಮಾ. ೧-೫೭). [ತುಹಿನ + ಅಚಲ]

**ತುಹಿನಾಚಳ** 'ತುಹಿನಾಚಲ' ನೋ.

**ತುಹಿನಾದ್ರಿ** (ನಾ). = ತುಷಾರಾದ್ರಿ: ಭದ್ರಾಸನವಮಂ ಭುಜವಿಜಯದ್ರವಿಣಂಗವನಿಪತಿಗೆ ಕೊಟ್ಟೆಱಗೆ ಯಶೋಭದ್ರೈಕತಿರಸ್ಕೃತ ತುಹಿನಾದ್ರಿ ಜಗದ್ಬಂಧುಸಿಂಧುದೇವಿಯನರಸಂ ಪೋಗವೇಟ್ಟು (ಶಾಂತಿಪು. ೧೧-೫೭).
[ತುಹಿನ + ಅದ್ರಿ]

(ನಾ). ಶ್ರೇಷ್ಠವಾದ ಹಿಮಾದ್ರಿ: ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕಿನು ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ (ಪಂರಾಮಜ. ೭-೮೯). [ತುಹಿನ + ಅದ್ರಿ + ಇಂದ್ರ]

**ತುಹಿನೋದ್ಗತಿ** (ನಾ). ತಂಪಿನ ಏಳಿಗೆ; ಹೆಚ್ಚು ತಂಪು; ಶೈತ್ಯಾತಿಶಯ: ಸುತರಿಲ್ಲದ ಸಿರಿ ತುಹಿನೋದ್ಗತಿಯಿಲ್ಲದ ವಾರಿ... ಮೆಱೆದಪುದೇ (ಚಂದ್ರಪು. ೩-೪೩). [ತುಹಿನ + ಉದ್ಗತಿ]

**ತುಳ** 'ತುಲ' ನೋ.

**ತುಳಕಲು** 'ತುಱಿಕಲ್' ನೋ.

**ತುಳವೇಂದ್ರ** (ನಾ). ತುಳುವದೇಶದ ರಾಜ, ಒಡೆಯ: ತದ್ವಂಶೇ ದೇವಕೀ ಜಾನಿರ್ದಿದೀಪೇ ತಿಂಮಭೂಪತಿಃ ಯಶಸ್ವೀತುಳವೇಂದ್ರೇಷು ಯದೋಃ ಕೃಷ್ಣ ಇವಾನ್ವಯೇ (ಎಕ. VII, ಶಿವಮೊ. ೧-೧೩ ; 1513).
[ತುಳವ$_0$ (< ತುಳು) + ಇಂದ್ರ]

**ತುಳಸಿ** 'ತುಲಸಿ' ನೋ.

**ತುಳಸಿಕಟ್ಟೆ** 'ತುಲಸಿಕಟ್ಟೆ' ನೋ.

**ತುಳಸಿದಳ** (ನಾ). ತುಳಸಿಯ ಕುಡಿ, ಎಲೆ: ಹಸೆಯ ಮಗುವನು ಮೊನ್ನೆ ಬಂದವರು ನೋಡಿ... ಹಸಿ ತುಳಸಿದಳ ನೀರ ಒಣಬಾಯೊಳೂಡಿ (ಕಎಪು. ೪೪-೨). [ತುಳಸಿ (= ತುಲಸಿ) + ದಳ$_2$ (= ದಲ)]

**ತುಳಸಿಪೂಜೆ** 'ತುಲಸಿಪೂಜೆ' ನೋ.

**ತುಳಸಿಮಾಲೆ** 'ತುಲಸಿಮಾಲೆ' ನೋ.

**ತುಳಸೀಪತ್ರ** (ನಾ). ತುಳಸಿಯ ದಳ, ಎಲೆ: ತುಳಸೀಪತ್ರ ಸಂದೋಹದಿಂ ಮಾಧವಪಾದಾಂಭೋಜವಮಂ ಪೂಜಿಸಿ (ಯೂದಚಂ. ೧೫-೩೯); ತುಳಸೀಪತ್ರ-ಧಾರ್ಮಿಕ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳುದಾಗಿದೆ (ಭಾಹಬ್ಬ. ೧೫೭).
[ಸಂ. ತುಲಸೀಪತ್ರ]

**ತುಳಸೀಮಣಿ** 'ತುಲಸೀಮಣಿ' ನೋ.

**ತುಳಸೀಮಾಲೆ** (ನಾ). = ತುಲಸಿಮಾಲೆ: ಸಾಲ ಕೆಂಜೆಡೆ ವೀಣೆ ತುಳಸೀಮಾಲೆಯೊಪ್ಪುವ ಮುನಿವರೇಣ್ಯನು ಶೂಲಿ ಕಳುಹಲು ಬಂದ ನಾರದ (ಕೌಶಿರಾ. ೨೪-೮). [ಸಂ. ತುಲಸೀಮಾಲಾ]

**ತುಳಸೀವಿವಾಹ** 'ತುಲಸೀ ವಿವಾಹ' ನೋ.

**ತುಳಾಡಿ** (ನಾ). ಜಟ್ಟಿಕಾಳಗದ ಒಂದು ವರಸೆ: ತಡಕಿ ಕಕ್ಕವಡಂ ಮುಹಡಂ ತುಳಾಡಿ [ಪಾಠಾಂ. ಡಿ] ಸಂದಸುವಿಡಿವಟ್ಟಿಸಂ ಗುಣವಳುಂಬುಗೆ ... ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೫-೭೮); ಚಡಿಕಿ ತುಳಾಡಿ ಪೊಟ್ಟಮುಡುಹಂ ಮುಹಡಂ ದಣಾವಟ್ಟ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨-೫೭). [?]

**ತುಳಾಧರ** (ನಾ). ೧. ತಕ್ಕಡಿಯನ್ನು ಹಿಡಿದುಕೊಂಡಿರುವವನು: ಬಂಡಂಗಳ ಬೆಲೆಯುಂ ಚಿಂತಿಸುವಂ ತುಳಾಧರಂ ತೌಳಿನಿಳಯದಾದಿತ್ಯಾಂಶು (ಜಾತಕ. ೧೯-೧೯). ೨. ವ್ಯಾಪಾರಿ; ಬಣಜಿಗ. [ಸಂ. ತುಲಾಧರ]

**ತುಳಾಪುರುಷ** 'ತುಲಾಪುರುಷ' ನೋ.

**ತುಳಾಮಾನವಿಶುದ್ಧಿ** 'ತುಲಾಮಾನವಿಶುದ್ಧಿ' ನೋ.

**ತುಳಿ$_1$** 'ತುಱಿ$_1$' ನೋ.

**ತುಳಿ$_2$** 'ತುಱಿ$_2$' ನೋ.

**ತುಳಿ$_3$** (ನಾ). ತುಪ್ಪಟ (?): ಹಂಸೆಯ ತುಳಿಯ ಮೇಲಪ್ಪಾಸಿನಲಿ ಪವಡಿಸುವೀಕೆ ಇಂದೀಗ ... ಕಲುನೆಲದೊಳೊಱಗಿದಳು (ಕುವ್ಯಾಖ. ೯-೩೦).
[< ಸಂ. ತೂಲ ?]

**ತುಳಿತ** (ನಾ). ಕಾಲಿನಿಂದ ಮೆಟ್ಟುವಿಕೆ: ಆ ಭಸ್ಮವು ಪರಮೇಶ್ವರನ ಪಾದಗಳ ತುಳಿತದಿಂದ ಎದ್ದು ... ಆ ಪರಶಿವನ ಶರೀರವಂ ವ್ಯಾಪಿಸಿ (ಸೌಗಂಧಿ. ೩೪೧-೧೮). [ತುಳಿ$_1$ (< ತುಱಿ$_1$) + -ತ$_2$]

**ತುಳಿಯಾಳು** (ನಾ). ಶೂರನಾದ ಯೋಧ: ಕಾದುತಲಿಹ ತು [ಪಾಠಾಂ. ತ]ಳಿಯಾಳು ದೊರೆಕುಮಾರಕರ ಚಲವನಱಿತು ದಳಪತಿ ನಂಜರಾಜೇಂದ್ರ ಸಲೆ ಮನ್ನಿಯರೊಳಿಂತೆಂದ (ಕಂನವಿ. ೧೮-೧೪೯).
[ℙ ಇದು 'ತುಳಿಲಾಳು' ಎಂಬುದರ ಅಪಲಿಖಿತವಿರಬಹುದು.]

**ತುಳಿಯಿಸು** 'ತುಱಿಯಿಸು' ನೋ.

**ತುಳಿಲ್$_1$** 'ತುಱಿಲ್$_1$' ನೋ.

**ತುಳಿಲ್$_2$** 'ತುಱಿಲ್$_2$' ನೋ.

**ತುಳಿಲಾಳ್** 'ತುಱಿಲಾಳ್$_2$' ನೋ.

**ತುಳಿಲಾಳು$_1$** 'ತುಱಿಲಾಳ್$_1$' ನೋ.

**ತುಳಿಲಾಳು$_2$** 'ತುಱಿಲಾಳ್$_2$' ನೋ.

**ತುಳಿಲು$_1$** 'ತುಱಿಲ್$_1$' ನೋ.

**ತುಳಿಲು$_2$** 'ತುಱಿಲ್$_2$' ನೋ.

**ತುಳಿಲುಗೆಯ್** 'ತುಱಿಲ್ಗೆಯ್' ನೋ.

**ತುಳಿಲುಗೆಯಿ** 'ತುಱಿಲ್ಗೆಯ್' ನೋ.

**ತುಳಿಲ್ಗಾಣ್ಕೆ** (ನಾ). ಪ್ರಣಾಮಪೂರ್ವಕವಾಗಿ ಒಪ್ಪಿಸುವ ಕಾಣಿಕೆ; ಭಕ್ತಿಯಿಂದ ಕೊಡುವ ಕಾಣಿಕೆ: ಮರದ ತುದಿಹರೆಯ ಮೇಲಿರ್ದು ಕಿವಿಯಾದನ್, ಕುಟೀರದಿಂ ಪೊಣ್ಮುತಿರ್ದೊಂದೊಂದು ರವಕೆ ರೋಮಾಂಚನವೆ ತನ್ನ ಭಕ್ತಿಯ ತುಳಿಲ್ಗಾಣ್ಕೆಯುಪ್ಪಂತೆವೋಲ್ (ಶ್ರೀರಾಮಾ. ೪೭೮-೧೧೨). [ತುಳಿಲ್$_1$ (< ತುಱಿಲ್$_1$) + ಕಾಣ್ಕೆ]

**ತುಳಿಲ್ಗುಂದು** (ಕ್ರಿ). ಶಕ್ತಿಗುಂದು; ಬಲಹೀನವಾಗು: ಕಣ್ಗೆಟ್ಟು ಕಾಲ್ಗಾಣದಾದನಾ ಕಾಳ್ಗಿಚ್ಚಿಗಳ್ಕುತ ತುಳಿಲ್ಗುಂದಿ ನಾಲ್ಮೊಗಂ (ಭಾವಚಿಂ. ೩-೨೬).
[ತುಳಿಲ್$_2$ (< ತುಱಿಲ್$_2$) + ಕುಂದು$_1$]

**ತುಳಿಲ್ಗೆಯ್** 'ತುಱಿಲ್ಗೆಯ್' ನೋ.

**ತುಳಿಲ್ಗೆ₁** 'ತಂಟಿಲ್ಗೆಯ್' ನೋ.

**ತುಳಿಲ್ಗೊಳ್** 'ತುಟಿಲ್ಗೊಳಂ' ನೋ.

**ತುಳಿವೆಡೆ** (ನಾ). ಒಂದು ಬಗೆಯ ವಸ್ತ್ರ (?) : ಪೆಟ್ಟುವೆಡೆಗಳೊಳೆಲ್ಲಂ ಪಾಸಿ ಕಾರೋಹಣದ ಕ್ಕರವಟಿಯಿಗೆಯ ಚಿತ್ರಾವಟಿಯ ಪಳಿವೆಡೆಯ ತುಳಿವೆ [ಪಾಠಾಂ. ಲೆ] ಡೆಯ ನೆಳಲಪಾಣಿಯ ಬಣ್ಣದ ಕಣದ ಬಣ್ಣ ವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ತುಳಿಸು** 'ತುಟಿಯಿಸು' ನೋ.

**ತುಳು, ತುಲು, ತುಳುವ₁, ತುಟುವ** (ನಾ). ೧. ಕನ್ನಡನಾಡಿನ ಪಶ್ಚಿಮಕರಾವಳಿಯ ಒಂದು ಪ್ರದೇಶ : ಆಂಧ್ರ ದ್ರಾವಿಡ ಹೈವ ತುಳು ಮಲೆಯ ಕಲರ ಕಲಾಮೂಲ (ಎಕ. VII, ಶಿವಮೊ. ೭೯-೨೦ ; ಸು. 1154 ?). ೨. ತುಳು ದೇಶದ ಭಾಷೆ ; ದ್ರಾವಿಡಭಾಷೆಗಳಲ್ಲಿ ಒಂದಂ : ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು (ದ್ರಾವಿವಿ. ೧೪೧). △ **ತುಲು :** ೩. ತುಳು ದೇಶದವನು : ತೆಲುಗರು ತೆರುವ ಗ ೩.೨ ಪ ೫ ತುಲು ಮಳೆಯಾಲರು ತೆರುವ ಗ ೩.೨ ಪ ೫ (ಎಕ. XV, ಬೇಲೂರು. ೨೯೮-೭೨ ; 1278). **ತುಳುವ₁ :** ೧. ದ್ವಾರಾವತೀ ಪುರವರಾಧೀಸ್ವರಂ ತುಳುವಬಳಜಳಧಿ ಬಡಬಾನಳಂ (ಮೈಆರಿ. ೧೯೨೮, ೯-೨೧ ; 1183) ; ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳಂದು ಹೊಕ್ಕುದು ತುಳುವಪಡೆ ಕಡುಗಿ (ಕುವ್ಯಾಭೀ. ४-೩೩) ; ಈ ಗ್ರೀಕ್‌ಪ್ರಹಸನದ ದೃಶ್ಯ ತುಳುವದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರೂ ಊಹಿಸಿದ್ದಾರೆ (ದ್ರಾವಿವಿ. ೭೮). ೩. "ತುಳುವಂ ತುಳುವನಕ್ಕು" (ಮಂಗರಾ. ೧೧೨-೭) : ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳ ಬೇಕಣ್ಣ (ಭರಚ. ೧-೭). △ **ತುಟುವ :** ೩. ಬಟಿಕೀಶ್ವರನರಸಮುಖರ್ ತುಟಿಲಾಳ್ಗಳ್ ದೊರೆಗಳೆನಿಸಿ ತೊಲಗಿದರೈವರ್ ತುಟುವರ್ (ಚಕವಿ. ೨-೧೪).

[ದೇ.॥ ತಮಿ. ತುಳು. ತುಳು. ತುಳುವ ; ಮಲ. ತೆಲು. ತುಳು]

**ತುಳುಂಕಾಡು, ತುಳುಕಾಡು, ತುಳ್ಕಾಡು** (ಕ್ರಿ). ೧. (ನೀರಂ ಮೊದಲಾದುವು) ಹೊರಹೊಮ್ಮು, – ಉಕ್ಕಿ ಹರಿ, – ಹೊರಸೂಸು : ವಜ್ರವೈಡೂರ್ಯಶಿಲಾಪಟ್ಟಕಂಗಳವಿರಳದೀಧಿತಿಯ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೧೬-೩೪ ವ) ; ನೆರೆದ ಪುರಜನದ ಸಂಭ್ರಮಂಗಳಿನಾ ಪುರದ ಕ್ಷೋಭಂ . . . ತೆಕ್ಕನೆ ತೀವಿ ತುಳುಂಕಾಡುತಿರ್ದುದು (ಅನಂಪು. ೯-೫೯ ವ). ೨. ಕದಡು ; ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮರುತ್ತರಂಗಿಣಿ ಮಟಲ್ತೋಜಲ್ ತುಳುಂಕಾಡೆ (ದಶಕು. ೩-೫). ೩. (ನೀರನ್ನು) ಚಿಮುಕಿಸು,– ಎರಚು : ಅನಂತರಂ ತುಮುಲಕೇಳಿಯಿಂದೋರೋರ್ವರಂ ತುಳುಂಕಾಡುವಾಗಳ್ (ಚಂದ್ರಪು. ೭-೧४೨ ವ). ೪. ಮುಳುಗಿ ಏಳು ; ಓಲಾಡು : ಕೊಳಂಗಳೊಳ್ ತುಳುಂಕಾಡುವ ಬಾಳೆ . . . ನೋಡುವರಟ್ಟಿಯನುಂಟು ಮಾಡುಗುಂ (ಶಬ್ದಾನು. ೯೬ ಪ್ರಯೋ). **ತುಳುಕಾಡು :** ೧. ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ (ಬಸವ. ೬೩४) ; ದರಹಸಿತ ಸಿತಕಾಂತಿ ಮುಖಪಂಕೇರುಹದೊಳು ತುಳುಕಾಡೆ (ಬಸಪು. ೫೨-೩೯) ; ಕರುಣರಸ ತುಳುಕಾಡೆ ಕಪಿಕುಂಜರನ ಕಂಜದಳಾಯತಾಕ್ಷನು ಬರಸೆಳೆದು ಬಿಗಿಯಪ್ಪಿದನು (ತೊರರಾ. ४-೭-४) ; ತುಳುಕಾಡಿತಾ ನಾಡ ಸಿರಿ (ಜೈಮಿಭಾ. ೨೯-೧೨) ; ತುಳುಕ್ಯಾಡತಾವ ತೂಕಡಿಕೆ (ಗಂಗಾತ. ೭೦-೩) ; ಆವೇಶ ತುಳುಕಾಡುತ್ತದೆ (ಶಿಕ್ಷದ. ೧೧೩). ೨. ಅಬುಜಭವಾಂಡಘಟ ಬಿರಿಯೆ ವನಧಿಗಳು ತುಳುಕಾಡೆ . . . ಬೊಬ್ಬಿಱಿದುಬ್ಬಿದನು ರಘುಜ (ತೊರರಾ. ೩-೬-೭). ೪. ಯಶೋದೆ ರಾಗರಸಾಬ್ಧಿಯೊಳ್ತುಳುಕಾಡೆ . . . ಮುರಾರಿ ಕೈಪಱಿಗಾಡಿದಂ (ಜಗವಿ. ೩-೫೭). **ತುಳ್ಕಾಡು :** ೨. ಪೌರ್ವಿಲತಾಸ್ಫಾಲನಂಗೆಯ್ಯೆ . . . ವ್ಯೋಮಗಂಗಾಸಲಿಲಂ ತುಳ್ಕಾಡೆ (ಜಗವಿ. ೮-೫೦) : ಬಹು ಚರಣದಾಟಕೆ ನೆಲ ನಡುಗುತಿರೆ ವಾರಿನಿಧಿ ಬೆಂಬಳಿಯಲುಱಿ ತುಳ್ಕಾಡಿ ತಾಂಡವವಾಡಿದನು ಸುರಪ (ಸಾಳ್ವಭಾ. ೩೩-೧೦४). ೩. ನವನಾಳಿಕೇರ ರಸಪೂರಮುಂ ತುಳ್ಕಾಡಿ . . . ಪೊಟ್ಟುಗಳೆವುದು ನೃಪನ ಪೆಂಡವಾಸಂ (ಪುಷ್ಪಪು. ೨-४४). [ತುಳುಂಕು₁ + ಆಡು₁]

**ತುಳುಂಕು₁, ತುಳುಕು, ತುಳ್ಕು** (ಕ್ರಿ). ೧. ತುಂಬಿ ಹೊರಸೂಸು – ಹೊರಹೊಮ್ಮು : ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ (ಪಂಪಭಾ. ೭-೫ ವ) ; ಸ್ಮರರಾಗಾಮೃತಮುಂ ತುಳುಂಕಿ (ಅರ್ಧನೇ. ೨-೭೮) ; ದರಹಾಸಂ ಮುಖದಿಂ ತುಳುಂಕುತಿರೆ (ಕುಸುಮಜ. ೧೨-೭೯) : ಗಾನರಸವಾರ್ಧಿಯುನ್ನೆದೆ ತುಳುಂಕುವಾ ಲಸದ್ವೇಣು ವಿಂಚರಗಳನೆ ಪೊಣ್ಮಿಪ ಮೋಹನರೂಪದಂಗನಾಶ್ರೇಣಿ ವಿರಾಜಿಕುಂ (ಉದ್ಭಟ. ೧-೭೮) ; ಪೊಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ದುದು ಕೃತಿಯಂ (ರಾಜಶೇ. ೧-೫೨). ೨. ಕದಡು ; ಕ್ಷೋಭೆಗೊಳ್ಳು : ಜಳಧಿಯ ನೀರ್ ತುಳುಂಕಿದವು ಧಾತ್ರಿ ತಿಱ್ಱಂದಿಱಿದತ್ತು (ಮಹಾನೇ. ೧೧-೧೨೯). ೩. ಕ್ಷೋಭೆಗೊಳಿಸು ; ಕದಡುವಂತೆ ಮಾಡು : ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ದು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಂ (ಪಂಪಭಾ. ೨-೩೨ ವ). ೪. ಚಿಮುಕಿಸು ; ಎರಚು ; ಸಿಂಪಡಿಸು : "ತುಳುಕು, ತುಳುಂಕು – ಸೇಚನೇ" (ಶಮಧಾ) : ವಾರಸ್ತ್ರೀಜನವಿದಿರೊಳ್ ತುಳುಂಕೆ ನೀರಂ ನೀರಧ್ರುಸ್ತನತಟದೊಳ್ ಕೃತೋಪಹಾರಂ ಹಾರಶ್ರೀಗೆಣೆಯೆನಿಸಿತ್ತು ಮಾಕಣೌಘಂ (ಕಾವ್ಯಾವ. ೫-४೮) ; ನಾಡೆ ಮುಳುಂಗಿ ಮೂಡಿದರಜಾಂಬು ತುಳುಂಕಿದರಂಬುಮಂ (ಹವಿಪ್ಕಾರ. ४-೨೭). ೫. ಚೆಲ್ಲು ; ಒಗೆ ; ಬಿಸುಡು ; ಹೊರಹಾಕು : ಮುಗಿಲ ನೀರಂ ನಚ್ಚಿ ಡೋಣಿಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೬೮-೮). **ತುಳುಕು :** ೧. ಅನುರಾಗ ರಸಂ ಕಟಾಕ್ಷದಿಂ ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ (ಜಗವಿ. ೧४-೧೦೩) ; ವೀರಭಕ್ತನ ಪದನಿಹತಿಗೆ ಶಿರೋರುಗಂಗಾವಾರಿ ತುಳುಕಿಯಪಾರ ಪಾದೋದಕವೆನಿಸಿ (ಬಸಪು. ೧೮-४೮) ; ಹೃದಯಶಿಖಿಯುಱಿ ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ (ಕುವ್ಯಾದ್ರೋ. ೭-೮) : ಸಲೆ ಮೋಹರಸ ವಧಿಕ ಭಕ್ತಿರಸವೊಡವೆರದು ತುಳುಕಲ್ (ಚಬಪು. ೬-४) : ಅಶ್ರು ನಯನ ದೊಳ್ತುಳುಕೆ (ಜೈಮಿಭಾ ೧೮-೫೨) : ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦) : ತುಂಬಿದ ಕೊಡ ತುಳುಕುವುದಿಲ್ಲ (ಗಾದ). ೨. ಧರೆಯೊಗ್ಗುಡಿಸಲಿ ಶರನಿಧಿ ತುಳುಕಲಿ (ದೀಕ್ಷಾಬೋ. ೯೧-೧೫) ; ವಿಕಲ್ಪಬಿಂದುಗೆ . . . ತುಳುಂಕಿದಂ, ತುಳುಕಿದಂ (ಶಮದ. ೩೬ ಪ್ರಯೋ) : ನೆಳಲು ಸುಳಿಯಲು ದಂತಿಯೊಂದಪ್ಪಳಿಸೆ ವಾಸುಕಿ ನೊಂದನಬುಧಿ ತುಳುಕಿದವು (ಕುವ್ಯಾದ್ರೋ. ೩-೦४) ; ಜಲಚರ ಗಳಟ್ಟುಳಿಗೆ ತುಳುಕಿ ಮೇಲಕೇಳ್ವ ಬಲುಸೀರ್ಪನಿಗಳ ಮೊತ್ತದಿಂದಂಬುಧಿ ಯಳವಟ್ಟು ಮೆಱಿದುದಳ್ತಿಯಲಿ (ಕಂನವಿ. ४-೨೩). ೪. ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶುರುಚಿಯನಿರ್ಕುಟಿಗೊಳೆ (ಆದಿಪು. ೧४-೧೦೮) ; ಕರತಳವಾರಿ ತಳ್ತು . . . ತನೂದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ (ಜಗವಿ. ೧४-೯೮). ೫. ನಿನ್ನ ರಕುತವ ತುಳುಕುವೆನು ಹಿಂದಿಕ್ಕಿಕೊಂಬನ ತೋಱು ತೋಱಿಸುತ...ಕೈಮಾಡಿದನು (ಕುವ್ಯಾಕ. ೧೨-೨४) ; ಮಳೆಯ ಮುಗಿಲ ನೋಡಿ ಮನೆಯೊಳಗಿರ್ದುದಕವ ತುಳುಕುವ ಕಡು ಹೆಡ್ಡರಂತೆ (ನೇಮಿಸಂ. ೩४-೩೨). ೬. (ಬಾಣ ಮೊದಲಾದ ಆಯುಧಗಳನ್ನು ಎದುರಾಳಿಯ ಮೇಲೆ) ಎಸೆ,—ಪ್ರಯೋಗಿಸು : ಶರಾಳಿಯ ತುಳುಕಿ ಹೊಕ್ಕನು ಸತ್ಯಜಿತು (ಕುವ್ಯಾದ್ರೋ. ೨-४೩) ; ತುಳುಕಿ

ವನೂನ ಶರಜಾಲಮಂ ಕರಿತುರಗರಥ ಪದಾತಿಗಳ ಸಂದಣಿ ದಣಿಯುಲು (ಕ್ರಿಮಿಥಾ. ೪-೪೩): ಬಿಲ್ಗೊಂಡು ದಿವ್ಯಾಸ್ತ್ರಮಂ ತುಳುಕಿದನು ರೆಘೋಂಕರಿ ಸುತ (ತುರಂಗ. ೮೫-೨೮). ೭. ಸೇರಿಸು ; ಹೂಡು ; ಸಂಧಾನಮಾಡು : ಸೆಳೆದನಿಷುಧಿಯುಲಂಬ ತಿರುವಿಗೆ ತುಳುಕಿ ಕೋಲನು ಕೋಡಕೈಯಿಂದಳವಿಗೊಯ್ಯನೆ ನಿಲುಕಿದನು ನಿಗುರಿದ ಶರೀರದಲಿ (ತೊರರಾ. ೩-೮-೬೯). ತುಳ್ಕು : ೧. "ಸೂಸಿದುದೆಸೆ ತುಳ್ಕಿತೆಂಬುದು" (ರನ್ನಕಂ. ೭) : ಚಾರುವೀರಭಟಕೋಟಿಗೆ ರಾಗರಸಂ ಪೊದೞ್ದು ತುಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ (ಪಂಪಭಾ. ೮-೯೨) : ತುಳ್ಕಿದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ ತುಳ್ಕೆ (ಜಗವಿ. ೧೪-೧೦೩); ಕಂಗೊಳಿಸಿತ್ತಾ ತುಂಗಭದ್ರೆ ತುಳ್ಕುತೆ ಸೊಗಸಂ (ಉದ್ಭಟ. ೩-೮೨). ೨. ನೆಲನಂ ನುಂಗಲುಮಂಬುಧಿ ಜಲಮಂ ತವೆ ತುಳ್ಕಲುಂ . . . ಒಡರ್ಚಿದಂ ಚಕ್ರಧರಂ (ಕಾವ್ಯಾವ. ೧೦೮) ; ಕಡಲೇೞುಂ ಕದಡೆೞ್ದು ತುಳ್ಕೆ (ರಾಜಶೇ. ೬-೦೧). ೪. ಸವತಿಯ ಮೇಲೆ ಮುಂ ತುಳುಕಿ ತನ್ನಯ ಮೇಲಧಿಪಂ ಬೞಿಕ್ಕೆ ತುಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆ (ಜಗವಿ. ೦೪-೦೦೦) ; ಕೊಳ್ಕೊಳ್ಳೆಂದೊಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂಗಳ್ಕೊಳೆ (ಶಮದ. ೨೩೦ ಪ್ರಯೋ). ೫. ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಮೆಂತು ಮಪ್ಪಳಿಸಿ ಕೊಂದಪೆಂ (ಪಂಪಭಾ. ೧೩-೮೦) ; ಬೇಸಱೊಳ್ ತುಳ್ಕಿದ ಳೊರ್ಮೆಯ ಕಣ್ಣನೀರ್ಗಳಂ (ಶೃಂಗಾರ. ೩-೫೮) : ತುಳ್ಕುತಿರ್ಪುದಂ ನೆತ್ರರೆಲ್ಲರಂ ಕರೆಗೆ (ಕಾಲೂರ. ೧೬೧-೩೫೫). ೬. ಇಂತಿರದೆ ಮೊದಲಿಸಿ ಸಮ್ಮುಖವಾಗಿ ತುಳ್ಕಿದರ್ ಶರವರುಷಮಂ (ಚಬಪು. ೨೪-೧೭). ೮. ಹುಟ್ಟು ; ಮೂಡು ; ಉಂಟಾಗು : ಮದಕರಿಕುಳಮೋವದೆ ಬಳ್ವಾಯ್ದುಗೞ್ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ (ಶಾಂತಿಪು. ೯-೦೪೦) ; ವಸುಮತಿಗೆ ಕೆನ್ನೀತರ್ುಳ್ಕೆ ತುಳ್ಕಿದಂ ಕೈಗೆಡದೆ ಸಾಯಕ ಸಮುದ್ರಮಂ ಶಾರ್ಙ್ಗಿ ಬಳಿಕ (ಚಬಪು. ೪೯-೪೧).

[ದೇ.॥ ತಮಿ. ತುಳಱ್ಕು, ತುಳಕ್ಕು, ತುಳುಮ್ಬು ; ಮಲ. ತುಳುಮ್ಬು; ತೆಲು. ತೊಲುಕು, ತೊನಕು ; ಪರ್ಜಿ. ತೊಲ್ಕ್ ]

ತುಳುಂಕು₂, ತುೞುಂಕು₂ (ನಾ). ಹೊರಸೂಸುವಿಕೆ ; ಹೊರಹೊಮ್ಮುವಿಕೆ. 'ತುಳುಂಕಂಗುಟ್ಟು' ಪರಾ. ತುಳುಕು₂. 'ದೊಂಬಿದುಳುಂಕು' ಪರಾ.

[ < ತುಳುಂಕು₁. / ತಮಿ. ತುಳಕ್ಕು ; ಮಲ. ತುಳಣ್ಣು ]

ತುಳುಂಕುಗುಟ್ಟು (ಕ್ರಿ). ಅತಿಶಯವಾಗಿ ತುಳುಂಕಂ ; ಹೆಚ್ಚಾಗಿ ಹೊರಸೂಸು : ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮೆ ತೀವಿ ತುಳುಂಕುಗುಟ್ಟಿ ... ಅತ್ಯಾಶ್ಚರ್ಯಮಂ ಮಾಡಿದಾಗಳ್ (ಆದಿಪು. ೭-೧೨೫ ವ).

[ ತುಳುಂಕು₂ + ಕುಟ್ಟು₁ ]

ತುಳುಂಕುದುಂಬು (ಕ್ರಿ). ಹೊರಚೆಲ್ಲುವಂತೆ ಭರ್ತಿಮಾಡು ; ತುಳುಂಕು ವಷ್ಟು ತುಂಬು : ನಿನ್ನ ಬಟ್ಟಲನ್ನು ತುಳುಂಕುದುಂಬಿ ಜನ್ಮ ಸಾರ್ಥಕ ಮಾಡಿಕೊಳ್ಳುವೆನು (ಬಿಟ್ಕಅ. ೯೮-೧). [ ತುಳುಂಕು₁ + ತುಂಬು₁ ]

ತುಳುಕಾಡು 'ತುಳುಂಕಾಡು' ನೋ.

ತುಳುಕಿಸು (ಕ್ರಿ). ಹೊರಸೂಸು; ಹೊರಚೆಲ್ಲು : ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಬಾಲಿ (ಮಣ್ಣುಹೆ. ೯೫).

[ ತುಳುಕು₁ ( < ತುಳುಂಕು₁ ) + - ಇಸು₃ ]

ತುಳುಕು₁ 'ತುಳುಂಕು₁' ನೋ.

ತುಳುಕು₂ 'ತುಳುಂಕು₂' ನೋ.

ತುಳುಕುನೀರಾಡು (ಕ್ರಿ). ನೀರನ್ನು ಚಿಮುಕಿಸಿ ಆಟವಾಡು,-ಕ್ರೀಡಿಸು: ಧೊಮ್ಮಳಿಸಿ ತುಳುಕುನೀರಾಡಿದಂ (ಸುಳುಮಾ. ೯-೪೩).

[ ತುಳುಕು₁ ( < ತುಳುಂಕು₁) + ನೀರ್₁ + ಆಡು₁ ]

ತುಳುಕುವರಿಗೆ (ನಾ). ಒಂದು ಬಗೆಯ ಗುರಾಣಿ (?) : ತುಳುಕುವರಿಗೆಯುಗುಳವ ವಜ್ರದ [ದಿ] ನಲಗ ಮುಱಿಯೊಡೆಯೆಚ್ಚು ಜೋದರ ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ (ಕುವ್ಯಾದ್ರೋ. ಓರಿಇ. ಪರಿ. ೨೮೯).

[ ತುಳುಕು ? + ವರಿಗೆ₃ ]

ತುಳುಕೆವಟ್ಟು 'ತುಡುಕೆವಟ್ಟು' ನೋ.

ತುಳುಗತ್ತಿ, ತುಳುವಕತ್ತಿ (ನಾ). ಈಳಿಗೆ ; ಮೆಟ್ಟುಗತ್ತಿ ; "ಈಲಿ, ಕರವಾಲಿಕೆ " (ನಾಚಿರಾ. ೬). ತುಳುವಕತ್ತಿ : "ಈಳೀ. ಕರವಾಳಿಕಾ, ೨ ತುಳುವಕತ್ತಿ ... ಈಳಿಗೆಕತ್ತಿ" (ಸಿದ್ಧಾಂತಿ. ೨೨೮). [ ತುಳು ? + ಕತ್ತಿ ]

ತುಳುನಾಡು (ನಾ). = ತುಳು ೧ : ತುಳುನಾಡ ಸತ್ತ ಮನೆಯಂತೆ ಪಟಬುಸುವರ್ ...ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೮೧) ; ಈ ತುರವರನಾಡೇ ನಮ್ಮ ತುಳುನಾಡೆಂದು ನಿರ್ಧರಿಸಲು ಅನೇಕ ಕಾರಣಗಳುಂಟು (ತುಳುನಾ. ೧೩). [ತುಳು+ನಾಡು]

ತುಳುವ₁ 'ತುಳು' ನೋ.

ತುಳುವ₂ (ನಾ). (ಕರಾ) ೧. ಮೃದುವಾದುದು; ಮೆದುವಾದುದು. 'ತುಳುವಗಾಯ್' ಪರಾ. ೨. ಒಂದು ಬಗೆಯ ಹಲಸಿನ ಹಣ್ಣು : ಬಹಳ ಮೃದುವಾದ ಹಲಸು. [←ತುಳು. ತುಳುವೆ]

ತುಳುವಕತ್ತಿ 'ತುಳುಗತ್ತಿ' ನೋ.

ತುಳುವಗಾಯ್ (ನಾ). (ಹೀರೆಯ ಕಾಯಿಯಿಂದ ಮಾಡುವ) ಒಂದು ಬಗೆಯ ಖಾದ್ಯ : ಕೆಲವ ನವಜಿಹ್ವೆಯ ಸೊದೆಯ ಕೆಲವ ತುಳುವಗಾಯುಂ ಕೆಲವ ಶೂಲ್ಯಕವನು ... ಮಾಡಿ ಹಲವು ಚಂದದೊಳು ಹೀರೆಯಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೫-೭).

[ ತುಳುವ₂ + ಕಾಯ್₄ ]

ತುಳುವಬದನೆಕಾಯ್ (ನಾ). ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಖಾದ್ಯ : ಹದನಾದ ಬದನೆಯ ಕಾಯ ಹೊದಟಿ ವಗ್ಗರಣೆಯುಂ ಮಾಡಿ ಪರಿಮಳವಿಕ್ಕಲದು ತುಳುವಬದನೆಕಾಯ್ವೆಸರಾದುದು (ಸೂಪಶಾ. ೪-೭). [ ತುಳುವ₂ + ಬದನೆಕಾಯ್ ]

ತುಳ್ಕಾಡು 'ತುಳುಂಕಾಡು' ನೋ.

ತುಳ್ಕು 'ತುಳುಂಕು₁' ನೋ.

ತುಳ್ಕುವೊಳೆ (ನಾ). ತುಂಬಿ ತುಳುಂಕಾಡುತ್ತಿರುವ ಹೊಳೆ,-ನದಿ : ಮುಸಗಿತು ತುಂಬಿ ತುಳ್ಕುವೊಳೆ ಕಾರ್ಮುಗಿಲಪ್ಪಳಿಪಂತೆ (ಚಳವಿ. ೨-೧೦೬).

[ ತುಳ್ಕು ( < ತುಳುಂಕು₁) + ಪೊಳೆ₃ ( < ಪೊೞ₁) ]

ತುಳ್ದಿಲ್ಕಾಲ್ 'ತುಟ್ದಿಲ್ಗಾಲ್' ನೋ.

ತುಳ್ಳಾಡು (ಕ್ರಿ). ೧. ಹೊರಳಾಡು ; ಉರುಳಾಡು. ೨. ಜಿಗಿದಾಡು ; ನೆಗೆದಾಡು ; ಕುಣಿದಾಡು : ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ (ಗಾದೆ). [ ತುಳ್ಳು + ಆಡು₁ ]

ತುಳ್ಳು (ಕ್ರಿ). ೧. ಉರುಳು ; ಹೊರಳು. ೨. ಜಿಗಿ ; ನೆಗೆ ; ಹಾರು ; ಕುಣಿ. 'ತುಳ್ಳಾಡು' ಪರಾ.

[ದೇ. ॥ ತಮಿ. ಮಲ. ತುಳು. ತೆಲು. ತುಳ್ಳು ; ಕೊಡ. ತುಳ್ಳ್ ]

ತುಱಿ, ತುಱಿ₃ (ನಾ). ೧. ಕಡಿತ ; ಕೆರೆತ ; ನವೆ ; ತಿಂಡಿ (ಉಕ). 'ತುಱಿಸು' ಪರಾ. ೨. ಒಂದು ಬಗೆಯ ಚರ್ಮರೋಗ: " ಕಂಡೂಃ, ಖರ್ಜೂಃ, ಕಂಡೂಯಾ ಈ ೩ ತುಱಿ " (ನಾಚಿರಾ. ೧೨೦) ; ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಮುಂಡೆ ಕುಗ್ಗಿದ ದೇಹಂ (ಧರ್ಮಾಮೃ. ೭-೨೨೪) ; ತುಱಿಯ ಮೇಲೆ ಉಗುರನಿಕ್ಕಿದರೆ ಹಿತವಾಗಿಹುದು (ಸಿದ್ಧೇವ. ೪೧-೧೦೨) : ಆ ರೂಪಂ ಪಲ್ಲಟಿಸಿ ಕೆರಕುಂ ತುಱಿಯುಂ... ಗುಂಡವೇಷಂ ತನಗಮರೆ (ಬಂಹರಿ.೯-೩೦ ವ). ೩. ಕಾಮಾಸಕ್ತಿ ; ವಿಷಯಾಭಿಲಾಷೆ ; ಕಾಮಲಂಪಟತೆ. 'ತುಱಿಪ' ಪರಾ. ತುಱಿ₃ :

೨. ಮೈಯೆಲ್ಲಾ ತುರಿ, ಕಜ್ಜಿ ತುಂಬಿತ್ತು (ನೀತಿಚಿಂ. I, ೨೮) ; ತುರಿಯಿದ್ದವಗೆ ನಾಚಿಕೆಯಿಲ್ಲ, ಮರೆಯಿದ್ದವಗೆ ಮಂದತ್ವವಿಲ್ಲ (ಗಾದ).

[ ದೇ. ॥ ತಮಿ. ತುರುತ್ತೈ, ಚೊಱಿ; ಮಲ. ಚೊಱಿ ; ತೆಲು. ದುರದ]

**ತುಱಿಕೆ, ತುರಿಕೆ** (ನಾ). ೧. = ತುಱಿ ೨ : (ಕ). **ತುರಿಕೆ :** ೧. ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೫೭-೨೩). ೨. ಒಂದು ಬಗೆಯ ಗಿಡ : ತುರಿಕೆ, ಸುರುಸುರಿಕೆ (ಪ್ರ್ಮಿಔ. ೩೯-೭೭೦). 'ತುಱುಂಚಿ' ಪರಾ. [ ತುಱ್ + -ಕೆ ]

**ತುಱಿಗ** (ನಾ). ತುರಿರೋಗದಿಂದ ಪೀಡಿತನಾದ ವ್ಯಕ್ತಿ : ತುಱಿಗರ ತೊನ್ನರ . . . ಮುಟ್ಟಲಕ್ಕುಮೊ ಸೂಳೆಯರಂ (ಶ್ರಾವಕಾ. ೧೨೨-೫).

[ ತುಱ್ + – ಗ$_2$ ]

**ತುಱಿಚ** 'ತುಱುಂಚಿ' ನೋ.

**ತುಱಿಚಿ** 'ತುಱುಂಚಿ' ನೋ.

**ತುಱಿಪ** (ನಾ). ಕಾಮಾತುರತೆ ; ಬೆದೆ. 'ತುಱಿಪಗಾಱ' ಪರಾ.

[ ತುಱ್ + – ಪ$_2$ ]

**ತುಱಿಪಗಾರ್ತಿ** (ನಾ). ಕಾಮಾತುರೆ ; ಕಾಮುಕಿ : ಮಾನವಮದನನಂ ಕಂಡು ಕೈಗಱಿಯೆ ಕಣ್ಸೋಲ್ತು ಕಾಮುಕಾತರೆಯಾಗಿ ತುಱಿಪಗಾರ್ತಿ ಕೂರ್ತರ್ನಿ ನಿತ್ತರಿಸಲಾಱದೆ...ಮೋಲ್ವಾಯ್ದು (ಲೀಲಾವ. ೧೪-೧೦೪ ವ).

[ ತುಱಿಪಗಾಱ + – ತಿ$_1$ (< – ಇತ್ತಿ) ]

**ತುಱಿಪಗಾಱ** (ನಾ). ಕಾಮಾಸಕ್ತನಾದವನು ; ವಿಷಯಲಂಪಟ. 'ತುಱಿಪಗಾರ್ತಿ' ಪರಾ. [ ತುಱಿಪ + -ಕಾಱ ]

**ತುಱಿಸು, ತುರಿಸು** (ಕ್ರಿ). ೧. ಮೈಯಲ್ಲಿ ಕಡಿತ ಹೋಗುವಂತೆ ಕೆರೆ : "ತುಱಿಸು–ಕಂಡೂತಿಕರ್ಷಣೇ" (ಶಮಧಾ) : ಪಲ್ಲಂ ಸುಲಿವೊಡಂ ಕಿವಿ ಕೀಂಟೊಡೆ ತುಱಿಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು (ಪಂಚತಂ. ೩೪-೧೪) ; ಹಾವಿನ ಹೆಡೆಗಳ ಕೊಂಡು ಕನ್ನೆಯು ತುಱಿಸುವಂತೆ (ಬಸವ. ೬೬೧); ಹೆಡತಲೆಯು ತುಱಿಸುವರೆ ಹಾವಿನ ಹೆಡೆಯೊಳಕಟಾ(ಕುವ್ಯಾಸ. ೧೪-೩೭); ಇನಿಸು ತಲೆಯು ತುಱಿಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಮ್ಯಕ್ತ್ವ. ೫-೧೯). ೨. ತಿವಿ; ಚುಚ್ಚು: ಆವೋಪಳನರಸಂ ಮಕರಂದನಂ ತುಱಿಸಿ ತೋಱುತ್ತಂ ಪೋಪಾಗಳ್ (ಲೀಲಾವ. ೨-೩೭ ವ). **ತುರಿಸು :** ೧. ಕುಸುಮೆಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ (ಪಹಾರ.೨೩ ).

ತುಱಿಸಿಕೊಳು, ತುರಿಸಿಕೊಳ್ಳು = ಕೆರೆದುಕೊಳ್ಳು: ಇಱಿಸಿಕೊಳುತಂ ತುಱಿಸಿಕೊಳುತ ಕೊಱಿಯಿಸಿಕೊಳುತೆ...ತೆರಳುತುರುಳುತುಂ (ಸಾನಂಚ. ೪-೨೦೧): ತುಱಿಸಿಕೊಳುತಿದ್ದೆಸೆಯ ಬದಿಗಳ ಹೊಱಗನಾಲಿಸುತ...ಇರ್ದನಾ ಹನುಮ (ತೊರರಾ. ೫-೫-೨): ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೫೭-೨೩) : ಕೊಳ್ಳಿಯಿಂದ ತಲೆ ತುರಿಸಿಕೊಂಡ ಹಾಗೆ (ಗಾದೆ). [ತುಱ್ + – ಸು$_1$]

**ತುಱಿಹಿಡಿ** (ಕ್ರಿ). ತುರಿಯುಂಟಾಗು; ತುರಿಯೆಂಬ ಚರ್ಮರೋಗ ಅಂಟು : "ಪ್ರಸರ, ವಿಸರ್ಪಣ—ಚಿಬ್ಬು, ತುಱಿಹಿಡಿವುದು" (ನಾಚಿರಾ. ಕಿ.

[ತುಱ್ + ಹಿಡಿ$_1$ (< ಪಿಡಿ$_1$)]

**ತುಱು, ತುರು, ತೊಱು** (ನಾ). ೧. ಹಸು; ದನ; ಆವು; ಗೋವು : "ತುಱುಗಳೆನಲ್ಕಾಕಳೆಂದು ತಿಳಿಗೆ" (ಭಾರನಿ. ೪೬). 'ತುಱುಗಾಱ' ಪರಾ. ೨. ದನಗಳ ಗುಂಪು ; ದನಗಳ ಮಂದೆ ; ಗೋಸಂಪತ್ತು : "ಗೋಧನಂ ತುಱುವೆನಿಕ್ಕು" (ಮಂಗರಾ. ೫೬-೧೦); ಕೊತ್ತುಮುಬ್ಬಿಲಮುನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV, ಹೆಗ್ಗಡ. ೧೦೩-೭ ; ಸು. 910) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಟ್ಚಿದುದುಮಂ ನೆನೆದು (ಪಂಪಭಾ. ೧೨-೧೭ ವ); ಮಾದಿರಾಜನತಿಕೋಪದಿನ[ನ್ತ]ರ[ದೆ] ಬೆನತೂರ ತುಱುವಂ [ತಱ್ದಿ]ಸಿದನನ್ದಣ್ಣಿಗೆಱಿಗೆ ತ[ಱಿ]ಸಲನಿನ್ದಂ (ಸೌಇಇ. XI-i, ೮೧-೧೧ ; 1049) ; ಗೋವರ್ಧನಗಿರಿಯೆತ್ತಿ ತುಱುವ ಕಾದಂತೆ (ಮೋಹತ. ೪೦-೫೦); ಗೋವಳಂ ತುಱುಗಳಂ ಮನೆಯಂ ಪುಗಿಸಿದಂ (ಶಬ್ದಾನು. ೨೦೫ ಪ್ರಯೋ). **ತುರು :** ೧. ಕೆಚ್ಚಲ ಕರುವನು ನೆಕ್ಕುವ ತುರುವೋ (ಅನಿಕೇ. ೩೦-೦೨) : ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು (ಹಾಹುತ್ತ. ೬೬). ೨. ಶತ್ರುಗಳು ಮುರಿದೋಡಿದರು ತುರು ಮರಳಿತು (ಕಸಾಚ. ೭೬). **ತೊಱು :** ೨. ಕೇಸರಿ ತೊಱುವಾಳ್ಪನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ.X (s), ಮಾಲೂರು. ೦೫೬-೬; 8ನೆಯ ಶತ): ಶ್ರೀ [ಮಾ]ವಲಿಪಣರಸರ್ × × ಮಗ ಗ × × × ಮುಣ್ಡನು ತೊಱುವ ಕೊಳ್ವ ... ಆಯಿಕುಳ ಗ ಟಾನಿ ಕೊಟ್ಟದು (ಸೌಇಇ. IX-i, ೧೦-೫; 9ನೆಯ ಶತ); ತೊಱುಗೊಳೆ ತೊಱುವಂ ಪರಿಯಲೀಯದೆ (ಮ್ಯಎರಿ. ೧೯೩೨, ೧೯೬-೭; 9ನೆಯ ಶತ).

ತುರುವಿನ ಮಾಳ=ದನಗಳು ಮೇಯುವ ಮೈದಾನ; ಹುಲ್ಲುಗಾವಲು ; ಗೋಮಾಳ: ವಾಯುವ್ಯದಲ್ಲಿ ಒಂದು ಮೈಲಿ ದೂರದಲ್ಲಿ ಗಿರಿಜಾಪುರದ ಕಡೆಗೆ "ತುರುವಿನ ಮಾಳ" ಇದೆ (ಹೊದ್ಸ್ನವಾ. ೨೩೪). ತುಱುಕಱು, ತುರುಕರು=ದನಕರು : ತುಱುಕಱು ಕಱೆದರೆ ಉಣಬಹುದಣ್ಣ ತುಱುಕಱು ಕಱೆದರೆ ಅತಿ ಪುಣ್ಯವಯ್ಯ (ಪುರಂದ. ೧-೧೭೯ ಪಲ್ಲವಿ): ತುಱುಕಱುವು ಇರದೂರು ನರಕಭಾಜನಮಕ್ಕು ತುಱುಕಱುಂಟಾದರುಣಲುಂಟು ಜಗಕೆಲ್ಲ ತುಱುಕಱುವೆ ದೈವ (ಸರ್ವಜ್ಞ. ೧೩೬೫) ; ಒಯ್ದು ಹುಲಿಯಂ ಕಂಡು ತುರುಕರುಗಳೋಡುತಿವೆ (ಕಾಲೂರ. ೯೦-೧೭೪). ತುಱುವನಿಕ್ಕಿಸು, ತೊಱುವನಿಕ್ಕಿಸು = ಅಪಹಾರವಾದ ಗೋವುಗಳನ್ನು ಮರಳಿಸು : ಮುಱ್ತಿಯರ ಬೂವಯ್ಯನ ಮಗಂ ಬಿದಿಯಾಯ್ತು ತುಱುವನಿಕ್ಕಿಸಿ ಕಾದಿ ಸತ್ತು (ಎಕ. II, ೩೯೪-೯ : ಸು. 894) : ಕುಸುಪ್ಪುರಿ ತುಱುವನಿಕ್ಕಿಸಿ ಸತ್ತ (ಎಕ. XVI, ಚಿಕ್ಕನಾ. ೭೨-೫ : ?) ; ಅಣಿಲೆಯರ ಮಗ ನೆಲ್ಮಲ್ಲ ಅಣ್ಣಮ್ಮರ್ನಱಿಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೦೧೦-೬ : ಸು. 906). ತುಱುವನಿಕ್ಕು=ತುಱುವನಿಕ್ಕಿಸು : ಗೋತ್ರಪವಿತ್ರ ಬಮ್ಮಿಸೆಟ್ಟಿಯ ಸ × × × ಗೆಱೆಯ ತುಱುವನಿಕ್ಕಿ (ಎಕ. XVI, ಚಿಕ್ಕನಾ. ೭೫-೩೨ ; ?). ತುಱುವಿಗೆ ಹೋಗು = ತುಱುವನಿಕ್ಕಿಸು : ರಾಮಗಉಡನ ಮಗ ಬೊಂಮಣ್ಣನು ತುಱುವಿಗೆ ಹೋದಗ (ಎಕ. IX (s), ಚನ್ನಪ. ೨೯೪-೩ ; 16ನೆಯ ಶತ). ತುಱುವಿನ ಮಂದೆ = ದನಗಳ ಹಿಂಡಂ,— ಗುಂಪು : "ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ" (ಹಲಾಯು. ೪೪-೧೦೭).

[ದೇ.॥ ತಮಿ. ತುಱು, ತೊಱು ಮಲ; ತುಱು ; ತೆಲು. ತೊರವು]

△ **ತುಱುಂಕು** 'ತುಱುಕು$_1$' ನೋ.

**ತುಱುಂಗಲ್, ತುರುಂಗಲು, ತುಱುಗಲ್, ತುಱುಗಲು** (ನಾ). ಗುಂಪು; ಸಂದಣಿ ; ಸಮೂಹ : ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳೆಪುಗಳ್ ದೆಸೆದೆಸೆಗೆಸೆವಂತೆ ಪಸರಿಸಿ (ಆದಿಪು. ೦೧-೫ ವ ); ವಿದ್ಯಾಧರವಧೂಜನದ ಸೋಮರ್ನಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಂಗಲುಮಂ...ನೋಡುತ್ತೆ (ಪಂಪರಾಮಾ.೨-೧೩ವ); ಪರಾಗಮುಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನದೊಳ್ ಸುರತರುವಂ ಮಲಂಗಿ (ಗಿರಿಕ. ೭-೧೧ ವ) : ಎಳನೀರ್ಗಾಯ ತುಱುಂಗಲಿಂ ತೊನೆವ ತೆಂಗಿಂ ತೋರವಣ್ಗೊಂಗಲಿಂ .... ಪೂತಿರ್ದ ನಾನಾಲತಾನಿಳಯಾನೀಕದಿನಾತನೊಳ್ ಪಡೆದುದತ್ಯಾನಂದಮಂ ನಂದನಂ (ಮಹಾನೇ. ೪-೨೩). **ತುರುಗಲು :** ಒಗೆಮುಗಿಲ ತುರುಗಲನು ಕಳೆದು ತನ್ನೆಳನಗೆಯ ಮೊಗ ಮಾಡವನು ತೊಡಿಪನಾವ ಭಾನು ? (ಭಾರಂಗ. ೦೨-೫); ಎನ್ನ ಬಗೆ ... ಮಾಮರದೆಲೆಯ ತುರುಗಲೊಳು ತಂಗುವುದು ತವರ ಕಂಡಂತೆ (ಮಲದೇ. ೪೨-೬). **ತುಱುಗಲ್ :** ಗುಡಿಯ ತೋರಣಂಗಳುಮಂ ತುಱುಗಲುಂ

ಬಂಬಲುವಾಗೆ ಕಟ್ಟಿಸಿ (ಪಂಪಭಾ. ೪-೫೭) ; ತಂಬೆಲರ ಪೊಯ್ಲಿನಿಂ ತಣ್ಪು ವಡೆಯಲೆಂದು ನೆಱೆಪಿದಂತಿರ್ದ ನೀರ್ಗಾಯ ತುಱುಗಲಿಂದೆಸೆಗಿದ ನಾಳಿ ಕೇರಭೂರುಹಂಗಳುಂ (ಚಂದ್ರಪ್ರ. ೧-೧೦೫ ವ) ; ಎಱಪ ಶರಧರದ ತುಱು ಗಲ್ಮಿಱಿವ ಘನೋಪಳಕದಂಬವುಮುಡುಗಣಮೆನೆ (ರಾಜಶೇ. ೧-೧೨೦). 'ಎಮೆಮುಱುಂಗಲ್' ಪರಾ. ತುಱುಗಲು : "ಬಂಬಲ್ ತುಱುಗಲು ಮೊತ್ತಂ ಗಡಣಮೊಟ್ಟಿಲೊಟ್ಟಜೆ ... ಸಂದಣಿ ಜಾಳಿಗೆಯುಮೆನೆ ಶ್ರೇಣಿ ಕಾಱಿಂ" (ಕಬ್ಬಿಗ. ೧೬) ; ಕರಗಿದಳು ಗಾಂಧಾರಿ ಕಂಬನಿದುಱುಗಲಲಿ (ಕುಮಾ.ಸ. ೧೨-೫೫) : ಅಱಸಿದೆವಮ್ಮ ಲತಾಮಂಟಪಗಳ ಮಱೆಯೊಳು ನಾಗವಲ್ಲಿಗಳ ತುಱುಗಲೊಳು (ಕುರಾಸಾಂ. ೩೨-೩೩).

[ತುಱುಂಗು (< ತುಱುಕು₁) + -ಅಲ್₂]

△ ತುಱುಂಗು 'ತುಱುಕು₁' ನೋ.

ತುಱುಂಗೊಳ್ 'ತುಱುಗೋಳ್' ನೋ.

**ತುಱುಂದಪೊಟಿಲ್ (ನಾ).** ಒಂದು ಊರಿನ ಹೆಸರು : ಮಾಚಿಗಂ ಗುತ್ತಿಯ ಗಂಗನ ಬೆಸದೊಳ್ ತುಱುನ್ದಪೊಟಿಲ ಕಾಳೆಗದೊಳ್ ನೊಳಂಬಾಧಿರಾಜ ರಾಜನೊರ್ಳ್ ಕಾದಿ ಸತ್ತಂ (ಎಕ. IV, ಹೆಗ್ಗಡ. ೧೧೦-೧೨; ಸು. 900).

[ತುಱುಂದ₀ + ಪೊಟಿಲ್₂]

**ತುಱುಂಬು₁, ತುರುಂಬು₁. ತುಱುಬು₁ (ಕ್ರಿ).** ೧. ಹೂವನ್ನು ಮುಡಿ,- ಸೂಡು : ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ... ಇರುವಂತಿಯಂತೆ ನೋಂತಲರೊಳವೇ (ಆದಿಪು. ೧೧-೧೧೧) ; ತುಱುಂಬಿದ ನವಮಾಲಿಕಾಕುಸುಮವಿಕ್ಕಿದ ಮುತ್ತಿನ ಲಂಬಣಂ ... ಆಮರಲ್ಕೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೮೨); ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ (ಧರ್ಮಾಮೃ. ೧೧-೧೬೨) : ಸಜ್ಜಕಮಂ ತುಱುಂಬಿ ಕರಂಟಮನಿಕ್ಕಿ ... ವೃದ್ಧವಾರಯೋಷಿಜ್ಜನಮೊಪ್ಪಿತಲ್ಲಿ (ಉದ್ಭಟ. ೧೦-೭೧). ೨. ಮುಡಿಸು : ಸಹಚರಿಯರ್ಬಂದು ಸೇವಂತಿಗೆಯ ಪನ್ನೀರಂ ಮಜ್ಜನಕ್ಕೆಱೆದು ಪರಾಗದಂಗರಾಗಮನಮರ್ಚಿ ತಾವರೆಯ ನೂಲ ದುಕೂಲಮನುಡಿಸಿ ಕದಂಬಕುಸುಮಮಂ ಸಿರಿಮುಡಿಯೊಳ್ ತುಱುಂಬಿ (ಗಿರಿಕ. ೫-೭೬ ವ). ೩. ತುಂಬು; ಸಂದಣಿಸು; ಕೂಡು: ಹೊಂಬಾಱೆ ತುಱುಂಬಿದೀಳೆ ಬನದೊಳ್ ಪೆಣ್ದುಂಬಿ ನಿಂದಂಬುಜಂ ... ರಮ್ಯಂ ಪುರೋದ್ಯಾನದೊಳ್ (ಅನಂಪು. ೧-೯೩) : ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಹೊನ್ನಗಸೆಯೊಳು (ವೀಾಹತ. ೧೧-೩೪). **ತುರುಬು₁:** ೨. ಪ್ರಸೂನಮಂ ತಿರಿತಂದು...ರುಕ್ಮಿಣಿ ಸತ್ಯಭಾಮೆಯರಿಗಂ ಮುಡಿಸಿ ಪುಳಿದ ಗೋಪಾಲವಧುಗಳಿಗೆ ಕರೆಕರೆದಿತ್ತು...ಮಸ್ತಕದಿ ತುರುಬಿ (ನವಮೋ. ೧೦-೭೧). **ತುಱುಬು₁ :** ೧. ನವಪ್ರಸೂನವ೦ ಮಗಮುಗಿ ಪಂದದಿಂ ತುಱುಬಿ ಬಂದಳ್ (ನಳಚಂ. ೭೪೪) ; ಅವಿರಳಾಮೋದ ಜಾತಿಯ ನಲ್ಲದುಳಿದ ಕುಸುಮವನು ತುಱುಬದ ... ಲತಾಂಗಿಯರು (ಸೌಂದಪು. ೭-೩೬). ೨. ಇರವಂತಿಯಂ ತಂದು ಸಿರಿಮುಡಿಯೊಳಗೆ ತುಱುಬಿ ಬೆರಸಿ ಯುವಜಱೆಡೆಗೆಡೆಗೆ ಸೇವಂತಿಗೆಗಳ ತುಱುಬಿ (ಪುಷ್ಪರ.ಹ. ೫೨೬-೧೬): ಪೊಸ ಕುಸುಮಂಗಳಂ ತುಱುಬಿದರು ಸತಿಗಾ ಪುಣ್ಯವನಿತೆಯರು (ಬಸಪು. ೪-೩೪). ೪. ಮುಡಿಗಟ್ಟು ; ಕೂದಲನ್ನು ಗಂಟುಕಟ್ಟು ; ತುರುಬು ಕಟ್ಟು: ಹೆಳಲು ಕಟ್ಟು : ಮತ್ತಪೊರ್ವಳಟ್ಟಸದ ಜಗದಿಟ್ಟೆ ಸೋರ್ಮುಡಿಯಂ ತುಱುಬಿ ಕಟಿಲಂ ಕಟಿಲ್ಚಿ ... ನೀರನಿಟಿೞ್ದಳ್ (ರಾಮಾಶ್ವ. ೧೨೩-೧೬).

[ದೇ.॥ ತಮಿ. ತುಱುಮ್ಪು, ತುಱುಮು ; ಮಲ. ತುಱು ; ತೆಲು. ತುಱುಮು, ತುರುಮು]

**ತುಱುಂಬು₂, ತುರುಬು₂, ತುಱುಬು₂ (ನಾ).** ೧. ಕೂದಲಿನ ಮುಂಡಿ,- ಗಂಟು : ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನ ನೊಯ್ಯನೊಯ್ಯನುಂದುಗುಟ್ಟುಪೊಲೊಟ್ಟರಲ್ (ಪಂಪಭಾ. ೭-೮೭) ; ನಱು ಗಂಪುಪೊಱಿದ ಜಾದಿಯ ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨): ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕು ಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೭) ; ಬಂಬಳ ಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗ (ಭರತೇ. ೭೦-೭೯). ೨. ಗುಂಪು ; ಸಮೂಹ : ಪರ್ವಿ ಪಸರಿಸಿದ ಪೊಂಬಾಱೆಯ ಕಂಬಂಗಳ ತು [ಪಾಠಾಂ. ತ]ಱುಂಬಿನೊಳ್ ಬಳ್ವಳ ಬೆಳೆದ ಮೃದ್ವೀಕಾಲತೆಯ ಕಾಮ ಮಾನಂ (ಅನಂಪು. ೭-೧೧ವ). **ತುರುಬು₂ :** ೧. ಹುರುಮಂಜಿಮುತ್ತುಗಳ ತುರುಬಿಂಗೆ ಕೊರಳಿಂಗೆ ಮೆರೆವ ಹಾರಂಗಳಿದು (ವೆಂಕಾರಾ. ೫-೬-೧೭) ; ತುರುಬಿನ ಸುತ್ತಲೂ ಮಲ್ಲಿಗೆಯ ದಂಡೆ ಕಟ್ಟಿಕೊಂಡಿದ್ದಳು (ಅಪನಾ. ೨೪೮); ಅತ್ತೆ ತುರುಬು ಮಾವಗೆ ದಾನ (ಗಾದೆ). **ತುಱುಬು₂ :** ೧. "ತುಱುಬು ಹಿನಿಲು ಪಾಶಂ" (ಮಂಗರಾ. ೯೪-೬) ; ತಳ್ಪತಳದೊಳ್ ಬಳಿಕಾತನ ತುಱುಬಂ ತಿರ್ದುತ್ತಂ ಮೊಸಸಿದ ಪಳಿತಮಂ ನೆ ಕಂಡು (ಪುಣ್ಯಾಸ್ರ. ೧೧-೧೦) : ಮಾಮ ಹಸ್ತವ ತುಱುಬಿನೊಳಟ್ಟಿ (ವೀಾಹತ. ೧೬-೩೭) ; ಮುಡಿದ ಪೂವಿನ ತುಱುಬು ಮೃಡಗಂಧಗಜದಿಱುಬು (ಚಿಬಪು. ೩೭-೨೩).

ತುತ್ತುಱುಂಬು, ತುತ್ತುಱುಬು (ದ್ವಿರುಕ್ತಿ) : ತುತ್ತುಱುಂಬಾಗಿಯುಗಳಿಗೆ ಬಿಳ್ದು ಕೋಟೆಯಂ ಹತ್ತಲೆಂದಂಗವಿಸುವಾ ಹರಿಗೆಯಾಳ್ಗಳ್ (ಸಮ್ಯಕ್ತಾ. ೮-೩೬) : ಕಾಳೋರಗನ ಹುತ್ತನೊಳಹೊಕ್ಕ ಮಹಾಳಿಯೊಳ್ಮಳಗತ್ತಲೆ ತುತ್ತುಱುಂಬಾಗಿ ತುಂಬಿದಾಘೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದ (ಸಮ್ಯಕ್ತಾ. ೧೦-೩೭) ; ಅಳಿಯಂದಿರಿಂದಾಪ್ತರಿಂದ . . . ತುಳಿಲಾಳ್ಗಳ ತುತ್ತುಱುಬಿಂ ಸಭೆ ಕಣ್ಗೆ ತಳೆದುದು ಗಾಡಿಗಮಕವ (ರಾಮವಿ. ೧೦-೭೭): ಕುತ್ತುಱು ಮೆಳೆವಱೆಗಳೊಳು ತುತ್ತುಱುವಾಗಿ ನಿಂದರು ಬೆಟ್ಟಬೆಟ್ಟಗಳೊತ್ತಿನೊಳಗೆ ಕಾಲವರು (ಕುರಾಸಾಂ. ೩೯-೪).

[ < ತುಱುಂಬು₁. /ತುಳು. ತುರುಟು ]

**ತುಱುಂಬುಗೊಳಿಸು (ಕ್ರಿ).** ತುಂಬುವಂತೆ ಮಾಡು : ಭರ್ತಿ ಮಾಡು : ಅರಿಬಳಪ್ರಹರಣನಿವಾರಂಗಳಪ್ಪಾಳ್ವಱೆಯ ತುಱುಗಲಂ ತುಱುಂಬುಗೊಳಿಸಿಯುಂ (ಪುಷ್ಪಪು.೭-೬೯ ವ). [ ತುಱುಂಬು₂ + ಕೊಳ್₁+ -ಇಸು₃]

**ತುಱುಕಾರ್ತಿ** 'ತುಱುಗಾರ್ತಿ' ನೋ.

**ತುಱುಕಾಱ** 'ತುಱುಗಾಱ' ನೋ.

**ತುಱುಕು₁, ತುರುಕು₁,ತುರುಗು₁, ತುಱುಂಕು,ತುಱುಂಗು, ತುಱುಗು ೧. (ಕ್ರಿ.)** ಒತ್ತಿ ತುರುಬು; ಗಿಡಿ; ಅಡಕು; ಬಲವಂತದಿಂದ ಒಳಕ್ಕೆ ಸೇರಿಸು: "ತುಱುಕು-ಗಾಢಪ್ರವೇಶೇ" (ಶಮಧಾ) ; ಪೊಱಗೊಂದು ಪೆಡಗೆ ಮಣ್ಣಂ ನೆಱೆ ಶೌಚಂಗೆಯ್ವರೊಳಗೆ ಪಲತೆಱದಡಗಂ ತುಱುಕುವರ್(ಸಮಪು.೧೪-೧೫೦). **ತುರುಕು₁:** ೧. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು (ಅಲಹೂ. ೧೫೨); ಕೆಲವರು ಓದಿದರೂ ಅವುಗಳನ್ನು ಎಲ್ಲಿಯೋ ಪೆಟ್ಟಿಗೆಯಲ್ಲಿ ತುರುಕಿಬಿಡುತ್ತಿದ್ದರು (ರಂಗಳ. ೪೭). **ತುರುಗು₁ :** ೨. ದಟ್ಟೈಸು ; ಸಂದಣಿಸು ; ಇಟ್ಟಣಿಸು : ತಾರಕೆ ಮಿರುಗೆ ಆಗಸ ತುರುಗೆ ಹಲ್ಲಲ್ಲೂರಗುವಳು (ಹಾಡುಪಾ. ೧೯-೧೭). ೩. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು ; ತುಂಬಿರು : ವೃಕೋದರನಿಗೆ ಸಹೋದರನ ಮರಣದಿಂದ ಒಡಲೊಳಗೆ ಅಳಲು ತುರುಗಿತು (ಬಿಮುರ. ೧೧೧). ೪. ಸಂಗ್ರಹಿಸು ; ಒಟ್ಟುಮಾಡು : ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯನೆಂದಿನಂತುರಲ ಬಡವಂ ತುರುಗಿ ತಂದಂ (ಕಾಲೂರ. ೭೮-೧೪೪). ೫. ಎದುರಿಸು ; ಕಾದು : ಇದಿರಿಸುವ ಗಂಡರನ್ನು ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ವೀರರನ್ನು ... ದಿಂಡುಗೆಡವಿದನು (ಕವೀರ.೩೧). △ **ತುಱುಂಕು :** ೧. ಮಯ್ಯಂ ಕಿಱಿಕಿಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ (ಧರ್ಮಾಮೃ. ೩-೭೩). △ **ತುಱುಂಗು :** ೨. ಪರಿವ ಕರಕರವ ಸೂಜಿಮಾಯ್ತುರ ಸೂಱುಗಳೊಳ್ತುಱುಂಗಿದಚ್ಚುಳಾ

ಯ್ತ್ರ ಕಳಕಳರವದಿಂ ಘೋರ್ಗರೆದುಲಿವಂಬುಧಿಯನಂತದೇಂ ಮಗುಳೆ ಸಿತೋ (ಸುಕುಮಾ. ೧೧-೨೫). ೩. ತನಿವಣ್ಗಳ ಸಂತತಿಯಿಂ ತುಱುಂಗಿ ನೆಱೆ ಕಣ್ಗತಿಶಯವಮಾಗಿರ್ದುದಲ್ಲಿ ನಾರಂಗಕುಜಂ (ಶಾಂತೀಶ್ವ. ೧೦-೯೮).

**ತುಱುಗು₁ :** ೧. ಕಂಪುಳ್ಳ ಸೇವಂತಿಯುಂ ತಂದು ತುಱುಗೆಂಬ ಜಾದಿಯುಂ ಮೊಲ್ಲೆಯುಂ ಬೆರಸಿ ನೀಡೆಮಗೆಂಬ...ಶರಣರಂ ನೋಡುತಂ (ಬಸರ. ೭-೪೦) : ಮುಱಿದು ಮರನನು ಭೀಮನಹಿತರ ತುಱುಬಿದನು ಹೊಕ್ಕೆಱಗಿ ದನು ತುಱುಗಿದನು ಭಟರ ಭದ್ರವಿಮಾನದಲಿ (ಕುಮಾ.ಭಾ. ೨೨-೨೯); ಕಱೆ ಗಿನೊಳಗೆ ನೋಡೆ ನಿಯಮಸಾರಂಬೊಲು ತೆಱಪಿಗೆ ಪ್ರಾಪ್ಯತದಂತೆ ತುಱುಗಿ ಭೂಪತಿ ಹೇಳಿದಧ್ಯಾತ್ಮಸಾರದ ತೆಱದೊಳಧ್ಯಯನ ಮಾಡಿದರು (ಭರತ. ೧೪-೧೨೬). ೨. ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಸಾಮವೇದಧ್ವನಿಯೊಳ್ ಮೊರೆವ ದುಂಬಿಗಳುಮಂ (ಪಂಪಭಾ. ೧-೧೧೫ ವ); ಆಗಸಂ ಹೂತಂತೆ ಪುಷ್ಪಕಂಗಳು ತುಱುಗೆ (ಇಹರ.ದೇ.೪೭-೧೭); ದಂತಿಘಟೆಗಳು ತುಱುಗಿದವು ... ಚೂಣಿಯ ನೃಪರ ಜೋಕೆಯಲಿ (ಕುಮಾ.ದ್ರೋ.೧-೪೭); ನೆಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು ತುಱುಗಿ ಬಂಬಲು ಮಾಲೆಗೊಂಡು...ಎಱಪಳಿಗಳೋಲೈಪ ಪರಿವಾರವೆನೆ (ಭಕ್ತಾಧ. ೧-೧೪); ಸಿಂಹಾಸನದ ಸುತ್ತಲುಂ ತುಱುಗಿದ ಸುರವೃಜದ ಮಧ್ಯದೊಳ್ ಮೆಱೆವಮಂ ಕುಱಿಯೆ...ನೀಂ ಪೇಳೆಂದನು (ಚಬಪು. ೧೬-೫). ೩. ಮೊದ ಲೊಳ್ ಮಾಡುಪಳೆದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೪); ಸುಲಲಿತವಾಗಿ ನೀಳ್ದ ತುಱುಗಿರ್ದೆಮೆಗಳ್ ತಮಮಂ ಬೆಳರ್ಪ ಕಣ್ಮಲರ್ಗಣೆ ಯುಂದೆಮಂ ನೆಱೆಯೆ ಪೋಲ್ತಿರೆ (ಧರ್ಮಾಮೃ. ೭-೧೯೭); ಅಂತು ನಿಧಾನ ಕ್ಕೆಱಗುವ ದೀಪವರ್ತಿಯಂತೆಱಗಿ ತುಱುಗಿದರ್ಚನೆಗಳಿಂದರ್ಚಿಸಿ ಗುರುಭಕ್ತಿ ಪೂರ್ವಕಂ ಬಂದಿಸಿ (ಅರ್ಧನೇ. ೧-೯೧ವ); ತುಱುಗಿದ ಕಾಯಿ ಪಣ್ಗಳ ಸಾಲ ವೃಕ್ಷವ ಮುಱಿದು (ವೀರಹತ. ೪-೭೭); ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೧೩). ೪. ತುಂಬಿಕೊಳ್ಳು ; ಅಡಕಿಕೊಳ್ಳು : ಬಾಯೊಳು ತುಱುಗಿದೆಲೆ ಬಾಯೊಳಗೆ ಮಡಿದೆಲೆ ಕೈಯೊಳಂಗನೆಯ ಸ್ಥಿರದೊಳೆವೆಯಿಕ್ಕದ ನಿರೀಕ್ಷಿಸುತರಸನೊರ್ವನು ... ಇರ್ದನು ಲಲಿತಭಿತ್ತಿಯ ಚಿತ್ರದಂದದಲಿ (ಜೀವಂಚ. ೮-೩೩). ೫. ಮುಚ್ಚು ; ಕವಿ ; ಆಚ್ಛಾದಿಸು : "ತುಱುಗು-ಸಂಚ್ಛನ್ನೇ (ಕವಿದುಕೊಳ್ಳು)" (ಶಮಧಾ); ತುಱುಗಿದ ಮುಗಿಲಾ ಮುಗಿಲಿಂದೆಱಗುವ ಮಱೆ (ಆದಿಪು. ೬-೬೨); ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳ ಪ್ರಭೆ ತನ್ನೊಳೆ ತುಱುಗೆ (ಕಾದಂಪೂ. ೪೬೯) : ತುಱುಗಿರ್ದ ನೀಲ ಮೇಘದ ತುಱುಗಲ್ ನೆಱೆ ಪಿಂಗಿ ಪೋಗೆ (ಜಗವಿ. ೪-೫೯) ; ಕೆಱುಮೊನೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱುಗಿದವು ಮಱಿದುಂಬಿ ಕೆಂದಾವರೆಗೆ ಕವಿವಂತೆ (ಕುಮಾ.ದ್ರೋ. ೫-೩೪) : ಧುರ ದೊಳು ತುಱುಗಿರ್ದ ಕೃತಕಾಂಧಕಾರವಿಸ್ತರವ ನಿರ್ಮೂಲನಗೆಯ್ವುದಕೆ ವರವಮೂಡಿಗೆಯಿಂದೆ ತೆಗೆದೆಚ್ಚ ಕೃಷ್ಣ (ವೀರಹತ. ೪೦-೪೩). ೬. ಹರಡು; ವ್ಯಾಪಿಸು : ಪೊಸ ಮಸೆಯಂಬಸದಳಮೊಡನೆಱಗಿ ತುಱುಗಿ ಪಾಯ್ವುವು ಕೆಲವುಂ (ಶಾಂತಿಪು. ೫-೬೦) ; ತುಱುಗಿದ ತನುತಾಪದಿಂದೆ ಪಕ್ಕಿಯ ತಳಿರ್ ತಱಗೆಲೆಯಾಗಿ ತೋಱಿಸಲು (ವೀರಹತ. ೨೮-೧೬) : ಮಣಿಕೋಟಿರಾಂಶು ವೆತ್ತಂ ತುಱುಗೆ...ಕನಕಲಸತ್ಪೀಠದೊಳ್ ಭೂಪನಿರ್ದಂ (ರಾಜಶೇ. ೫-೧೭). ೭. ಜೋಡಿಸು ; ಹೊಂದಿಸು ; ಕುಂದಣಗೊಳಿಸು : ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನ ಕುಟಿವಟ್ಟುಗಳಿಂ ನಿರುಪಮ ಕನಕಸರೋಜಾಕರಮಲರ್ದಂತಿರ್ದುದನ್ನವಾಸವಿಲಾಸಂ (ಸು ಕು ಮಾ. ೧೧-೨೭). ೧೦. ತಾಗು ; ತಗುಲು; ಅಂಟು: ತುರಗದ ವ್ಯಾಧಿನಿದಾನ ವನಱಿಯದ ವೈದ್ಯನನೆ ಶಿಕ್ಷೆಗೆಯ್ಯದ ನೃಪಗಂ ತುಱುಗುವುದಶ್ವೀತಿ ಪಾತಕಮಱಿದವನಂ ತಡೆಯಲಶ್ವಮೇಧದ ಫಲಮುಂ (ಅಶ್ವಶಾ. ೧೦-೫).

ತುಱುತುರುಗು (ದ್ವಿರುಕ್ತಿ) : ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ ಗಾಳಿಯೊಲು ಜನುಗಾಗಿ ಜೀವನಕೆ ಉಸಿರಾಗಿ (ಬಾಸಿಗ. ೨೬-೯). [ದೇ. ‖ ತಮಿ. ಮಲ. ತುಱು ; ತೆಲು. ತುರುಗು, ತುಱುಗು]

**ತುಱುಕು₂** (ನಾ). (?) : ಇಱಿದುದಕದಂತೆ ಹಾಲಿನ ನೆಱುಸೋನೆಯ ಲುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ಶಿಳಿಗಳ ನೆಱಗಿದರಾ ಜನಮನಳುರೆ ಹೊಸ ರಸವಣಿಗರ್ (?) (ಸೂಕ್ತಿಸು. ೧೩-೧೯).
[ ? ]

**ತುಱುಗಲ್** 'ತುಱುಂಗಲ್' ನೋ.

**ತುಱುಗಲು** 'ತುಱುಂಗಲ್' ನೋ.

**ತುಱುಗಲೂರ್** (ನಾ). ಒಂದು ಊರಿನ ಹೆಸರು : ಈಶ್ವರಶರ್ಮ ಜಾಪ್ಯಾಯ ತುಱುಗಲೂರ್ ವಸ್ತವ್ಯಾ (ಮೈಆರಿ. ೧೯೧೪, ೧೦-೮:728).
[ ? + ಊರ್]

**ತುಱುಗಲ್ಗೊನೆ** (ನಾ). ದಟ್ಟವಾಗಿ ಕಾಯಿ ಅಥವಾ ಹಣ್ಣುಗಳನ್ನು ಒಳಗೊಂಡಿರುವ ಗೊನೆ. 'ತುಱುಗಲ್ಗೊನೆವಣ್' ಪರಾ.
[ ತುಱುಗಲ್ ( < ತುಱುಂಗಲ್) + ಕೊನೆ₃ ( < ಗೊಲೆ) ]

**ತುಱುಗಲ್ಗೊನೆವಣ್** (ಕ್ರಿ). ದಟ್ಟವಾದ ಕಾಯಿ, ಹಣ್ಣುಗಳಿಂದ ತುಂಬಿದ ಗೊನೆಯನ್ನು ಬಿಡು;ಫಲಿಸು : ತೊರೆದುದೊ ಕಾಮ ಧೇನು ತುಱುಗಲ್ಗೊನೆವಣ್ತುದೊ ಕಲ್ಪವೃಕ್ಷಂ (ಗದಾಯು. ೧೦-೨೨ ಅಡಿಟಿ).
[ ತುಱುಗಲ್ಗೊನೆ + ಪಣ್₂ ]

**ತುಱುಗಲ್ಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಂಗೆ ಬಲ್ಲಿತ ಬಿಸಿಲ್ ಪೂದೋಂಟದೊಳ್ (ಸೂಕ್ತಿಸು. ೧೧-೬೦).
[ ತುಱುಗಲ್ ( < ತುಱುಂಗಲ್ ) + ಕೊಳ್₁ ]

**ತುಱುಗಳವು** (ನಾ). ಹಸುಗಳ ಅಪಹಾರ : ಗೋಗ್ರಹಣ : ತುಱು ಗಳವೊ[ ಪಾಠಾ. ಗೋಳೊ]ಳ್ ಪೆಣ್ಬುಯ್ಯಲೊಳ್...ತಱಿಸಂದು ಗಂಡು ತನಮನೆ ನೆಱಪದವಂ ಗಂಡನಲ್ಲನೆಂತುಂ ಪಂಡಂ (ಗದಾಯು.೨-೨೪).
[ತುಱು + ಕಳವು]

**ತುಱುಗಾ, ತುಱುಗಾಯ್** (ಕ್ರಿ). ದನಕರುಗಳನ್ನು ಕಾಯು,— ಮೇಯಿಸು : ತುಱುಗಾವ ಗೋವರಂ ಮತ್ತಱಿಕೆಯ ಕಬ್ಬಿಲರನೆಯ್ದೆ ಬೆಸಗೊಳುತಂ (ಧರ್ಮಾಮೃ.೮-೨೩). ತುಱುಗಾವ ಕಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಕಾ.೨೩೪); ಆರ ಬಸುಱಲಿ ಬಂದು ... ಆರ ಹೆಂಡಿರ ಕೊಂಡು ಕಱು ತುಱುಗಾದು ಕಳವಿನಲಿ ವೀರದೈತ್ಯನ ಸದೆಬಡಿದು ಕುರು ವೀರವಂಶದ ರಾಯರಿವೊಳು ವೈರಬಂಧವ ಬಿತ್ತಿ ಕೊಂದವ: ಕೃಷ್ಣ ನೀನೆಂದ (ಕುಮಾ.ಗ.೮-೩೮) ; ತುಱುಗಾವ ಪಳ್ಳಿಯಂ ಬಿಟ್ಟು ಬಳಿಕಿರವಿಲ್ಲದೆ ಹೊದ್ದಿ ಪಾಂಡವರನು (ಜೈಮಿಭಾ. ೬-೪೭). **ತುಱುಗಾಯ್**: ಮಾಯದೀ ಮುಗ ಹೊಲದೊಳಗೆ ತುಱುಗಾವುತಿರಲೊಂದು ಬಾಯ ಬಿಡುತಿರಿದಾದ ಕತ್ತೆಯ ಸಾಯ ಬಡಿದನು (ಸಾಳ್ವಭಾ.೨೨-೧೫).

**ತುಱುಗಾವ** = ದನಕಾಯುವವನು ; ದನಗಾಹಿ : ತುಱುಗಳ. ತುಱು ಗಾವರನು ನೆಱೆದಾಡುವರ್ಭಕರ ಎಱಗಿ ನೋಡುವ ತನ್ನನು ... ಕಾಣುತವೆ ಮೈಮಱದಳಂಗನೆ (ನಿಘಾಗ. ೧೦-೮-೫೮). [ತುಱು+ಕಾ₁]

**ತುಱುಗಾಡು, ತುರುಗಾಡು** (ನಾ) . ದನಕರುಗಳು ಮೇಯುವ ಕಾಡು ; ಹುಲ್ಲುಗಾವಲು ; ಗೋಮಾಳ : ತುಱುಗಾಡು, ಕಱುಗಂಟು, ಕುಡು ಗೋಲ್ (ಶಬ್ದಾನು. ೫೭ ಪ್ರಯೋ). **ತುರುಗಾಡು** : "ಅಶಿತಂ [ಗವೀನಂ] – ತುರುಗಾಡು" (ಅಕಾನಿ. ೩-೭). [ತುಱು + ಕಾಡು₁]

**ತುಱುಗಾಯ್** 'ತುಱುಗಾ' ನೋ.

**ತುಱುಗಾಯಿ** 'ತುಱುಗಾಹಿ' ನೋ.

**ತುಱುಗಾರ್ತಿ, ತಂಱುಕಾರ್ತಿ** (ನಾ). ಗೊಲ್ಲರವಳು ; ಗೊಲ್ಲಿತಿ ; ಗೋಪಿ : "ತುಱುಗಾರ್ತಿ [ಪಾಠಾಂ. ವಳ್ತಿ] ಯೆಂದು ಗೋಪಿ" (ಕಶಸಾ. ೭-೧೨೭) ; "ತುಱುಗಾರ್ತಿಯರೆನಲು ಗೋಪಿಯರ್" (ಕವಿಕಂ. ೮೫) : ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ (ಪಂಪಭಾ. ೩-೫೨) : ತನ್ನ ಪೆಂಡತಿಯಪ್ಪ ನಂದೆಯೆಂಬ ತುಱುಗಾರ್ತಿಯುಂ ಕರೆದು... ಮಗನಂ ಕೊಟ್ಟು (ಧರ್ಮಾಮೃ. ೧೦-೧೫೦) ; ಕಱುವಂ ಬಿಡು... ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ (ಲೀಲಾವ. ೫-೧೨೦) ; ಕಜ್ಜೆಯೆಂಬ ನುಡಿ ತು ಱು ಗಾ ರ್ತಿ ಯ ರೊ ಳು (ಕುರಾಸಾಂ. ೨-೬೮). **ತುಱುಕಾರ್ತಿ** : ತುಱುಕಾರ್ತಿಯರ್ ತಿಱಿದು ತಂದು ಪಾಱುತನಕ್ಕೆ ಪರಪೆ ಪರೆದು ಕೊರಗಿರ್ದ ಕಱಿಯ ಸೆಯ್ಯಲ್ಗಳಿಂ ... ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು (ಲೀಲಾವ. ೫-೫೪ವ).
[ತುಱುಗಾಱ + – ತ್ತಿ$_1$ (< – ಇತ್ತಿ) ]

**ತುಱುಗಾಹಿ, ತುಱುಗಾಯಿ** (ನಾ). ದನಕರುಗಳನ್ನು ಕಾಯುವವನು ; ಗೊಲ್ಲ : ತುಱುಗಾಹಿ ಕಾಜಿನ ಮಣಿಯ ಬಲ್ಲನು ಗಡ (ಕುವ್ಯಾಕ. ೯-೧೪) ; ತುಱುಗಳ ತಿರುಹಿಕೊಂಡೆಯ್ದುವ ಬೇಡರ ತುಱುಗಾಹಿಗಳು ಕಂಡು ನಡುಗಿ (ಜೀವಂಸಾಂ. ೮-೨೩) ; ಈತನೇ ತುಱುಗಾಹಿ ಮಾರಣ್ಣನೆಂಬಾತನು (ಚಿಬಪು. ೫೭-೬೦) : ಸಲಹುವನೆ ಮನೆಯ ತುಱುಗಾಹಿ ಸ್ತ್ರೀಯರಿಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೦೯). **ತುಱುಗಾಯಿ** : ಇಂದು ತುಱುಗಾಯಿ[ಪಾಠಾಂ. ಹಿ]ಯುಂ ಬಂದಿಱಿಯದಪನೆನಗೆ ಸಂದ ಪಗೆ (ಕೃಮಿಭಾ. ೭-೩೦). [ತುಱು + ಕಾಹಿ]

**ತುಱುಗಾಱ, ತುರುಕಾರ, ತುಱುಕಾಱ** (ನಾ). ದನಕರುಗಳನ್ನು ಕಾಯುವವನು : ಗೊಲ್ಲ ; ಗೋಪಾಲ : ಒರ್ವರಿನೊರ್ವರ್ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರಂದಿನಿಸು ಬಲ್ಲಲನಾದುದದೊಂದು ಕಾಳೆಗಂ (ಪಂಪಭಾ. ೮-೯೩): ಆ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ...ಗೆ ಕುಡುವುದುಂ (ಧರ್ಮಾಮೃ. ೧೦-೧೫೦) : ಏಱಿದರು ಭಂಡಿಗಳನಾ ತುಱುಗಾಱರಾ ಸ್ತ್ರೀಬಾಲವೃದ್ಧರು (ನಿಭಾಗ. ೧೦-೧೧-೧೧). **ತುರುಕಾರ** : ಒಂದೆ ಕುಳಿತು ತೇರೆಸಗು ಎಂದು ಅಪ್ಪಣೆಮಾಡುವವನು ಅಂಬಿಗ, ಯುದ್ಧರಂಗದಲ್ಲಿ ಮುಂದೆ ಸಮಾನನಾಗಿ ಬಂದಿರುವವನು ತುರುಕಾರ (ಭಾಮುಚಿ. ೨೪). **ತುಱುಕಾಱ** : "ಗೋಪಾಲ್, ಗೋವಿಂ, ಗೋಸ್ವಾಮಿ — ಈ ೩ ತುಱುಕಾಱರ್" (ಹಲಾಯು. ೪೪-೧೦೭) ; ಪಚ್ಚೆ ಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಟ್ಟಿಯಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೬-೯೬). [ತುಱು + – ಕಾಱ]

**ತುಱುಗಾಱಪಳ್ಳಿ** (ನಾ). ಗೋವಳರ ಗ್ರಾಮ : ಗೊಲ್ಲರ ಹಳ್ಳಿ : ಪಟ್ಟಣಗಳಲಿ ತುಱುಗಾಱ[ಪಾಠಾಂ. ವ] ಪಳ್ಳಿಯಲಿ . . . ಅಱಸಿದರಾ ನಿಶಾಚರನ (ತೊರರಾ. ೪-೧೦-೧೫). [ತುಱುಗಾಱ + ಪಳ್ಳಿ$_1$]

**ತುಱುಗು$_1$** 'ತುಱುಕು$_1$' ನೋ.

**ತುಱುಗು$_2$, ತುರುಗು$_2$** (ನಾ). ಸಂದಣಿ ; ದಟ್ಟಣೆ : ಸಪ್ತಮುಖದಿಂದೆ ವಿಪೋನ್ನತಿಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶೂದ್ರಕ): ಮೆಱೆವ ದೇಹಪ್ರಭೆಗಳಲಿ ಮಿಱುಮಿಱುಪ ದಿವ್ಯಾಭರಣಕಿರಣದ ತುಱುಗಿನಲಿ ಒಪ್ಪಿದರಿಂದ್ರತೇಜದಲಿ (ಸಂಭಪ. ೩೩-೫೬). **ತುರುಗು$_2$** : "ತಿಂತಿಣಿ, ಕಿಕ್ಕಿರಿ, ತುರುಗು. ಬಂಬಲು. ಜಂಗುಳಿ. ಹಿಂಡು, ಗುಂಪು...ಮಂದಿ" (ಕಂಸುಹು. ೮೫). [<ತುಱುಕು$_1$./ಮಲ. ತುಱುಕು]

**ತುಱುಗುಗೂಂದಲ್, ತುರುಗುಂಗೂದಲು** (ನಾ). ದಟ್ಟವಾಗಿರುವ ಕೂದಲು; ತುಂಬುಗೂದಲು : ತುಱುಗುಗೂಂದಲ್ ಕೊಕ್ಕರಿಸೆ ಕೊನೆವಾಲಮಿನಿಸುಂ ನಿಮಿರ್ದು ಸಂಚಳಿಸೆ (ರಾಮಾಶ್ವ. ೧೩೨-೯). **ತುರುಗುಂಗೂದಲು** : ಇದೀ ಶ್ಮಶ್ರುಸಂಕಟವಾದರೋ, ವಿಪರೀತವಾಗಿ ಕರಿಯ ಚಾಮರದ ಚವ್ವರಿಯ ತುರುಗುಂಗೂದಲಂತೆ...ರೂಕ್ಷತೆಯು ಕಡು ಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಶ. ೯೨-೧೮).
[ತುಱುಗು$_1$ (<ತುಱುಕು$_1$) + ಕೊಂದಲ್]

**ತುಱುಗೆವೆ, ತುರುಗೆವೆ, ತುಱುಂಗೆವೆ** (ನಾ). ದಟ್ಟವಾದ ಕೂದಲುಳ್ಳ ರೆಪ್ಪೆ : ಒತ್ತಾದ ಕೂದಲುಳ್ಳ ರೆಪ್ಪೆ: ತುಱುಗೆವೆ ನೀಳ್ದ ಪುರ್ವು ನಿಡು ಗಣ್ (ಪಂಪಭಾ. ೧-೧೦೮) ; ಘನಸ್ತನಂ ತುಱುಗೆವೆ ಕೋಮಲಾಂಗಮುಂ ವಟ್ಟ ಕುರುಳ್...ರಮಣೀಯಮಪ್ಪಾಗೆ (ಧರ್ಮಾಮೃ. ೪-೧೪೨): ತುಱು ಗೆವೆಯ ತೆರ್ಕೆಯೊಳ್ ಬಂಬಲಿಪ ಕಣ್ಬನಿಗಳೊಸರೆ (ವರ್ಧಪು. ೪-೬೦ವ). **ತುರುಗೆವೆ** : ತುರುಗೆವೆ ನಿಡುಹುಬ್ಬು ಡಾಳಿಪ ಕದಪು...ಅಂಚೆಯ ನಡೆ ನುಡಿಯ ಜಾಣೆಯರು (ಸೌಂದಕಾ. ೩-೭೬). **ತುಱುಗೆವೆ** : ತುಱುಗೆವೆ ನಿಂದು ನೋಡೆ ಕಡೆಗಣ್ಣದಿರ್ಗೊಳ್ಪಳಿಪಾಡೆ ಪೊಕ್ಕು ಸೈಪೆಱಗಿದಿರ್ಗೊಳ್ಳ ಸೋಂಕು. . . ಲಲ್ಲೆಯಿದಿರ್ಗೊಂಡುದು ಕೂಟದ ಕಾಯ್ಪುಮೋಪರಾ (ಅರ್ಧನೇ. ೨-೩೬): ತುಱುಗೆವೆಯ ನಿಟ್ಟೆಸಳುಗಂಗಳ . . . ನೀಱೆಯುರ್ವಿದ ತೊಗ್ಗಿನಲಿ (ಕುವ್ಯಾಅ. ೧೩-೩೦): ತುಱುಗೆವೆಯ ನಿಡುಗಂಗಳಿನ ಕಡೆಸೆಱಗನ ಮರಿಸುತ...ಬಂದಳು ರಾಮನಿದ್ದೆಡೆಗೆ (ತೊರರಾ.೩-೪-೮): ಪಾಮರಿಯರ ಕುಡುಪುರ್ವಿನ ಕೊನೆಮುಟ್ಟಿದ ತುಱುಗೆವೆಗಳ ನಡುವೆ ಕರಿಯಾಲಿಗಳೆಸೆದುವು (ಜಯುಕಾ. ೧-೪೧). [ತುಱುಗು$_1$ (<ತುಱುಕು$_1$) + ಎವೆ]

**ತುಱುಗೆವೆಗಣ್, ತುಱುಂಗೆವೆಗಣ್, ತುಱುಗೆವೆಗಣ್ಣು** (ನಾ). ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು : ಭವನಾಂತರಮಂ ನೆಱೆ ಧವಳಿಸುತಿರ್ದಪುದೀ ತುಱುಗೆವೆಗಣ್ಬೆಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೨೦): ಪುಂಡರೀಕದಳಧವಳವಿಲೋಚನೆಯರಾ . . . ತಮ್ಮ ನಿಡಿಯ ಬಿಳಿಯ ತುಱುಗೆವೆಗಣ್ಗಳಿಂ ಕಣ್ಪೇಟಂಗೊಳಿಸಿಯುಂ (ಸುಕುಮಾ. ೧೦-೧೨೭ವ) ; ನಳಿನದೆಸಟಿಗೊಳ್ ಮುಸುಱೆ ಮುತ್ತಿದ ಮತ್ತಮಧುಕರಕುಳಮಂ ಕೆಲಕ್ಕೆ ತೊಲಗಿಸುವಂತೆ ತಳ್ತ ತುಱುಗೆವೆಗಣ್ಗಳಂ ತೆಗೆದು (ಲೀಲಾವ. ೩-೬೫): ಕಾವನ ತೋಳಂ ಬಿಡದಪ್ಪಿದುಮಂದಾಕೆಯ ಕೊ ಡ ಕೆ ವ ರಂ ನಿ ಮಿ ರ್ದು ಪೊಳೆವ ತುಱುಗೆವೆಗಣ್ಗಳ್ (ಕಬ್ಬಿಕಾ. ೩೨೮). **ತುಱುಗೆವೆಗಣ್** : ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕಿನ್ನೆಯನೆಯ್ದಿದ ಪುರ್ವುಗಳಂ . . . ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ . . . ಎತ್ತಿ ಕೊಂಡಿಂದ್ರುನ ದೇವಿ ಬಂದಳ್ (ಶಾಂತಿಪು. ೧೦-೯); ತುಱುಗೆವೆಗಣ್ಣ ಕಾಂತಿ ಮರಗಟ್ಟಿಲೆಯಂ ಬೆದಱಟ್ಟೆ (ಜಗವಿ. ೧೬-೨೫): ತುಱುಗೆವೆಗ [ಪಾಠಾಂ. ನಿಡಿಯಲರ್ಗ]ಣ್ಬೊಣರು . . . ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯುಕಾ. ೨-೪೩). **ತುಱುಗೆವೆಗಣ್ಣು** : ತುಱುಗೆವೆಗಣ್ಣ ಕಟಾಕ್ಷ ಕೆಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಱಗಿಂದೆ ಮಾತನಾಡಿದಳು (ಮೋಹತ. ೧೬-೨೪) : ತುಱುಗೆವೆಗಣ್ಣ ನೋ ೞ ಟ ಮೆ ಸೆ ದು ದು (ಚಬಪು. ೪-೧೧)
[ತುಱುಗೆವೆ+ಕಣ್]

**ತುಱುಗೆವೆ** 'ತುಱುಗೆವೆ' ನೋ.

**ತುಱುಗೆವೆಗಣ್** 'ತುಱುಗೆವೆಗಣ್' ನೋ.

**ತುಱುಗೆವೆಗಣ್ಣು** 'ತುಱುಗೆವೆಂಗಣ್' ನೋ.

**ತುಱುಗೊಳ್$_1$, ತೊಱುಗೊಳ್$_1$** (ಕ್ರಿ). ದನಕರುಗಳನ್ನು ಅಪಹರಿಸು; ಹಸುಗಳನ್ನು ಹಿಡಿ; ಗೋಗ್ರಹಣಮಾಡು; ದನಗಳನ್ನು ಅಪಹರಿಸಲು ಯುದ್ಧಮಾಡು : ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿಸಿ ರೊಸಗರಲಯನ್ ಪೊಸಮೆಣ್ಣೆ ಸಗಮೋಱಿದನ್ (ಎಕ. IX (s). ಹೊಸಕೋ. ೯-೩; 875): ಚಿಃ ತುಱುಗೊಳೆ ಬಾಟೆವೆಂದು ತುಱುಗೋ ಳೊಳೆ ಸಾವುದು ಸೈಪಿದೆಂದು ಪಾಯ್ದು ಱಿಕೆಯ ಗೋವರಣ್ಮ ಬರೆ (ಪಂಪಭಾ. ೮-೯೫): ಮರಪುರ ಪರಿವರಿವರಿದಿಱಿಯಲಾಱದೆ ಕಳ್ದು

ತುಱುಗೊಣ್ಡು (ಎಕ, IV. ಹುಣಸೂ. ೧೧–೬; 1020?); ಸುಶರ್ಮನೃಪಂ ವೀತಾಂಕುಶಂ ತುಱುಗೊಳಲ್ ಪೋಱಮಟ್ಟಂ (ಕಾವ್ಯಾವ. ೧೨೨); ಪೞಿಯೆ ಧರೆ ತುಱುಗೊಳಲ್ ಬಂದಟ್ಟುವುದೆ ರಣದೊಳ್ ಕನಿಷ್ಠವಿದೆ ಚೀ ಕಷ್ಟಂ (ನೇಮಿಪು. ೧೧–೧೫೭). ತೊಱುಗೊಳ್₁ : ಸೋಮಣನ್ವೊಂಕ್ಕಮವಿ ಕುಣಮ್ಮನ್ನು ತೊಱುಗೊಳ್ವಲ್ಲಿ ಪಲರುಮನೋಡಿಸಿ (ಎಕ. X, ಕೋಲಾರ. ೨೩೨–೩; ಸು. 750). [ತುಱು + ಕೊಳ್₁]

**ತುಱುಗೊಳ್₂** 'ತುಱುಗೋಳ್' ನೋ.

**ತುಱುಗೋಳ್,** ತುರಂಗೋಳಂ, ತುಂಬುಂಗೊಳ್, ತುಂಬುಗೊಳ್₂, ತೊಱುಕೊಲ್, ತೊಱುಕೊಳ, ತೊಱುಕ್ಕೊಳ್, ತೊಱುಗೊಳ್₂, ತೊಱುಗೊಳ, ತೊಱುಗೊಳ್ಳ, ತೊಱುಗೋಳ್ (ನಾ). ಶತ್ರುಗಳು ದನಗಳನ್ನು ಹಿಡಿದುಕೊಂಡಾಗ ಅವುಗಳ ರಕ್ಷಣಾರ್ಥವಾಗಿ ಮಾಡುವ ಕದನ; ಗೋಗ್ರಹಣಕಾಲದಲ್ಲಿ ಅವುಗಳನ್ನು ರಕ್ಷಿಸಲು ಮಾಡುವ ಯುದ್ಧ : ತುಱುಗೋಳೊಳ್ ಸಾವುದು ಸೈಪಿದೆಂದು ಪಾಯ್ದುದಾಕೆಯ ಗೋವರಣ್ಣ ಬರೆ (ಪಂಪಭಾ. ೮–೯೫); ತುಱುಗೋಳೊಳ್ ಸತ್ತೊಡೆ ಪುಣ್ಯಮಕ್ಕು (ಚಾವುಂಪು. ೨೭೫). 'ತುಱುವರಿಗಾಳಗ' ಪರಾ. **ತುರುಗೋಳು :** ಈ ವೀರಗಲ್ಲಿನಲ್ಲಿ . . . ಕನ್ನೆಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ (ಶಾಪಮಂ. ೫೧೨ ಸೂಚನೆ). **ತುಱುಂಗೊಳ್ :** ಸಿನ್ದಮ್ಮನಾಡ ಬವರದೊಳು ಕೆಲ್ಲಂಗೆಱೆಯ ತುಱುಂಗೊಳೊಳ್ ××× ಸತ್ತ (ಎಕ. V, ಅರಸೀ. ೯೯–೬; ಸು. 890). **ತುಱುಗೊಳ್₂ :** ಗಂಗಮಹಾಸಾಸಗರಾ ಮಗನ್ಪಾದೆಯನ್ನಿರಟ್ಟ ತುಱು ಗೊಳೊಳ್ ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX, ಹೊಸಕೋ. ೮೮–೩ ; 720) ; ಕುಗ್ಗಲ್ಲಗಾವುಣ್ಡ ತಮುತ್ತಿಬ್ಬೊರ್ ತುಱುಗೋಳೋಳ್ಕಾದಿ ಸತ್ತರ್ (ಎಕ. IV, ಹುಣಸೂ. ೯೭–೮ ; ಸು. 920); ಕಾಡಿಗಾವುಣ್ಡ ತನ್ನೂರ ತುಱುಗೋಳೊಳ್ ತುಱುವ × ಕ್ಷಿಸಿ ಕಾದಿ ಸತ್ತ (ಎಕ. IV, ಗುಂಡ್ಲುಪೇ. ೧೪–೪ ; 995 ?). **ತೊಱುಕೊಲ್ :** ತೊಱು ಕೊಲ್ವಳಿ ಪೆರಿಯವನ್ ಕೋಲ್ಗಳಾಂ[ತು] ಭಿಳ್ದನ್ (ಸೌಇಇ. IX–i, ೨–೮ ; ೪ನೆಯ ಶತ). **ತೊಱುಕೊಳ :** ಸ್ವಸ್ತಿಶ್ರೀ ತೊನ್ದೆಗೊರೆ ಉಕ ×× ತೊಱು ಕೊಳ × ಸತ್ತೋನ್ (ಎಕ. X, ಚಿಂತಾಮ. ೧೧೫–೩; ?). **ತೊಱುಕ್ಕೊಳ್ :** ತೊಱುಕ್ಕೊಳ್ಳಲ್ಪಟ್ಟಾನ್ (ಎಕ. X(8), ಮಾಲೂರು. ೧೧೯–೧; 8ನೆಯ ಶತ). **ತೊಱುಗೊಳ್₂ :** ಎಱೆಯಮ್ಮಂ[ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI–i, ೧೯–೩ ; 883) ; ಮದಲೂರ ಕುಪ್ಪ ನ್ನೊಱುಗೊಳೊಳೆಱಿದು ಸತ್ತು ಸಗ್ಗಿಯಾದನ್ (ಎಕ. X, ಕೋಲಾರ. ೧೪೨–೨ ; 1000 ?). **ತೊಱುಗೊಳ :** × × × ಮೇರು ತೊಱುಗೊಳ ಕಟ್ಟತ್ತೊಡೆ ಮೆಚ್ಚಿ ಕಲ್ನಾಡೊಂದು ಕೊಟ್ಟಂ (ಸೌಇಇ. IX–ii, ೭೦೭–೧; ಸು. ೩ನೆಯ ಶತ). **ತೊಱುಗೊಳ್ಳ :** ಸಿಂಗಪ್ಪ ದುಗ್ಗಯ್ಯ ಸಾಸ್ತನೊರ ತೊಱು ಗೊಳ್ಳ ಧಾಳಿ ಕಳ್ಳರೊಳ್ತೆಳ್ತಿಱಿದು ಅಟ್ಟಿ ಸತ್ತಂ (ಎಕ. IX (S), ಕಾನಕಾ. ೪೮–೧೫ ; 900). **ತೊಱುಗೋಳ್ :** ಶ್ರೀ ಹೆಮ್ಮಯನ ಮಗ ಸಾಸ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯದಂ (ಎಕ. IX (S). ಹೊಸಕೋ. ೧೯೫–೪ ; ಸು. 1000). [ತುಱು + ಕೋಳ್]

**ತುಱುಘಟೆ** (ನಾ). ಒಂದು ಪ್ರದೇಶದ ಹೆಸರು (?) : ಆ ದೇವರ ಅಂಗರಂಗಭೋಗಕ್ಕಂ... ನೈವೇದ್ಯಕ್ಕಂ ತಂಮ ಪ್ರವಿಷ್ಟದ ತುಱುಘಟೆಯ ಮೂಡಣ ಬೆಂಚೆ ಯಿಶಾನ್ಯದಲ್ಲಿ ... ಧಾರಾಪೂರ್ಬ್ಬಕಮ್ಮಾಡಿಕೊಟ್ಟ ಮತ್ತರಾಱು (ಸೌಇಇ. IX–i, ೨೯೫–೧೮ ; 1172). [?]

**ತುಱುಚ₁** 'ತುಱುಚಿ' ನೋ.

**ತುಱುಚ್ಚ** (ನಾ). ತುರಿಯೆಂಬ ಚರ್ಮರೋಗವುಳ್ಳವನು : ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಾವಿಳರುಂ ಬಂದಾ ಮರನ ಫಲವಂ ಮೆಲೆ ನಿರೋಗಿಗಳಾಗಿ (ಧರ್ಮಾಪ. ೭–೪ ವ).
[ತುಱುಚಿ + –ಅ₇]

**ತುಱುಚಿ** 'ತುಱುಂಚೆ' ನೋ.

**ತುಱುಚೆ,** ಚುಱುಚಿ, ತುರಚಿ, ತುರಚೆ, ತುರಿಚೆ, ತುರಂಚೆ, ತುರುಚಿ, ತುರಂಚೆ, ತುಂಚಿಚ, ತುಂಚಿಚೆ, ತುಂಬುಚ₁, ತುಱುಂಚಿ, ತುಂಬುಚೆ (ನಾ). ೧. ಶರೀರಕ್ಕೆ ತಗುಲಿದರೆ ನವೆಯುಂಟುಮಾಡುವ ಒಂದು ಬಗೆಯ ಗಿಡ; ತುರಿಕೆಗಿಡ ; ಉರಿಸಣಿಕೆ (ಕರಾ) : "ದುಸ್ಪರ್ಶಮೆನೆ ತುಱುಚಿಯುಕ್ಕುಂ" (ಮಂಗರಾ. ೪೪–೪೪) ; ಹೆಗ್ಗುಱುಟಿಗೆಯುಂ ತುಱುಚಿಯ ನೊಗ್ಗಿರೆ ತಾಂ ಕೈಪೆಸೋರೆಯ ಬೇರ್ಗಳೊಳೆಲ್ಲಿಂತಗ್ಗಳ ಮೂಸೊರ್ಟ್ಟ ರೆಗಂ ತೆಗ್ಗಿಲ್ಲದೆ ರಚಿಸಿ (ಜಿಮುತ. ೧೬–೧೪೫); ವನಜವನದಲಿ ತುಱುಚಿ ಕಬ್ಬಿನ ಬನದಿ ಕಡಸಿಗೆ ಚೂತವಂಯ ಕಾನನದಿ ಬೊಬ್ಬುಲಿ ಭೀಮಸೇನನ ಇರವು ತವ್ಮೊಳಗೆ (ಕುವ್ಯಾಳ. ೮–೩) : ತೊಳಚಿದೋಂಟದೊಳ್ ತುಱುಚಿ ಪುಟ್ಟುವಂತಿರೆ (ರಾಜಾಶೇ. ೨೭–೭). **ಚುಱುಚಿ :** ೧. ಹಾಳೂರ ಚುಱುಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತುರಚಿ :** ೧. 'ತುರಚಿಬಳ್ಳಿ' ಪರಾ. **ತುರಚೆ :** ೧. ತುರಚೆಯ ಜಾತಿಯ ಗಿಡ (Archangel. ೩೦೯೩). **ತುರಿಚೆ :** ೧. ಧರಣಿಪತಿಯುಹ ನಳನ ಸಭೆ ಯುಲಿ ತುರಿಚೆ ಮಕ್ಕಣದಂತೆ ದುರ್ವಾತಿ ದುರುಳ ಪುಷ್ಕರನೆಂಬ ದಾಯಿಗ ... ಇರುತಿಹಂ (ಅಂಬಿಕಾ. ೩–೫೯) ; ಅವನ ಸಹವಾಸ ಅಂದರೆ ತುರಿಚಿ ಮುಟ್ಟಿದ ಹಾಗೆ (ರೂಢಿ). **ತುರುಚ:** ೧. ತುರುಚನ ಬೇರು, ನೀಲಿಬೇರು ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು (ಸಕವ್ಯ. ೭೧). **ತುರುಚಿ :** ೧. ಬಂಜರು ನೆಲದಲ್ಲಿ ಯಥೇಚ್ಛವಾಗಿ ಬೆಳೆಯುವ ಕಟುಕುಗೊಡಲು ಗಳಿಂದ ಕೂಡಿದ, ಕೆಲವು ಜಾತಿಯ ತುರುಚಿಯು, ಚುರುಚುರುಕನ, –ಗಿಡ (Nettle. ೩೦೯೩) ; ತೋಟಕ್ಕೆ ಕರೆದುಕೊಂಡು ಹೋಗುವುದು ಅಲ್ಲಿ ಬೇಕೆಂದು ನೆಪ ತೆಗೆದು ಜಗಳವಾಡಿ ತುರುಚಿ ಮುಟ್ಟಿಸುವುದು (ಕಳಹು. ೧೧). **ತುರುಚೆ :** ೧. ಮಳೆಗಾಲದಲ್ಲಿ ಆ ಪ್ರದೇಶ ಜೆಗಣೆ, ಚಿತ್ತದ ಬೀಳಲು, ತುರುಚೆಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು (ಕುಡಿಕೂ. ೧೧೪); ಆ ನೋಟದಿಂದಾಗಿ ತುರುಚೆಯನ್ನೊರಸಿದಂತಾಯಿತು (ನಾಡೋಜ. ೧೯೬) ; ರಾಣಿ... ಅಸೂಯೆ ಸಂಶಯವೆಂಬ ತುರುಚೆಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು (ಹಾಹುತ್ತ. ೧೯). **ತುಱಿಚ :** ೧. ತಳವಲು ತುಂಬೆ ನೆಲ್ಲಿ ತುಱಿಚ ಕಿಱುನೆಲ್ಲಿ (ಜಿಮುದ. ೩–೮೯). **ತುಱುಚೆ:** ೧. "ಮರ್ಕಟಿಯೆನಿಕು ಕಪಿಕಚ್ಛು ದುರಾಲಭೆ ತುಱುಚಿ" (ವಸ್ತುಕೋ. ೩೬–೨೦). ೨. ಒಂದು ಬಗೆಯ ಚರ್ಮ ರೋಗ ; ತುರಿ ರೋಗ : ಹಱುವಾಯು ತುಱು[ಪಾಠಾಂ. ಱು]ಚೆಗಳ ಬತ್ತಲೆಯ ಬಾಳ್ವೆಣಂ ಗಳು ಸುತ್ತ ಮುತ್ತಿರಲು (ವಾಗೀರ. ದೇ. ೨೫೪–೨೬). **ತುಱುಚ₁ :** ೧. "ಮರ್ಕಟಿಃ –ಎಕ್ಕೆ, ತುಱುಚ, ಹಿಪ್ಪಲಿ, ಕೋಡಗ" (ಒಷಧಿ. ೧೧೫); ಮೆಣಸು ... ಆಷಾಢಿ, ಸಹದೇವಿ, ತುಱುಚ, ನೀಲಿ, ರುದ್ರಜಡೆ, ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರ ಹರ (ವಿವ್ಯವಿ. ೧೮೩) ; ಹಂಬಿನ ತುಱುಚನಾ ಬೇರು ಸಸಿಗುಪ್ಪೆ . . . ಹತ್ತಿ ಹರಳ ರಸಮಂ ಪೂರೈಸಿ ಕಾಸಿ (ಸೂಪಶಾ. ೨–೧೯) ; ತುಱುಚನ ಬೇರು, ಪರ್ಪಾಟಕ, ಅಮರ ದವಳ್ಳಿ, ಶುಂಠಿ ಇವಿಷ್ಟನು ... ಕಷಾಯವ ಕಾಸಿ (ವೈದ್ಯಸಾ. I, ೩೬೩) : ತುಱುಚನ ಗಿಡು ಸೋಂಕಿದಂತೆ ಬಿಱುಬುಗೊಂಬಳು ಬೆದಱುವಳು (ಹದಿಬ. ೭–೨೬). **ತುಱುಚಿ :** ೧. "ದುರಾಲಭಾ – ತುಱುಚಿ" (ಬಾಹಟೀ. ೨–೨–೮೮) ; ಹಸಿದಡುಣಬಹುದೇ ನಸುಗುನ್ನಿ ತುಱುಚಿ [ಪಾಠಾಂ. ಱುಚಿ] ಯನು (ಅವಹಂ. ೭೧–೩೧೫); ಹಿತ್ತಲ ತುಱುಚಿಯು ತಂದು ಪನ್ನೀರನೆಱದರೆ ಒತ್ತಿದವರ ಹಱಿಕೊಂಡು ತಿಂಬೋದು ಬಿಡಬಲ್ಲುದೆ (ಪುರಂದ. ೫–೫೬–೩). **ತುಱುಚೆ :** ೧. "ಕುಚ್ಛಭಃ –ತು(ಱು)ರುಚೆ" (ಒಷಧಿ. ೨೦); ಕಬ್ಬುನದ

ಬಡಿಗೆಗಳ ಸಸುಗುನ್ನಿದುಱುಜೆ [ಪಾಠಾಂ. ತುಱುಂಚೆ]ಯ ಪುಡಿಯು ತೀವಿದ ತಿತ್ತಿಗಳ ... ಹರಹಿನಲೆಸೆದುದಾ ದುರ್ಗ (ತೊರರಾ. ೬-೭-೧೧).

[<ತುಳು./ತೆಲು. ತುರುಜೆ = ಮುಂಗರವಳ್ಳಿ]

**ತುಱುಜೆ** 'ತುಱುಂಚೆ' ನೋ.

**ತುಱುತುಱು** (ನಾ). ಒಂದು ಅನುಕರಣ ಶಬ್ದ. 'ತುಱುತುಱುತಿನ್' ಪರಾ.

**ತುಱುತುಱುತಿನ್, ದುಱುದುಱುದಿನ್** (ಕ್ರಿ). ಬಹಳ ನವೆಯುಂಟಾಗು.–ಕಡಿತವುಂಟಾಗು ; "ಚುರುಚುರಂ ಉರಿ" (ಪ್ರಭಣ್ಣ) : ಮಿಱುಗುವ ದಾಡೆಯಿಂದಣೆದು ಪೆರ್ದರಿಯುಂ ಕರದಿಂದಮೊತ್ತುತುಂ ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾಮಹೀಜದೊಳ್ ತಱತಱನಾಗಿ ಮಾಱೊರಸುತುಂ ... ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨). **ದುಱುದುಱುದಿನ್** : ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೇೞ್ಗೆಯಿಂ ದುಱುದುಱುದಿಂಬುದು ಕಫದಿನಾ ತ್ರಿದೋಷದ ಪ್ರದುವಿಂದಾಮಿಶ್ರಮಾಗಿ ತೋೞ್ಕರ್ಣಂ ತಮ್ಮೊಳ್ (ಲೋಕೋಪ. ೯-೩). [ತುಱುತುಱು + ತಿನ್]

**ತುಱುನೆಲೆ** (ನಾ). ದನಕರುಗಳನ್ನು ಕಟ್ಟುವ ಅಥವಾ ಕೂಡುವ ಸ್ಥಳ ; ಕೊಟ್ಟಿಗೆ : ಮಾನವಮುದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ (ಲೀಲಾವ. ೫-೧೦೦).

[ತುಱು + ನೆಲೆ]

**ತುಱುಪಟ್ಟಿ, ತುರುಪಟ್ಟಿ, ತುರುಹಟ್ಟಿ, ತುಱುವಟ್ಟಿ, ತುಱುಹಟ್ಟಿ** (ನಾ). ೧. ದನಕರುಗಳ ಹಟ್ಟಿ ; ದನಕರುಗಳನ್ನು ಕಟ್ಟಿಹಾಕುವ ಸ್ಥಳ ; ಕೊಟ್ಟಿಗೆ ; ಗೋಸ್ಥಾನ : "ಗೋಷ್ಠಂ, ಗೋಸ್ಥಾನಕಂ, ಈ ೨ ತುಱುಪಟ್ಟಿಯ ಹೆಸರು" (ನಾಚಿರಾ. ೧೦೩) : ಗೋಟ್ಟೀ–ತುಱುಪಟ್ಟಿ [ಪಾಠಾಂ. ಳ್ಳಿ] ಯೊಳ್ (ವಡ್ಡಾರಾ. ೧೮೦-೫) ; ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣವೆಂದೆಂಬ ತುಱುಪಟ್ಟಿ[ಪಾಠಾಂ. ಟ್ಟೆ]ಯೊಳು ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು (ಕುರಾಸಾಂ. ೨೦-೬೫). ೨. ...ವಾಸಿಸುವ ಹಳ್ಳಿ ; ಗೊಲ್ಲರ ದೊಡ್ಡಿ : ತುಱುಗಾರ್ತಿಯುಂ ಕರೆದು ಪುತ್ರಲಾಭಮಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊ ಸಗೆಯುಂ ಮಾಡಿ (ಧರ್ಮಾಮೃ. ೧೦-೧೫೦) ; ಅಲ್ಲಿಗೆ ಸಮೀಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋಪನೆಂಬಂ (ಬಂಹರಿ. ೬-೫೮) ; ಗಂಗಾ ತೀರದ ತುಱುಪಟ್ಟೆ [ಟ್ಟಿ] ಯೊಳಗೆ ವೃಷಭಂಗಳಾಗಿ ಸಂಜನಿಸಿ (ನೇಮಿಸಂ. ೭-೨೨) ; ಸಂತತಾಶ್ರಮ ತಪೋವನಗಳು ತುಱುಪಟ್ಟಿ ಮುಂತಾದುವು ಘೋಷಾಕರವು (ಶಾಂತೀಶ. ೮-೭೨) : ಸಲೆ ಪೆಂಪೊಗೆದ ಡಂಗುರ ಸಾಱಿಸಲು ತುಱುಪಟ್ಟಿಯುಲಿ (ಸಾಳ್ವಭಾ. ೨೨-೨೫). ೩. (ಆಲಂ) ಹಳ್ಳಿಯ ಜನ : ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟುಪೋದತ್ತು (ವಡ್ಡಾರಾ. ೧೦೩-೨೩). **ತುರುಪಟ್ಟಿ** : ೧. ಅಮೃತಶಿಲೆಯ ಗೋಶಾಲೆ ತಂತುಕಾರಸಹಸ್ರಜಾಲಮೈರೂಪ್ಯದಿಂ . . . ಖಿನ್ನಮಿದೆ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦-೧೧). **ತುರುಹಟ್ಟಿ** : ೧. ಒಮ್ಮೊ ನಮ್ಮ ತುರುಹಟ್ಟಿಗೆ ಹುಲಿ ನುಗ್ಗಿತ್ತು (ರೂಢಿ). **ತುಱುವಟ್ಟಿ** : ೧. ಸುರಧೇನುಸಂಚಯಂ ಸರ್ಪಭೂಷಣನ ತುಱುವಟ್ಟಿಯೆನೆ ಚೆನ್ನಾದುದರಸು ತನಮಂದೀಶನ (ಚಬಪು. ೨೯-೪೨) ; ತುಱುವಟ್ಟಿಯಿಂದ ತೊಪ್ಪಿಂದ ತಣ್ಣೆಳಲಿಂದ ಕೆಱೆ ಕಟ್ಟೆಯಿಂದ (ನಂದಿಮಾ. ೧೫-೧೬). **ತುಱುಹಟ್ಟಿ** : ೧. ಗೋಷ್ಠಾಧ್ಯಕ್ಷ, ಗೋವಿಂದ–ತುಱುಹಟ್ಟಿಯ ಅದ್ದಿಕದವನು(ನಾಚಿರಾ.೪). ೨. ನಾಡೊಳಗೆ ತುಱುಹಟ್ಟಿಯುಲಿ ಹೊಲನಾಡಿ ಹೆಚ್ಚಿದ ಗೋಕದಂಬವ ನೋಡುವುದು ನೆವ (ಕುವ್ಯಾಅ. ೧೭-೨೦). 'ಕಱುಹಟ್ಟಿ' ಪರಾ.

[ತುಱು + ಪಟ್ಟಿ$_1$]

**ತುಱುಪರಿ** 'ತುಱುವರಿ' ನೋ.

**ತುಱುಪರಿಗ** (ನಾ). = ತುಱುಂಗೋಳ್(?) : ಅಂತಾತನನುಜ ದೇಕರಸ ತುಱುಪರಿಗವೆಂಬ ಪುಯ್ಯಲ ನೆಱೆಯಾಲಿಸಿ ಕೇಳ್ದು (ಎಕ. XII, ಚಿಕ್ಕನಾ. ೧೮-೨೬ ; 1215 ?). [ℙ ಇದು 'ತುಱುಪರಿಗುಂ' ಎಂಬುದರ ಅಪಲಿಖಿತ ವಿರಬಹುದು]

**ತುಱುಪಳ್ಳಿ** 'ತುಱುವಳ್ಳಿ' ನೋ.

**ತುಱುಪಳ್ಳಿಕಾಱ** (ನಾ). ಗೊಲ್ಲರ ಹಳ್ಳಿಯವನು ; ಗೊಲ್ಲ; ಗೋವಳಿಗ : ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱುಪಳ್ಳಿಕಾಱರ ಪುರದ ಭಾಸ್ಕರನೀತನಲ್ಲಾ (ಕುವ್ಯಾಸ. ೮-೧೭).

[ತುಱುಪಳ್ಳಿ (<ತುಱುವಳ್ಳಿ) + – ಕಾಱ]

**ತುಱುಬಿಕ್ಕು, ತುರುಬಿಕ್ಕು** (ಕ್ರಿ). ತುರುಬನ್ನು ಹಾಕು ; ಕೂದಲನ್ನು ಗಂಟುಕಟ್ಟು : ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿಯೊಡನೆ ಪೇಳಿದರು (ಮೋಹತ. ೯-೧೬). **ತುರುಬಿಕ್ಕು** : ಉಳ್ಳಲರ ಹೂವೀಡ ತುರುಬಿಕ್ಕಿ ಮುಡಿಸಿ (ಕಾಲೂರ. ೧೮೩-೪೧೪).

[ತುಱುಬು$_2$ (<ತುಱುಂಬು$_2$) + ಇಕ್ಕು]

**ತುಱುಬು$_1$** 'ತುಱುಂಬು$_1$' ನೋ.

**ತುಱುಬು$_2$** 'ತುಱುಂಬು$_2$' ನೋ.

**ತುಱುಮಂದೆ, ತುರುಮಂದೆ** (ನಾ). ೧. ದನಗಳ ಹಿಂಡು, – ಗುಂಪು : "ತುಱುಮಂದೆಯುಕ್ಕತಿ ಗೋವೃಷಂ" (ಮಂಗರಾ. ೫೬-೧೦) : "ತುಱು ವಿಂಡು ತುಱುಮಂದೆಯುಕ್ಕು ಗೋಸಮುದಾಯವು" (ಶಬ್ದಮಂ. ೩೪) : ನಾನಾರೆಂಬುದ ತಾನಱಿತು ತಿಳಿದಲ್ಲಿ ತುಱುಮಂದೆಯೊಳಗಾಯಿತ್ತು (ತುಱುಗಾ. ೪-೬) ; ಈಗಳೊ ನೀನ್, ನಿನ್ನಯ್ಯನವೆ ತುಱುಮಂದೆಗಳ್ ವೇಣ್ ತುಱುಪಟ್ಟಿಗಳ ಬಱಿಯ ... ಪುಲ್ಗಾವಲೆಡೆಗೊರ್ವಳೇ ಚೆಚ್ಚರಂ ಬೋಗು (ಬದ್ಮಪ್ರ. ೩೪-೭೪೨). ೨. ಗೋವುಗಳು ಇರುವ ನೆಲೆ ; ಕೊಟ್ಟಿಗೆ ; ಗೋಸ್ಥಾನ ; ಗೋಕುಲ : (ಕ). **ತುರುಮಂದೆ** : ೧. "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು" (ಕಶರ. ೪೭) ; ತುರುಮಂದೆಯಲ್ಲಿ ಇರುವ ಪದ್ಧತಿಯಾಗಿದ್ದುದರಿಂದ (ನಮ್ಮೂರ. ೬೬). [ತುಱು + ಮಂದೆ]

**ತುಱುವಿಂಡಿ, ತರಿವಿಂಡಿ, ತಱಿವಿಂಡಿ, ತಱುವಿಂಡಿ, ತುರುಮಿಂಡಿ** (ನಾ). ೧. ಹೊಸಪ್ರಾಯದವಳು ; ಮೈನೆರೆದ ಹೆಣ್ಣು ; ನವ ಯೌವತಿ : "ತುಱುವಿಂಡಿಯೆನೆ ನೆಱೆದ ಪೆಣ್ಣಕ್ಕು" (ಶಬ್ದಮಂ. ೭೪) : ಪಾಡಿದರ್ ತುಱುವಿಂಡಿಯರಮೃತೋಪಮಾನಗಾನಮನೊಲವಿಂ (ಉದ್ಯಟ. ೨-೧೦೮). ೨. ಮುಟ್ಟಾದವಳು : "ತುಱುವಿಂಡಿಯಾರಯ್ಯೆ ಪುಷ್ಪವತಿಯಾದವಳ್" (ಕಬ್ಬಿಕ್ಕೆ. ೨೬). **ತರಿವಿಂಡಿ** : ೧. ತರಿವಿಂಡಿಯರ್ನಡೆದರೊಡಲಳವಿನಿಂ ಮಲೆಯ ಬೆರೆವ ಪೊರೆಯುಂ ಪೊತ್ತು (ಕಾಲೂರ ೧೨೪-೨೬೧). **ತಱಿವಿಂಡಿ** : ೧. ತುಱುಗಿದಾಭರಣಗಳೋರೆಕೋರೆಯ ತಿದ್ದಿ ತ [ಪಾಠಾಂ. ಸ]ಱಿವಿಂಡಿಯನುವಾದಳಾಗ (ಭರಚ. ೧೦-೭೬) ; ರಣಕೆ ಪೋಪವಸರದೊಳ್ ತಱಿವಿಂಡಿಯಪ್ಪ ತನ್ನಯ ಮಡದಿಯನಿಕ್ಷುಮತಿಯುಂ ಕಂಡು (ರಾಮಾಶ್ವ. ೧೩೦-೨೬). ೨. "ತಱಿ[ಪಾಠಾಂ. ತುಱು]ವಿಂಡಿಯೆಂದು ಪುಷ್ಪಿತೆಯಾದ ಕಾಂತೆ" (ಕಶಸಾ. ೬೨-೩೭೨) ; "ತಱಿ [ಪಾಠಾಂ. ತುಱು]ವಿಂಡಿಯೆನಲು ಪುಷ್ಪಿತೆ" (ಕವಿಕಂ. ೧೬೪). **ತಱುವಿಂಡಿ** : ೨. "ತಱುವಿಂಡಿ–ರಜಸ್ವಲೆ, ಮುಟ್ಟಾದ ಹೆಂಗಸು, ಪುಷ್ಪಿತೆ" (ಪ್ರಭಣ್ಣ). **ತುರುಮಿಂಡಿ**:೧."ತುರುಮಿಂಡಿಯೆಂದೆನಲ್ ಪ್ರಥಮಋತುವಾದ ಕಾಮಿನಿ" (ಕಶರ. ೪೭); "ತಱುವಿಂಡಿ–ತುರುಮಿಂಡಿ=ಬೆಳೆದ ಹುಡಿಗೆ, ಹೆಣ್ಣಾದವಳು" (ಜಾನಕೋ. ೩೭). 'ಸಱಿವಿಂಡಿ' ಪರಾ. [<ತುಱುಗು$_1$ + ವಿಂಡಿ]

**ತುಱುಯ್ಯಲು** 'ತುಱುಹುಯಲು' ನೋ.

**ತುಱುವಟ್ಟಿ** 'ತುಱುಪಟ್ಟಿ' ನೋ.

**ತುಱುವರಿ, ತುಱುಪರಿ, ತುಱುಹರಿ$_2$** (ನಾ). = ತುಱುಗೋಳ್ : ಮಾದೆಯ ಹರಿಹರಂಗಳು ಸಂಕರಸೆಟ್ಟಿಯ ಹಳ್ಳಿಯ ತುಱುವರಿಯಲು ಹರಿದು ಸ್ವರ್ಗಸ್ತನಾದನು (ಮೈಆರಿ. ೧೯೩೮, ೪-೪; 1291). **ತುಱುಪರಿ** : ಬೆಳ್ಳತ್ತೂರ್ಗದ ಗಾವುಣ್ಡಂ ತುಱುಪರಿಯಲಿ ಸತ್ತಂ (ಎಕ. XII, ತಿಪಟೂ. ೧೧-೩; ಸು. 930); ಗನಪಳ್ಳಿಯ ಎೞ್ಸಂದಂ ಕಾಸನರ ಭೀಮಂ ಉರುಱಿವಿನೊಳ್ ತುಱುಪರಿಯ ಮಾಣ್ಚಿ...ಸುರಲೋಕಕ್ಕೆ ಸಂದನ್ (ಎಕ. VIII(s), ಸೊರಬ. ೫೭೫-೩; 981). **ತುಱುಹರಿ$_2$** : ಶ್ರೀಮತ್ಕದಂಬರ ಸಾ ನ್ತ ಯ ದೇವ ಗುಡುವೆಯನಿಱಿದು ತುಱುಹರಿಯ ಕಾದಿಸಿ ತುಱುವಿಂಗಡ್ಡಂ ಬನ್ದು (ಎಕ. VIII, ಸೊರಬ. ೬೦-೧೭; 1032) ; ತುಱುಹರಿಯಲು ಕಾದಿಸಿದವರು ...ಸುರಲೋಕಪ್ರಾಪ್ತವಾದರು (ಎಕ. XVI, ಚಿಕ್ಕನಾ. ೬೦-೩; 1123) ; ಮತ್ತಿಗಟ್ಟದ ಮುದ್ದಗ × × × ಗಜಕ್ಕಗವುಣ್ಡಂಗಂ ಪುಟ್ಟಿ × ಮಾರಗವುಡ ತುಱುಹರಿಯಲು...ಸುರಲೋಕಪ್ರಾಪ್ತನಾದಂ (ಎಕ. XII, ತಿಪಟೂ. ೩೯-೮; 1291). [ ತುಱು + ಪರಿ$_3$ ]

**ತುಱುವರಿಗಾಳಗ** (ನಾ). ಹಸುಗಳನ್ನು ಅಪಹರಿಸಂವಾಗ ಮಾಡುವ ಯುದ್ಧ; ಗೋಗ್ರಹಣನಿಮಿತ್ತವಾದ ಕಾಳಗ.-ಯುದ್ಧ : ತುಱುವರಿ [ಪಾಠಾಂ. ಬರೆ. ಹರಿ] ಗಾಳಗದೊಳೊಡೆಮುರಿದು ಗೋವರು ಧೂಳಿಗೋಟೆಯ ಕೊಂಡರಮಾರರ ರಾಜಧಾನಿಗಳ (ಕುವ್ಯಾವಿ. ೫-೩). 'ತುಱುಗೋಳ್' ಪರಾ. [ ತುಱುವರಿ + ಕಾಳಗ ( <ಕಾಳೆಗ) ]

**ತುಱುವಳ** 'ತುಱುವಾಳ' ನೋ.

**ತುಱುವಳ್ತಿ, ತುರುವಳ್ತಿ** (ನಾ). ಗೊಲ್ಲರ ಹೆಂಗಸು; ಗೊಲ್ಲಿತಿ; ಗೋಪಿ: "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಶಬ್ದಮಂ. ೩೪). **ತುರುವಳ್ತಿ** : "ತುರುವಳ್ತಿಯೆನೆ ಗೋಪತರುಣಿ" (ಕಶರ. ೪೭).
[ ತುಱುವಳ (<ತುಱುವಾಳ) + -ತಿ$_1$ (< - ಇತಿ) ]

**ತುಱುವಳ್ಳಿ, ತುಱುಪಳ್ಳಿ** (ನಾ). = ತುಱುಪಟ್ಟಿ ೨ : "ಘೋಷ ತುಱುವಳ್ಳಿಯು ತಾಂ" (ಕವಿಕಂ. ೮೫). **ತುಱುಪಳ್ಳಿ**: ತುಱುಪಳ್ಳಿಯ ಗೋವುಳಿಗರೊಳ್ಳೋಟೆಗೆಯ್ದು ಱಿದಾಡುವ ಬೇಡಿನೆರ್ವರ್ಗಳಂ ಪಿಡಿದಂತರಸ ಗೆರ್ೂಪ್ಪಿಸುವುದುಂ (ಸುಕುಮಾ. ೭-೩೫ ವ) : ತುಱುಪಳ್ಳಿಗಳ ನೋಡಿ ವನಾಳಿದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ... ನೃಪ ಬಿಡಿಸಿದನು ಪಾಳೆಯವ (ಕುವ್ಯಾಅ. ಓರಿಇ. ೧೯-೧). [ತುಱು + ಪಳ್ಳಿ$_1$]

**ತುಱುವಟ್ಟಿ** (ನಾ). (?) : ಕರಪುರನ್ ಬನ್ದು ಬಲ್ಲದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟೋನ್ (ಎಕ. X, ಮುಳಬಾ. ೯೨-೭; ಸು. 780). [ ? ]

**ತುಱುವಾಳ, ತುರುವಳ, ತುಱುವಳ, ತೊಱುವಳ್ಳ, ತೊಱುವಾಳ** (ನಾ). ದನವನ್ನು ಕಾಯುವವನು; ಗೊಲ್ಲ; ಗೋವಳ : "ಗೋಪತಿ ಗೋವಿಯೆನಲು ತುಱುವಾಳನಕ್ಕು" (ಮಂಗರಾ. ೫೬-೧೦). **ತುರುವಳ**: "ತುರುವಳರೆನಲ್ಕೆ ಗೋಪರು" (ಕಶರ. ೪೭). **ತುಱುವಳ**: "ತುಱುವಳನೆಂದು ಗೋಪಾಳಂ" (ಕಶಸಾ. ೭-೧೨೭) ; "ತುಱುವಳರೆನೆ ಗೋಪಾಲರ್" (ಕವಿಕಂ. ೮೫) : ನರಸಿಂಹಸೆಟ್ಟಿ ಕೊಟ್ಟ ಗ ೨ ತುಱುವಳ ಮಾಳಗತಿ ಕೊಟ್ಟ ಗ ೧ (ಎಕ. VI, ತರೀಕೆ. ೮೭-೧೧; 1239) ; ಪಳ್ಳಿಯ ತುಱುವಳನಂತಿರೆ ಹಸುವನೇನೆಂದು ಕಟ್ಟಿದಯ್ (ರಾಮಾಶ್ವ. ೧೫೩-೨೧). **ತೊಱುವಳ್ಳ** : ಕರಪುರನ್ ಬನ್ದು ಬತದಾ ತೊಱುಗೊಳೆ ಊರಾ ತೊಱುವಳ್ಳ ಉವಟನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟೋನ್ (ಎಕ. X, ಮುಳಬಾ. ೯೨-೬; ಸು. 780). **ತೊಱುವಾಳ್ಳ** : ಸೆಬ್ಬಿಣ್ನಾಡ ಮಾಜನ ಮೂವತ್ತೀರ್ಚ್ಚರ ಅಳ್ತೊಡುಗೆಯನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಬಿಟ್ಟಾನ್ (ಎಕ. X (s), ಮಾಲೂರು. ೧೫೬-೬ ; 8ನೆಯ ಶತ). [ತುಱು + - ವಾಳ$_1$]

**ತುಱುವಿಂಡು, ತುರುವಿಂಡು** (ನಾ). ದನಗಳ ಮಂದೆ ; ದನಕರುಗಳ ಸಮೂಹ : ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿದಱಿಸಿದು ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬) ; ತುಱುವಿಂಡನೊತ್ತಟ್ಟಿನೊಳ್ಬಿಟ್ಟು ... ಐತಂದರ್ (ಶ್ರೀರಾಮ. ೪-೧೪). **ತುರುವಿಂಡು** : "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು" (ಕಶರ. ೪೭) ; ವರುಣನು ಒಂದು ಹೋರಿಯನ್ನು ಕಳುಹಿಸಿದನು ... ಅವರ ಸಾಧು ಸ್ವಭಾವವನ್ನು ನೋಡಿ ಚಕ್ರವರ್ತಿಯು ಅದನ್ನು ತನ್ನ ತುರುವಿಂಡಿನಲ್ಲಿ ಸೇರಿಸಿಕೊಂಡನು (ಮಚಸ. ೯೫).
[ತುಱು + ಪಿಂಡು$_2$]

**ತುಱುವಿಡು** (ಕ್ರಿ). (ಅಪಹಾರವಾದ) ದನಗಳನ್ನು ಮರಳಿಸು,- ಕಾಪಾಡು (?) : ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ವಿಟ್ಟಂ (ಎಕ. X, ಮುಳಬಾ. ೨೬೫-೨ ; ಸು. 860). [ತುಱು + ಬಿಡು$_1$]

**ತುಱುವೆ, ತುರುಬಿ, ತುರುಬೆ, ತುರುಂಮೆ, ತುರುವೆ$_2$** (ನಾ). ೧. ಒಂದಂ ಬಗೆಯ ಹೂವಿನ ಗಿಡ : ತುಱುವೆಯು ಬೇರನಿಕ್ಕಿ ... ಘೃತಮಂ ಬೆರಸಿಟ್ಟು (ಲೋಕೋಪ. ೮-೧೦) ; ಪೊಂಗಳನೆ ಗೋಪಿಯರ್ ಕೆದಱಿದವೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೧೧೫) ; ತುಱುವೆಯ ಕಾಯ್ಗಳುಮಂ ಮಂಗುಱುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ನೆಱೆ ತಿಂದು ಬಿಸಿಯ ನೀರಂ ಕಿಱಿದುಗೊಳಲ್ಕಱಿಯದುಱಿಗುಮೇ ಕೆಯ್ಮಸಕಂ (ಖಮದ. ೧೪-೪೨); ತುಱುವೆಯ ಬೇರು ಮಾದಲದ ಕಡ್ಡಿಗಳನು ಇಟ್ಟು ತೊಳಸಿದೊಡೆ (ಸೂಪಶಾ. ೨-೩). ತುಱುವೆ :—ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿವೈವಿ. ೪). ೨. ಒಂದು ಬಗೆಯ ಹಕ್ಕಿ : ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಱುವೆ ಕಳ[ ಪಾಠಾಂ. ತುರುವೆಗಣ್ಣಂ ] ಹಂಸೆ ಶುಕ ಪಾರಿವದ ದನಿಗಳಿಂದೊದಱಿ ತಾವ್ ಕರೆವುತಿರಲು (ಸೋಮಚ. ಪರಿ. ೨೧೪) ; (ಹಚಕಾ. ೫-೪೨ ನೋ). **ತುರುಬಿ** : ೧. ಶ್ರೀಮುದ್ರೆಗಿಡ... ತುರುಬೀಗಿಡ, ಗಿಡುತಿಂಗಿ (ಮೈಔಗಿ. ೧-೬). **ತುರುಬೆ** : ೧. ಬೇವಿನ ಸೊಪ್ಪಿನ ಕಿಚ್ಚುಮಾಡಿ ಅದರಲ್ಲಿ ತುರುಬೆ, ತುಂಬೆ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೧೬೬); ನಮ್ಮ ಹುಡುಗಿ ಮಾಘಗೌರೀಪೂಜೆಗೆ ತುರುಬೆ ಹೂವು ಕೊಯ್ದುಕೊಂಡು ಬರಲು ಹೋಗಿದ್ದಾಳೆ (ರೂಢಿ). **ತುರುಮೆ** : ೧. "ತುತ್ಥ-ತುತ್ಥಿ, ತುರುಮೆ" (ಓಷಧಿ. ೭೦). **ತುರುವೆ$_2$** : ೧. "ಭೂರಿಬಲಾ-ತುರುವೆ" (ಓಷಧಿ. ೧೧೨) : ಮೂಲಿಕಾ ಪ್ರಯೋಗ . . . ತುರುವೆಯ ಬಡಗ ಹರಿದ ಬೇರಂ ತಂದು ಕಿವಿಗೆ ಕಟ್ಟಲು ಛಳಿ ಬಿಡುವುದು (ಸಕವೈ. ೭೫).

**ತುಱುಸೆಱೆ** (ನಾ). ಹಸುಗಳನ್ನು ಸೆರೆ ಹಿಡಿಯುವುದು ; ಗೋಗ್ರಹಣ : ಅರಿ ವಿರಾಟನ ಪುರಕೆ ಹಾಯಿದು ತುಱುಸೆಱೆಯ ತೆಗೆಸುವೆವು (ಕುವ್ಯಾವಿ. ೪-೧೯) : ಸಂಗಣ್ಣನು ಮೂಗೂರಿಂಗೆ ಹಳ್ಳಿಹಿರಿಉರ ಸಮಸ್ತ ಪ್ರಜೆಗಉಡುಗಳ ತುಱುಸೆಱೆಯನಿಱಿದು ಕೊಂಡು ಹೋದಲ್ಲಿ (ಎಕ. XIV, ತಿರುಮ. ೨೨೩-೪ : ?). [ತುಱು+ಸೆಱೆ$_3$]

**ತುಱುಸೆಱೆಗೊಳ್** (ಕ್ರಿ). ಹಸುಗಳನ್ನು ಸೆರೆಹಿಡಿ : ಅರಮನೆಯ ಸೀಮೆಯೊಳ್ ದಾಟಿಟ್ಟು ತುಱುಸೆಱೆಗೊಂಡುವಱಿಂದಂದಂದಿಗೆವರ್ಪ ಧನ ಧಾನ್ಯಂಗಳಡಂಗಿ (ಜಿಕವಂ. ೪೫-೧೧). [ತುಱುಸೆಱೆ + ಕೊಳ್$_1$] .

**ತುಱುಸೆಱೆವಿಡಿ** (ಕ್ರಿ). ಹಸುಗಳನ್ನು ಸೆರೆಹಿಡಿಯುವ ಹಾಗೆ ಗುಂಪು ಗುಂಪಾಗಿ ಹಿಡಿ : ಒಱಲ್ದೆಱಗುವ ಪಱಮೆವಱಿಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಿಂಬಾದ ಪೊಂಬಾಱೆಗಳಿಂ ಬಳ್ಳುವಡಕೆಯ ಸಾಲಳೊಳಂ (ಕಬ್ಬಿಕಾ. ೩೦). [ತುಱುಸೆಱೆ + ಪಿಡಿ$_1$]

**ತುಱುಹಟ್ಟಿ** 'ತುಱುಪಟ್ಟಿ' ನೋ.

**ತೆಗೆಯಿಸು, ತೆಗಸು, ತೆಗಿಸು, ತೆಗೆಸು (ಕ್ರಿ).** ೧. ಹೊರಕ್ಕೆ ತರು ; ಹೊರ ಬರುವಂತೆ ಮಾಡು : ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ (ವಡ್ಡಾರಾ. ೧೮೫-೨೩) ; ಎಲ್ಲಂ ನೆಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱಿ ತೆಗೆಯಿಸುತ್ತುಂ (ಪಂಪಭಾ. ೧೦-೨೮) ; ನಾನಿಂದಧರ್ಮದೊಳಿದ್ದರೆ ತೆಗೆಯಿಸು ಅಲ್ಲಿಯೆ ನೆಲನಿಲ್ಲದಂತೆ (ಇಂಚಾಪ. ೧೧೭-೯೯). ೨. ಬರುವಂತೆ ಮಾಡಂ ; ಆಕರ್ಷಿಸಂ : ಆ ಸ್ಥಿರಪ್ರಕೃತಿಯ ಸತ್ಯ ಪ್ರಕೃತಿಯೆ ತೆಗೆಯಿಸಿದಪುದಾ ದಕ್ಷಿಣಹೃದಯೆಯ ದಕ್ಷಿಣತ್ವಮೆ ಗಮಿಯಿಸಿದಪುದಾ . . . ಮ ಹೋ ದಾ ರೆ ಯು ದಾ ರ ತೆ ಯೆ ಮನಂಗೊಳಿಸಿದಪ್ಪುದು (ಕಾದಂಉ. ೮೦೪). ೩. ಇಳಿಸು ; ಕೆಳಕ್ಕೆ ತರಿಸು : ಆಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದಬಲ್ಲ ಗುಂಡಿಗೆಯಂ ಕಂಡು ತೆಗೆಯಿಸಿ ಕೊಂಡು ಪೋಗಿ (ವಡ್ಡಾರಾ. ೯೦-೧೭). ೪. ಸಾಗಿಸು ; ಕಳುಹಿಸು : ಕನಕರತ್ನಾಭರಣಜಾಳಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತುಂ (ಬಸರ. ೭-೩೩). ೫. ಹೊರ ಹಾಕು ; ಬಹಿಷ್ಕರಿಸು : ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ . . . ಅಲ್ಲಿ ಬರುತ್ತದೆ (ಕುಡಿಕೊ. ೧೩೭). ೬. ಕೊಂಡುಕೊಳ್ಳು ; ಕ್ರಯಕೊಟ್ಟು ಪಡೆ : ಗಜನೂರಿನಲ್ಲಿ ಏನಾದರೂ ತಿಂಡಿ ತೆಗೆಯಿಸಿಕೊಂಡು ತಿನ್ನೋಣವೆಂದಂದು ಕೊಂಡೆ (ಹಂಗಾಳ್ಸ. ೪೯). ೭. ಬಿಡು ; ತೊರೆ ; ತ್ಯಜಿಸು : ಕುಮ್ಮಟವನು ತೆಗೆಯಿಸಿದರೆ ಕಾರ್ಯವನುಗೆಡುವುದು . . . ಅದಱಿಂದದ ಬಿಡುವುದು ಮನುಜೇಶ್ವರ ನೀತಿಯಲ್ಲ (ಕುರಾಸಾಂ. ೩೭-೪೮). ೮. ಕಳಚುವಂತೆ ಮಾಡು ; ಬಿಚ್ಚುವಂತೆ ಮಾಡು : ವೇಷವನ್ನು ತೆಗೆಯಿಸಿ, ಬಣ್ಣವನ್ನು ತೊಳಸಿ ಕಳಿಸಿದಾಗ ಬೆಳಗಾಗಿತ್ತು (ರೂಢಿ). ೯. ಕೊಲ್ಲಿಸಂ ; ಸಂಹರಿಸಂ ವಂತೆ ಮಾಡು : ಬಂಟರಂ ಕೊಂಡಾಡುವರ ಗಂಟಲೊಳ್ ನೇಣನಿಕ್ಕಿ ತೆಗೆಯಿಸುವಂ (ಧರ್ಮಾಮೃ. ೨-೭೭). **ತೆಗಸು :** ೪. ಹಿರಿಯ ಕಣಜದ ದವಸವೇನುವನಿರಿಸದೀಗಳ್ ತೆಗ[ಪಾಠಾಂ. ಗೆ]ಸು (ಬಸಪು. ೫೩-೧೮); ತೆಗ[ಪಾಠಾಂ. ಗೆ]ಸಿದನು ಬಳಿಕುತ್ತಮದ ತೊಡವುಗಳ ದಿವ್ಯದುಕೂಲರತ್ನಾಳಿ ಗಳಿನನುಪಮ ಗಜಹಯಾದಿ ಸಮಸ್ತವಸ್ತುಗಳ (ತೊರರಾ. ೦-೬-೨). ೯. ಲೋಹಶೂಲದೊಳಿನಿಬರುಂ ತೆಗ[ಪಾಠಾಂ. ಗೆ]ಸುವೆನು ತಲೆಕೆಳಕಾಗಿ ನಿಮ್ಮು ವನು (ಬಸಪು. ೫೦-೫೦). ೧೦. ಹೊಳು, ಕಸ ಮೊದಲಾದಂವನ್ನು ಹೊರಗೆ ಹಾಕು,– ಎತ್ತಿಹಾಕಂ: ಪ್ರತಿ ವರುಷಉ ಕಱಿಯ ತೆಗಸುವ ಹಾಗೆ ಕೊಟ್ಟ ಸ್ವಾಸ್ತಿ (ಎಳ. VII(8), ಶಿಕಾರಿ. ೨೩೪-೧೦; 1526). ೧೧. ಕೀಳುವಂತೆ ಮಾಡು ; ಕೀಳಿಸಂ : ಅವರಂ ಕರೆಸಿ ಕಣ್ಣಂ ತೆಗ[ಪಾಠಾಂ. ಗೆ]ಸಿದನು (ಬಸಪು. ೬೧-೪). ೧೨. ನಿವಾರಿಸಂ ; ಹೋಗಲಾಡಿಸು : ಒಟಲುವಮರರ ಬಾಯಿ ಕೈಗಳ ಮೊರೆಯೆ ತೆಗಸಿ ಮಹಾಗಣಂಗಳೊಳಿರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುಪ್ವಾಶ. ೭-೨೯). ೧೩. ಹಿಂದಕ್ಕೆ ತೆಗೆದಂಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಬಲುಕಾಳೆಗವನೊಯ್ಯಾರಿಸುತ ರಾಯರು ತೆಗಸಿದರು ಸೇನೆಯನು (ಕುಪ್ವಾಭೀ. ೪-೧೦). ೧೪. ಹಿಂದಕ್ಕೆಬರುವಂತೆ ಮಾಡು; ಹಿಮ್ಮೆಟ್ಟಿಸಂ: ತೆಗಸಿದನು ಸಾತ್ಯಕಿಯನೀತನ ಬಿಗಿದನಂಬಿನಲವನ ಬಾಣಾಳಿಗಳ ಕಡಿದನು ಘಾಸಿಮಾಡಿದನವನ ರಥಹಯವ (ಕುಪ್ವಾಕ. ೪-೬) ; ಪ್ರವೀರನಂ ತೆಗ[ಪಾಠಾಂ. ಗೆ]ಸಿದರ್ಪಿನ್ನೆಲೆಗೆ (ಜೈಮಿಭಾ. ೮-೩೦). ೧೫. ತೆರೆಯುಂವಂತೆ ಮಾಡು ; ತೆರೆಯಿಸು : ಬಂದನಿತಱಿಂದಿಂದುಶೇಖರನಿಂದೆ ಕದಹುಗಳಂ ತೆಗ[ಪಾಠಾಂ. ಗೆ]ಸಿ (ಬಸಪು. ೪೪-೧೮). **ತೆಗಿಸು :** ೧೦. ಎಂಜಲ ತೆಗಿ [ಪಾಠಾಂ. ಗೆ]ಸಿ ಸಾರಿಸಿದನು (ಕುಪ್ವಾಸ. ೭-೧೭) . ೧೫. ಸೌರಾಷ್ಟ್ರೇಶ ಸೋಮೇಶ ನೀಂ ತೆಗಿಸೀ ಬಾಗಿಲ ಪೊಂಗದಂಗಳನೆನುತ್ತಂ (ಉದ್ಭಟ. ೧೧-೭೦). **ತೆಗೆಸು :** ೧. ಫಲುಗುಣ ಹೊಕ್ಕನಾಯುಧಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ (ಕುಪ್ವಾದ್ರೋ. ೯-೦); ತೆಗೆಸಿದನು ಬಳಿಕಿನಕುಲದ ಪೀಳಿಗೆಯ ನೃಪರಾರ್ಜಿಸಿದ . . . ಅಖಿಳ ವಸ್ತುಗಳ (ತೊರರಾ. ೧-೬-೪). ೭. ಹೊಸಮಲೆಯನು ಬಲಿಯಿಸು ಕುಮ್ಮಟವನಸವಸದಿಂದ ತೆಗೆಸು (ಕುರಾಸಾಂ. ೩೭-೪೭). ೮. ಬ್ರಾಹ್ಮಣ ನಿಯೋಗಿಗಳು ಪರಶ್ರೇಷ್ಠರಾಗಿ ಬಂದರಮನೆವಾಗಿಲ ಕದಬೀಯಗವ ತೆಗೆಸಿ ದರು (ಮೋಹತ. ೧೯-೪). ೧೪. ಸೂಳವಿಸಿದವು ಸನ್ನೆಯುಲಿ ನಿಸ್ಸಾಳ ಸೇನೆಯು ತೆಗೆಸಿದವು ಹೆಗ್ಗಾಳೆ ಮೊಳಗಿದವಾನೆವಱಿ ಗಜಱಿದವು ಡೌಡೆಗಳು (ಕುಪ್ವಾಭೀ. ೫-೨೮). ೧೫. ಬಾಗಿಲ ತೆಗೆಸೆಂಬನಿಷ್ಠುರದ ವಾಕ್ಯಗಳ ಮುಂಬರಿತಂದೊರ್ವಳುಸಿರಲ್ಕೆ (ಮೋಹತ. ೩೪-೩). ೧೬. ನಿಲ್ಲಿಸು ; ಸ್ಥಗಿತಗೊಳಿಸು ; ಅಡ್ಡಗಟ್ಟು : ಸಮಸಪ್ತಕರ ಬಲ ನಿಜವಾಳಯಕೆ ತಿರುಗಿದುದು ಶೀರಿತು ತರಣಿಯಾಟೋಪ ಕಾಳೆಗವ ತೆಗೆಸಿದರು ಕೌರವರು (ಕುಪ್ವಾದ್ರೋ. ೮-೧). ೧೭. ತೋಡಿಸು ; ಅಗೆಯುವಂತೆ ಮಾಡು: ಅವನು ಬಾವಿ ತೆಗೆಸಲು ಸಾಲ ಮಾಡಿದ್ದಾನೆ (ರೂಢಿ). ೧೮. ಕುದಿಸು ; ಬೇಯಿಸು : ಗರಗಸದಿಂದಂ ಮಿಗೆ ನಿಷ್ಕರುಣಿಗಳೊಡನಿಕ್ಕಿ ನೆತ್ತಿಯಿಂದಂ ಪಾದಂಬರೆಗಂ ಸೀಳ್ದಾಭಾಗಮನುರಿವೆಣ್ಣೆಯೊಳಿಕ್ಕಿ ತೆಗೆಸುವರ್ಪಜುಗುದಿಸಂ (ಧರ್ಮಾಮೃ. ೩-೭೦). [ತೆಗೆ$_1$ + – ಇಸು$_3$]

**ತೆಗೆಸು** 'ತೆಗೆಯಿಸು' ನೋ.

**ತೆಗೆಹ (ನಾ).** ತೆಗೆಯುವಿಕೆ ; ಬೇರ್ಪಡಿಸುವಿಕೆ : ಉಪ್ಪು ಮಿಗಿಲಾದವಱ ಉಪ್ಪು ತೆಗೆ(ಹ)ಯೋಣ. ಕಹಿ ಮಿಗಿಲಾದವಱ ಕಹಿ ತೆಗೆ(ಹ)ಯೋಣ (ಭೀಮಸೂ. ೨). [ತೆಗೆ$_1$ + – ಹ$_2$]

**ತೆಗ್ಗು$_1$** 'ತಟ್ಟು' ನೋ.

**ತೆಗ್ಗು$_2$** 'ತಗ್ಗು$_2$' ನೋ.

**ತೆಗ್ಗುಬೀಳು** 'ತಗ್ಗುಬೀಳು' ನೋ.

**ತೆಜಿಸು (ಕ್ರಿ).** ಬಿಟ್ಟುಬಿಡು ; ತೊರೆ ; ತ್ಯಜಿಸು : ತೆಜಿಸಿದಂ ಮಗುಳಿತ್ತಲೆಸೆ ವಂಗದೇಶಮಂ ಪೊಕ್ಕೊಡನೆ ಬಾಚಿದಂ ಬಹುನಾಣ್ಯಮಾ (ಪರಶು. ೦೦-೦೩): ನಿನ್ನ ಸುತನನೀಕ್ಷಣ ತೆ[ಪಾಠಾಂ. ತ್ಯ]ಜಿಸೆ ರಾಮಂಗಂ ಪಟ್ಟಗಟ್ಟೆ . . . ಸುಖಮಿರ್ಪೆನು (ವಂಕಾರಾ. ೨-೭-೧೫) ; ಭೂರಿದಾರಿದ್ರ್ಯದಲಿಯಿ ಸಂಸಾರವನು ಮಾಡುವುದಕಿಂತಲೂ . . . ಈ ಶರೀರವನೆ ತೆಜಿಸುವುದು ಲೇಸು (ಸುದಾಮ. ೫-೮). [< ತ್ಯಜಿಸು]

**ತೆಟ್ಟಂದೆಱಿ** 'ತೆಱಿ$_1$' ಪರಾ.

**ತೆಟ್ಟುಂತೆಱಿ** 'ತೆಱಿ$_1$' ಪರಾ.

**ತೆಟ್ಟುಂದೆಱಿ** 'ತೆಱಿ$_1$' ಪರಾ.

**ತೆಟ್ಟೆ, ತೆಂಡೆ, ತೆಮಟೆ, ತವಡೆ (ನಾ).** ೧. ಗುಂಪು ; ಸಮೂಹ ; ಸಂದಣಿ. **ತೆಂಡೆ :** ೨. (ಹುಲ್ಲು ಮುಂತಾದುವುಗಳ) ಕಟ್ಟು; ಪಿಂಡಿ ; ಕಂತೆ : ಈ ನಾರಿಯುನ್ನು ಮೆಯ್ಯೊಳಗೆ ಹುಲ್ಲು ತೆಂಡೆಯಿಂ ನೀನಿಂತು ಬಿಗಿಸಿದೊಡಿಸೆ ಮಾಳ್ಪ ಪಾಪವೇನಯ್ಯಾ (ಸಾನಂಗ. ೪೩). ೩. ಮರ ಗಿಡಗಳ ಬುಡ ; ಬೇರುಗಳು ಹೊರಡುವ ಭಾಗ : ತೆಂಗಿನ ತೆಂಡೆ ಮುರಿದು ತಳಕೆಳಕಾಗಿ ಗಂಗಾಧರನ ಪೂಜಕನ ಹಿಂಗದೆ ನೆನೆಯೆ ರಾಯಗೆ ಮಣಿದೊರತಾ ಅಂಗೈಗಳಲಾಂತ ಬಸವ (ಬಸಪು. ೨-೬೪). ೪. ಮೂಲ ; ವಂಶ ; ಬುಡಕಟ್ಟು : ಉಳಿದವರೆಲ್ಲ ಅಣ್ಣತಮ್ಮದಿರಾಗಿ ಒಂದೇ ತೆಂಡೆಗೆ ಸೇರಿದವರು (ನನ್ನೂರು. ೨೧೯) : ಒಬ್ಬ ಪ್ರಸಿದ್ಧ ಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ಪಾಡಿಕೆ (ಹುಟ್ಟುಹ. ೧೮). ೫. ತೊಡರಿಕೊಂಡಿರು ವಿಕೆ ; ಸಂತ್ರಿಕೊಂಡಿರುವಿಕೆ : (ಕ). **ತೆಮಟೆ :** ೬. ಹೊಲ ಉಳುವಾಗ ಕುಂಟೆಯ ಕುಳಕ್ಕೆ ತೆಕ್ಕೆತೆಕ್ಕೆಯಾಗಿ ಸಂತ್ರಿಕೊಳ್ಳುವ ಮಣ್ಣು ,– ಕೆಸರು : ಎರಡು ಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸಂತ್ರಿಕೊಂಡಿದ್ದ

ತೆವುಟೆಯನ್ನು ಕುರುಚಿಗೆಯಿಂದ ತೆಗೆಯುವುದಕ್ಕೇ ಇವನ ರಟ್ಟೆ ಬಿದ್ದು ಹೋಗಿದ್ದುವು (ಬಿಳುಮ. ೨೬೯). **ತೆವಡೆ :** ೭. ಹೊಲ, ಗದ್ದೆಗಳಲ್ಲಿ ಪಾತಿ ಅಥವಾ ಮಡಿಗಳ ಮಧ್ಯೆ ಕಟ್ಟುವ ಸಣ್ಣ ಬದು : (ಕ).

**ತೆಟ್ಟೆತೆಟ್ಟೆ** (ದ್ವಿರುಕ್ತಿ) : ತೆಟ್ಟೆತೆಟ್ಟೆಯೊಳೋಡುವ ಕುರುಸೈನಿಕ ಕೆಟ್ಟುದ ನೋಡಿ ಗೊಳ್ಳೆಂದು ದಿಟ್ಟರವರು ನಗುತವೆ ತುಟಿಗಳನು ಹಿಮ್ಮೆಟ್ಟಿಸಿದರು (ನೇಮಿಸಂ. ೨೫-೧೫೩): ಬಟ್ಟಜವ್ವನೆಯರಾರತಿವಿಡಿದವನಿಗೆ ತೆಟ್ಟೆತೆಟ್ಟೆಯೊಳೆತ್ತಿದರು (ರಾಮವಿ. ೧೯-೮೦) : ಬೆರೆಯದೆ ತೆಟ್ಟೆತೆಟ್ಟೆಯೊಳು ಸಂಗ್ರಾಮಕೆಂದೆರಡು ಪಡೆಗಳೊಪ್ಪಿದವು (ಚಂಪ್ರಸಾಂ. ೨೦-೧೨೧) : ಕಟ್ಟೆತೋ ಪಲವಣ್ಣ ಮೇಘ ಬಾನದೊಳೆನೆ ತೆಟ್ಟೆತೆಟ್ಟೆಯೊಳು ತೋಱಿ ದುದು (ಜ್ಞಾನಚ. ೧೪-೭೧). **ತೆಂಡೆತೇಲು** = ೧. ಮರದ ಬೇರಿನ ಭಾಗ ಮೇಲೆ ಬರು ; ಮರ ಒಣಗತೊಡಗು. ೨. ವಂಶವು ನಿರ್ನಾಮ ವಾಗು ; ವಂಶದಲ್ಲಿ ಯಾರೂ ಇಲ್ಲದಂತಾಗು : ಆ ದೊಡ್ಡ ಬರದಲ್ಲಿ ತೆಂಡೆತೇಲದೇ ಇದ್ದದ್ದೇ ಹೆಚ್ಚು (ರೂಢಿ). [ದೇ.॥ ತೆಲು. ತೆಟ್ಟ, ತೆಟ್ಟು]

**ತೆಡಾಯು** (ನಾ). ಒಂದು ಬಗೆಯ ಆಯುಧ (?) : ಕತ್ತಿ ತೆಡಾಯು ಖಿಡಲ್ಲಿ ತೆಯಲ್ಲಿ ಬಿಲ್ಲು ನಾರಾಜ ಗದೆ ಸೂಲ್ಲಿ ... ಮೊದಲಾದಾ ಬತ್ತೀಶಾಯುಧಾ ಶಕ್ತ ಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೧ ; 1776).

[ ☞ ಇದು 'ಖಿಡೆಯ' ಎಂಬುದರ ಅಪಲಿಖಿತವಿರಬಹುದೇ ? ]

**ತೆಣರು** 'ತೆಣಱು' ನೋ.

**ತೆಣಱು, ತೆಣರು, ತೆಳಱು** (ಕ್ರಿ). ಭಾರದಿಂದ ಉಸಿರು ಕಟ್ಟು,-ತಿಣುಕು,-ನರಳು : ನೆಲನಂ ಪೊತ್ತ ಫಣಿ ತೆಣಱು [ಹಾಠಾಂ. ಪೊಱಲು] ತಿರೆ ನಡೆದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ (ಅಜಿಪು. ೯-೦೬) : ಕ್ಷಿತಿ ಚಕ್ರಂ ನಿಜಭಾರದಿಂ ತೆಣಱಿದತ್ತೆಂಬನ್ನೆಗಂ (ಪಂರಾಮಾ. ೦೩-೬೭). **ತೆಣರು :** ಕುದಿಪೊಡಲ ಮದುಮಗಳ್ ತೆಣರುತಿಹಳೆಲ್ಲಿ ? (ಕಾಲೂರ. ೧೫೩-೩೩೬). **ತೆಳಱು :** ನಾಗರಾಜಂ ತೆಳಱಿ ಪೆಳಱಿ ದಿಗುದನ್ತಿಗಳು (ಬೊಂಕೆಶಾ. ೧೯೨೯, ನವಿಲುಗುಂದ. ೨೦೭-೦೦ ; 1184). 'ತಿಣುಕು' ಪರಾ.

[ದೇ. ॥ ತಮಿ. ತಿಣಱು]

**ತೆಣೆ** 'ದಿಣ್ಣೆ' ನೋ.

**ತೆಣ್ಗಾಳಿ** 'ತೆಂಗಾಳಿ' ನೋ.

**ತೆತಾವು** (ನಾ). ಒಂದು ಪ್ರದೇಶದ ಹೆಸರು (?) : ಮೂಡಾಯ್ನೋಡಿ ನೀರಿಟಿವೆ ತಾಱಿ ಎ ತೆತಾವಿನೊಲ್ಲಿ ಎ ಪೋಗಿ ಕುಣ್ಣು ಸೋಮೆ ಎ ಕರ್ಗಲ್ಲಾಱದೆ ಆನೆಗಲ್ಲೆ ಕಮ್ಮಾರ್ ಕೊಟ್ಟಲೆಯ ಮುದುವುಣಸೆ ಮಾಳ್ದಿಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೩ ; 733). [ ? ]

**ತೆತ್ತ₁** 'ತೆಱು₁' ಪರಾ.

**ತೆತ್ತ₂** (ನಾ). ಮಾಲುಗಣ್ಣುಳ್ಳವನು ; ಮೆಳ್ಳೆಗಣ್ಣಿರುವವನು : ಅವನನ್ನು ತೆತ್ತಹನುಮ ಎಂದೇ ನಮ್ಮ ಹುಡುಗರು ಹಾಸ್ಯಮಾಡುತ್ತಾರೆ (ಗರುಡಾ. ೧೪೭). [ತೆತ್ತು₁ + – ಅ₇]

**ತೆತ್ತಕಣ್ಣು** 'ತೆತ್ತಗಣ್ಣು' ನೋ.

**ತೆತ್ತಗಣ್ಣು, ತೆತ್ತಕಣ್ಣು** (ನಾ). ಮಾಲುಗಣ್ಣು ; ಮೆಳ್ಳೆಗಣ್ಣು ; ಓರೆ ಗಣ್ಣು : ಇನ್ನುಮೇಲೆ ನಿನ್ನ ತೆತ್ತಗಣ್ಣಿನ ಹಂಗೇ ನನಗೆ ಬೇಡ (ಗರುಡಾ. ೧೪೯). **ತೆತ್ತಕಣ್ಣು :** ನಮ್ಮೂರ ಕ್ಷೌರಿಕ ಹನುಮನಿಗೆ ಸ್ವಲ್ಪ ತೆತ್ತಕಣ್ಣು, ಎಡಗಡೆ ಅವನು ನೋಡಬೇಕಾದರೆ ಬಲಗಡೆ ನೋಡುವಂತೆ ತೋರುತ್ತದೆ (ಗರುಡಾ. ೧೪೭). [ <ತೆತ್ತು₁ + ಕಣ್ಣು (< ಕಣ್) ]

**ತೆತ್ತವಣೆ** (ನಾ). ಜೋಡಣೆ (?) : ಇತ್ತಲೀ ಮಹದೇವಿ ಮಿಗೆ ಬಳೆವುತ್ತಲಿದ್ದಳು . . . ಉತ್ತಮದ ಪ್ಯೆಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ ತೆತ್ತವಣೆಯ ನವೀನರೀತಿಯ ಜಾತಿಭಾವದಲಿ (ಪ್ರಭುಲೀ. ೦೦-೨). [ತೆತ್ತಿಸು₁ + – ಅಣೆ₄]

**ತೆತ್ತಿಗ** (ನಾ). ೧. ಬಂಧು ; ನಂಟ : ಪುತ್ರಮಲ್ಲಿ ಬೇಟದ ತೆತ್ತಿಗನುಂ ಮೊತ್ತಮೊದಲಿಗನುಮಪ್ಪನೋರ್ವಂ . . . ಇಂತೆಂದಂ (ಶಾಂತಿಪು. ೮-೯೪ವ) ; ಸ್ವಬಂಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಟಿಗೇಹೋದ್ಭವಂ (ಜಾತಕಿ. ೧೭-೭) : ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ (ಮಹಾದೇ. ಬ. ೧೦೩-೨೫೮) : ಪನ್ನಗಾಭರಣನಾತನ ಭಕ್ತಿಯೋಗಮಂ ತಾಂ ನೋಡಿ ತಲೆದೂಗಿ ಮುಂಡಾಡಿಯೆನ್ನಣ್ಣ ಎನ್ನ ತೆತ್ತಿಗಯೆನ್ನ ಭದ್ರಗಜವೇ . . . ಎಂದೊರೆದು (ಪದ್ಮರಾ. ೭-೪೩) ; ತಾವರೆಯ ತೆತ್ತಿಗನ ಕುಮುದದ ಜೀವಿಗನ ಮಿಗೆ ಮೇಲುನೋಟದೊಳಾ ವಿಗಡರುಗಳಡಸಿ ತಿವಿದಾಡಿದರು (ಕುವ್ಯಾಸ. ೨-೧೦೯) : ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು ಪೋಗಿ ತೆತ್ತಿಗರ ಬೀಳ್ಕೊಂಡು (ಮೋಹತ. ೧೮-೯೮) ; ಮೃತ್ಯು ಬೆನ್ನಿನೊಳಿಹುದು ತಾವಿನ್ನತ್ತು ಮಾಡುವುದೇನು ಪೂರ್ವದ ತೆತ್ತಿಗನು ನೀನೀಗ ರಕ್ಷಿಸು (ಹರಿಸಾ. ೯೨). ೨. ಸೇವಕ ; ಆಳು: ನಿಮ್ಮ ತೆತ್ತಿಗನು ಬೊಮ್ಮಯ್ಯನ ಕೀರ್ತಿ ಮಹತ್ತು ಘನವಂದೊಮ್ಮೆ ರಾಗಂಬೆತ್ತು ಕೈಲಾಸಕ್ಕೆ ಹೋಗಿ ಮರಳ್ದುದನುವಾಯ್ತು (ಬಸಪು. ೨೯-೨೯) : ತಿಲಕವನು ತೆತ್ತಿಗರಲಂಕರಿಸಿದರು ಹೊಳೆಹಿನ ಹೊಗರ ಹೊಸ ಜವ್ವನದ ಜೋಡಿಯ ಜಾಡಿಯಿಮ್ಮಡಿಸೆ (ಕುವ್ಯಾಆ. ೮-೩) : ಹನುಮ ನೀನು ನರನ ತೆತ್ತಿಗನಾಗಿ ಸಾಯದಿರು (ಕಾಶಿರಾ. ೧೯-೦೩) : ಬೆಂಬತ್ತಿ ಬಾರದೆ ಮಾಣರಭವನ ತೆತ್ತಿಗರು (ನಿಭಾಗ. ೪-೩-೨) : ತನ್ನ ತೆತ್ತಿಗರಹ ನಂದೀಶ್ವರಾದಿ ಪ್ರಮಥರ ಕಳುಹು (ಪ್ರಭುಪು. ೪-೧೧). ೩. ಹೊಣೆಗಾರ ; ರಕ್ಷಕ : ಗುತ್ತಿಯ ಗಂಗಮಹೀಪ × × × ರಾಜ್ಯಕ್ಕೀತಂ ತೆತ್ತಿಗಂ (ಎಕ. IV, ನಾಗಮಂ. ೫೧-೧೪ ; 972) : ಅಂಕ ಓಡಿದರೆ ತೆತ್ತಿಗಂಗೆ ಭಂಗವಯ್ಯಾ ಕಾದಿ ಗೆಲಿಸಯ್ಯಾ ಎನ್ನನು (ಬಸವ. ೨೯೯) ; ಸೂನಗೆಯನೆತ್ತಿ ಪರಿವ ತೆತ್ತಿಗ ವೀರರುಮಂ (ಲೀಲಾವ. ೫-೦೩೪) ; ಈ ಖಿಳ್ಗವನೊಲವಿಂ ಸಾಧಿಸುತಿರ್ದಾ ಖೇಚರತನುಜನ ಮಾತಾಪಿತೃವಾಕೆಯ ತೆತ್ತಿಗರಾಗಲ್ವೇಳ್ಕುಂ (ಕುಮುರಾ. ೮-೩೮) ; ನಿಮ್ಮ ವಿಪತ್ತು ತನ್ನದು ನಿಜಪದಾಶ್ರಿತ ಭಕ್ತರಸುಗಳಿಗೆ ತೆತ್ತಿಗನಲಾ ತಾನು (ನಿಭಾಗ. ೬-೯-೩೩) ; ನೀಂ ಪಸುಳೆ ನಿನಗೆ ತೆತ್ತಿಗರದಾರಕಟ (ಜೈಮಿಭಾ. ೨೦-೧೪) : ಚಿತ್ತೈಸೆಲೆ ಸ್ವಾಮಿ ಭೃತ್ಯನ ಬಿನ್ನಪ ತೆತ್ತಿಗರಾರು ನಿನ್ನಿಂದ (ಕೋದಚ. ೧-೪೩). [ತೆತ್ತು₁ + – ಇಗ]

**ತೆತ್ತಿಸು₁** (ಕ್ರಿ). ೧. ಹೊಂದಿಸು ; ಜೋಡಿಸು ; ಅಳವಡಿಸು; ಹೂಡು: ಹರನೊಳೆ ಪತ್ತಿ ತೆತ್ತಿಸಿದ ಚಿತ್ರಮನಿರ್ಬಗಿಯಾಗೆ ಮೋಹಮೊತ್ತರಿಸೆ . . . ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಂ (ಪಂಪಭಾ. ೦೩-೬೩): ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸ ಕೀರ ಮಯೂರ ಪಾರಾವತ ವಾರಣಂಗಳಿಂ (ಗಿರಿಕ. ೦೦-೭೪ ವ) : ತೆತ್ತಿಸಿದ ಪುತ್ತಳಿಗಳಾಭರಣಕಿರಣದಿಂ ಸೇಸೆಯಂ ಸೂಸುವಂತೆ ದೇಸೆವಡೆದೆಸೆವ ಸಿವಿಗೆಯಂ (ಪುಷ್ಪಪು. ೦೩-೮೪ ವ) ; ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾ ಚಿತ್ರ ಸತ್ಪುತ್ರಿಕೋತ್ಕರಮಂ ತೆತ್ತಿಸಿ ಸುತ್ತಲುಂ (ಶಾಧಪು. ೪-೩೩) ; ಶರವನು ತೂಗಿ ಬಿಲ್ಲಿಗೆ ತೆತ್ತಿಸಿದನು (ಕುವ್ಯಾದ್ರೋ. ೧೯-೩೨) : ಸುತ್ತಿನುಂಗುರ ಮದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹತ. ೧೭-೧೩) : ಜಲಕಾಂತ ಶಿಲೆಯಿಂದ ನಿರ್ಮಿಸಿದ ತೊಟ್ಟಿಲಿಕ್ಕೆಲದಲ್ಲಿ ತೆತ್ತಿಸಿದ ವಿವಿಧಮಣಿದೀಪ್ತಿಯಿಂ (ಜ್ಞಾನಚಂ. ೧-೪೭). ೨. ತೊಡಿಸು ; ಧರಿಸು ವಂತೆ ಮಾಡು : ಎತ್ತಲುಂ ಕೇಳ್ದಱಿಯೆವೀ ರುಪಾಕ್ಷೆ ಮೂಗಿನಲಿ ತೆತ್ತಿಸುವುದಾವುದು ವಿಶೇಷವೊ (ಬಸಪು. ೦೨-೨೦); ಪೆಱಿನೇಸಱಿಂ ಮುಂಗುರುಳ ಮೇಲೆ ತೆತ್ತಿಸಿ (ಸೌಂದಪು. ೭-೨೪) : ಕಾಯವಿರಹಿತನೆಂದು ಧರೆಗೆಱುಪುವಂತೆ ಮಾಗಾಯನಾ ಕರ್ಣಯುಗಳದೊಳೆಂದು ತೆತ್ತಿಸಿದರು (ಲಶಿಚಿಂ. ೩೦-೩೩). ೩. ಮಂಡಿಯುವಂತೆ ಮಾಡು ; ಮಂಡಿಸು : ಸೋಮರ್ಮಡಿಯೊಳೆಡೆಗೆಡೆಗೆ ಭಾವಕಿಯರರೆವಿರಿದ ಮಲ್ಲಿಗೆ ಜಾಜಿಯರಲ ತೆತ್ತಿಸಿದರತಿಸೊಬಗಿ

ನಿಂದ (ಸೌಂದಪು. ೭-೨೩) ; ಪುಂಡ್ರೇಕ್ಷುದಂಡಗಳನವರ್ಚಿ ಬಾಳವೇರ್ಗಳಿಂ ಜಗಿದೆಡೆದೆಡೆಯೊಳ್ ಸಂಪಗೆಯು ಬಿರಿಮುಂಗುಳ್ಗಳಿಂ ತೆತ್ತಿಸೆ (ರಾಜಶೇ. ೧೦-೩೦ ವ). ೪. ಒಳಹೊಗು ; ನಾಟಿಕೊಳ್ಳು ; ಚುಚ್ಚಿಕೊಳ್ಳು : ಬಾಳಂ ಕೊಂಡೆತ್ತಿ ಪೊಯ್ವುದುಮಾ ಬಾಳ್ ನಾಗವೇದಿಕೆಯಂ ತಾಂಗಿ ತೆತ್ತಿಸೆ [ಪಾಠಾಂ. ಕೀಲಿಸೆ] ಮೇಗಂ ನೋಡಿ (ಪಂಪಭಾ. ೧೪-೧೦) ; ಶರಾ ವಳಿಯೆಜಗಿದವು ತುಱುಗಿದವು ತೆತ್ತಿಸಿದವು ರಥಾಂಗದಲಿ (ಕುಮಾ.ಳ. ೧೦-೪೭) ; ತೆತ್ತಿಸಿದುವುಭಯವೀರರ ಮೆಯ್ಯೊಳಂಬುಗಳ್ (ಜೈಮಿಭಾ. ೨೩-೪೦). ೫. ಚುಚ್ಚು ; ತಿವಿ ; ತುರುಕು : ರಿಪುವರ್ಗ್ಗದ ಬಾಯ ಬಾಗಿಲೊಳು ತೆತ್ತಿಸಿದಂ ಪಲಬ್ಬೆದಱಿ ಕೂರಲಗಂ (ಎಕ. VIII, ಸೊರಬ. ೩೪೫-೩೪ ; 1171) ; ಕಕ್ಷದೊಳ್ ಬಂಯೊಳ್ ನೇತ್ರದೊಳೆಯ್ದೆ ತೆತ್ತಿಸಿದ ನತ್ತಾಭೀಳಬಾಣಂಗಳಿಂ (ಜಗವಿ. ೧೪-೧೦೩) ; ತೆತ್ತಿಸಿದಂಬಿನ ಗಱಿ ಮಿಱುಗುತ್ತಿರೆ (ವರ್ಧಪು. ೮-೫೫) ; ಪರವ ಕಣ್ಗಳೊಳಾಲಿಪ ಕರ್ಣಗಳೊಳ್ಗುಳ್ಳುರಿಪುವಯಶ್ಶಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ (ಅನಂಪು. ೯-೩೭) ; ಒತ್ತಿನಂಗಡಿಯ ಕಜ್ಜಾಯವುಮಂ ಬಲ್ಲೆಹದಿ ತೆತ್ತಿಸುತ ಬಸವ ಕೋಯೆನಲ್ (ಲಶಿಜಿಂ. ೩೨-೨೩) ; ಗಜವ ಒತ್ತಿ ಕಿವಿಗಳನೊದೆದು ಶಿರದಲಿ ತೆತ್ತಿಸಿದರಂಕುಶವನು (ಕುಮಾದ್ರೋ. ೩-೭) : ನರನವನ ರೋಮ ರೋಮಂಗಳಂ ಭೇದಿಪವೊಲು ತೆತ್ತಿಸಿದನಂಬುಗಳನು (ಜೈಮಿಭಾ. ೨೫-೪೭). ೬. ಕೊರೆಯಿಸು ; ಕೆತ್ತಿಸು ; ಕಂಡರಿಸು : ದಿಙ್ಮುಖ ದಂತಿದಂತದೊಳ್ ತೆತ್ತಿಸಿದಂ ನಿಜಾಂಕ ಮಹಿಮಾಕ್ಷರಮಾಲಿಕೆಯಂ (ಶಾಪಮಂ. ೩೪೦) ; ಕುಂಬಳ ಬಿತ್ತಿನಂದದಿ ಕೊಱಕೊಱದು ತೆತ್ತಿಸಿದಂತೆ (ಭರಚ. ೬-೫೩). ೭. (ಹರಳಿನಂತೆ) ಕೂಡಿಸು ; ಕುಂದಣಿಸು ; ಮೆಟ್ಟು : ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು (ಲಿಂಗವ. ೭೭-೫೦) ; ಸುತ್ತುವಳೆಯವ ತೊಳಗಿ ಬೆಳಗುವ ಮುತ್ತು ವಜ್ರದ ನಡುವೆ ಮಾಣಿಕ ತೆತ್ತಿಸಿದ ಬೊಟ್ಟೊಂದು (ಪ್ರಭುಲೀ. ೪-೧೭) ; ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳೆಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ . . . ರಥ ಕಳಶ ಮೇಲೆಸೆಯೆ (ಕುಮಾದ್ರೋ. ಒರಿಇ. ಪರಿ. ೨೭೮) ; ಅಮಲವಜ್ರಂಗಳ ತೀವಿ ತೆತ್ತಿಸಿದ ಪೊನ್ನುಡೆ ನೂಲ್ಗಳಂ ತಳೆದು (ಸೌಂದಪು. ೧೦-೨೩) ; ಅಗಣಿತ ಕನಕದಂಡದ ಪಲ್ಲವಛತ್ರ ನೆಗಪಿರೆ ರತ್ನ ತೆತ್ತಿಸಿದ ಸೊಗಯಿಪ ಮಣಿಸೊಡರ್ವೆಳಗಿನೊಳ್ ಮೆಱೆದುವು (ಮೋಹತ. ೧೫-೩೦) ; ಬಳಸಿರೆ ಕಟ್ಟಿ ಬಿಟ್ಟ ಪೊಸಮಲ್ಲಿಗೆಮಾಲೆ . . . ಮೌಕ್ತಿಕ ಪ್ರಸರಮಂ ಹರಿನೀಲಮಣಿಪ್ರತಾನದೊಳ್ಕೆಳಗೊಳಿಸುತ್ತೆ ತೆತ್ತಿಸಿದವೋಲ್ಮೆಱೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೮. ಹೊಂದು ; ಸೇರು ; ಅಂಟು : ಬಸಿಱೆತ್ತಿ ಕಟ್ಟಿ ಮೆಯ್ ಕೀಲಿಸಿದಂತಿರೆ . . . ಕಿವಿ ತೆತ್ತಿಸಿದಂತಿರೆ . . . ಹರಿಣ ರೋಗಂ ತಡೆಯದೆ ಮಡಿಗುಂ (ಅಶ್ವಶಾ. ೧೩-೪೧) ; ಹತ್ತೆ ಬಂದಿರೆ ಸೂಜಿಗಲ್ಲನು ಹತ್ತಿ ಮೋಹಿಪ ಸೂಜಿಯಂತಿರೆ ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪೆನಿಪ ನಿತ್ಯವಲ್ಲಮನಂಶವಾದ ನಿಮಿತ್ತವಾಕ್ಷಣ ಕಾಣುತವೆ ಮೈಯೆತ್ತಿತೊಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ (ಪ್ರಭುಲೀ. ೧೦-೨೭). ೯. ನಿರ್ಮಿಸು ; ರಚಿಸು : ಅಸುರನ ಗದೆ ಭೂತ ಪಿಶಾಚ ಸಮಿತಿಗೆಱೆಯಿಸುವ ನೆತ್ತರಜವಟ್ಟಿಗೆ ತೆತ್ತಿಸಿದೆಲ್ವಿನ ಸೊದೆವನೆ (ಜಗವಿ. ೯-೬೦) ; ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾತ್ರ ಸಮೂಹಂ ದಿಟಮೆಯ್ದುದೆಯ್ದದು ದಿಶಾಚಕ್ರಂ (ಅನಂಪು. ೯-೨) ; ಉರಿಯ ಜಾಳಿಗೆ ತೆತ್ತಿಸಿತು ಹರಿದಶ್ವಶತವನು (ಕುಮಾದ್ರೋ. ೧೯-೩೨). ೧೦. ಬಳಿ ; ಹಚ್ಚು ; ಲೇಪಿಸು : ಚಿತ್ರಜಂಗೆತ್ತಿದ ತಳಿರ್ಗಳ ಸತ್ತಿಗೆಯೊ ದಿವಿಜೇಭಕುಂಭದಿ ತೆತ್ತಿಸಿದ ಸಿಂದೂರವೋ . . . ಎನಲೆಸೆಯಿತ್ತು ರಾಗದಲಿಂದುಮಂಡಲ (ಜೀವಂಚ. ೧೭-೨೩). [ ತೆತ್ತು₁ + – ಇಸು₃ ]

ತೆತ್ತಿಸು₂ (ಕ್ರಿ). ಕೊಡುವಂತೆ ಮಾಡು ; ಕೊಡಿಸು ; ತೆರಿಸು : ದಾಪಿತಃ – ಸಾಧಿತಃ – ೨ ತೆರಿಗೆ ತೆತ್ತಿಸಲ್ಪಟ್ಟವನು, ಕೊಡಿಸಲ್ಪಟ್ಟವನು, ಕೊಡುವ ಹಾಗೆ ಮಾಡಲ್ಪಟ್ಟವನು (ಸಿದ್ಧಾಂತಿ. ೨೮೮). [ ತೆತ್ತು₂ + – ಇಸು₃ ]

ತೆತ್ತೀಸ, ತೆತ್ತೀಸು (ನಾ). ಒಂದು ಸಂಖ್ಯಾವಾಚಕ ; ಮೂವತ್ತಮೂರು : ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳಿಂ ಉಘೆ ಉಘೆ ಎನುತಿರಲು (ಬಸವ. ೮೪೪) ; ಖಳಪಳದ ಕಟ್ಟಾಲುಹು ಮೂರ್ಖಾಕಳ ವನಿತ್ತವು ತರುಣ ಕೇಳ್ ತೆತ್ತೀಸ ದೇವರಿಗೆ (ತೊರರಾ. ೬-೫೦-೭) ; ತೆತ್ತೀಸವೆಂದೆನಿಪ ಸ್ಥಲವಿವು (ಸಿದ್ಧೇಪು. ೨೪-೩೩). ತೆತ್ತೀಸು.

ತೆತ್ತೀಸಕೋಟಿ, ತೆತ್ತೀಸುಕೋಟಿ = ಮೂವತ್ತಮೂರು ಕೋಟಿ : ಮಱೆಯಲಾಗದು ತೆತ್ತೀಸಕೋಟಿ ದೇವರ್ಕಳ (ಬಸವ. ೫೫೦) ; ದಕ್ಷನೊಬ್ಬ ಯಾಗವನಿಕ್ಕಲು ತೆತ್ತೀಸಕೋಟಿ ದೇವರ್ಕಳೆಲ್ಲಾ ತೊತ್ತಳದುಳಿಸಿಕೊಂಡು ನುಚ್ಚುನುಱಿಯಾಗಿ ಹೋದರು (ಸರ್ವವ. ೧೧-೫೦೨) ; ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯಾಲಿಕಲ್ ಬಿತ್ತಿಕ್ಕಿ ಬಿರ್ದುದುರ್ವಿಯಲಿ (ಮೋಹತ. ೪-೩೮) ; ಉರಿನಾಲಿಗೆಯ ಗರವೊಟ್ಟಗೆಯ ತೊಳಲಿಕೆ ತೆರಳಿಚಿತು ತೆತ್ತೀಸುಕೋಟಿಗಳ (ಕುಮಾ.ಳ. ೨೦-೫೭). [ <ಪ್ರಾ. ತೇತೀಸ, ತೇತ್ತೀಸ./ಹಿಂ. ತ್ಯಂತಿಸ್, ತ್ಯಂತೀಸ್, ತೇತೀಸ್ ; ದುರಾ. ತೇತೀಸ್. / ಸಂ. ತ್ರಯಸ್ತ್ರಿಂಶತ್ ]

ತೆತ್ತೀಸು 'ತೆತ್ತೀಸ' ನೋ.

ತೆತ್ತು₁ (ಕ್ರಿ). ೧. ಸಂಬಂಧಿಸಿರು ; ಹೊಂದಿಕೊಂಡಿರು : ಚಿತ್ರಜಂ ಕತ್ತಿಯಂ ಕಿತ್ತುಕೊಂಡೆತ್ತಿ ಹೊಯ್ಯುತ್ತೆ ಬರಲುತ್ತುಂಗವೃತ್ತಕುಚೆಯರ್ತಮಗೆ ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗಳನುರಾಗದಿಂದ (ಜೈಮಿಭಾ. ೨೬-೭). 'ತೆತ್ತಿಗ' ಪರಾ. ೨. ಹೆಣೆದುಕೊಂಡಿರು ; ತೊಡಕಿಕೊಂಡಿರು : (ಕ). ೩. ತಿರಿಚು ; ಸುತ್ತು. 'ತೆತ್ತುಗಣ್ಣು' ಪರಾ. ೪. ಒಳಸೇರು ; ಅಡಗು : ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ಹರಿವ ಮಂಜಿನ ನದಿಯ ಹೂಳ್ದವು (ಕುಮಾದ್ರೋ. ೪-೧೨). ೫. ಕೇವಣಿಸು ; ಕುಂದಣಿಸು ; ಮೆಂಟ್ಟು ; ಕೂಡಿಸು : ಮುತ್ತಿನ ಸೇಸೆಯೊಳೆಸೆವ ರತ್ನಂಗಳ ತೆತ್ತಿರ್ದ ಹಸೆಯ ವಿಷ್ಟರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಮೋಹತ. ೧೩-೭೨). [ ದೇ॥ ತಮಿ. ತೆತ್ತು, ತೆಱು ]

ತೆತ್ತು₂ (ಕ್ರಿ). ತೆರು ; ಕೊಡು : ಶಚಿಪತಿಯು . . . ಕೃತ್ತಿವಾಸನ ತೋತ್ರರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಯುವವನು (ಪಾರ್ವಪು. ೨೧-೮೧) ; ಕೈತುಂಬ ವರದಕ್ಷಿಣೆ ತೆತ್ತಬೇಕು (ಸುಂದರಿ. ೧೧೩) ; ಹಲ ಜನುಮ ಕಳೆದರೂ ನೀ ತೆತ್ತಲಾರೆ ಬರಿ ಅಂಚಿ ವೆಚ್ಚ (ಉಯ್ಯಾಲಿ. ೪೧-೪) ; ಆತ ವಿಧಿಸಿದ ದಂಡವನ್ನೂ ತೆತ್ತಲು ಸಿದ್ಧರಿದ್ದರು (ಸಮಜೀ. ೫೦೭). 'ಕಿತ್ತು₁' ಪರಾ. [ <ತೆಱು₁ ]

ತೆತ್ತು₃ 'ತೆಱು₁' ಪರಾ.

ತೆತ್ತು₄ (ನಾ). ಮೋಸ ; ವಂಚನೆ. 'ತೆತ್ತುತನ' ಪರಾ.
[ ದೇ.॥ ತಮಿ. ತೆತ್ತು ]

ತೆತ್ತುತನ (ನಾ). ಮೋಸಮಾಡುವಿಕೆ; ವಂಚನೆ ಮಾಡುವಿಕೆ: ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಮೆಗೆ ಮೋದಿ ನಲ್ಮೆಯಂ ಜತ್ತುಕಱಿಂಗೆ ಜತ್ತುಕಟಿ ನಾಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕಿವ ಕುಕ್ಕುವಗೆಯ್ವುಮಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ).
[ ತೆತ್ತು₄ + – ತನ ]

ತೆನಂದಾಕ 'ತೆನ್ನಂದಾರ್ಕ' ನೋ.

ತೆನಂದಾಕಕೆಱೆ, ತೇನಂದಾಕಗೆಱೆ (ನಾ). ಒಂದು ಕೆರೆಯ ಹೆಸರು : ತೆನನ್ದಾಕಕೆಱೆ ಎ ಪೆಂರ್ಮುರ್ಗಗೆಱೆ ಎ ವಡಗಾಯ್ ಸನ್ದು ಕಿಱುಮಾವಿ

ಪಂಳ್ಳಿವೆ (ಎಕ. IV, ಎಡತೊ. ೬೦-೭೪ ; ಸು. 890): ತೇನಂದಾಕಗೆಜ಼ಿ : ತೇನನ್ಡಾಕಗೆಜ಼ಿ ದಕ್ಷಿಣಾಸ್ತ ಭಾಗತತಃ (ವ್ಯಅರಿ. ೯೪೪೨,೬೫-೧೧೭ ; 816). [ ತೆನಂದಾಕ (<ತೆನ್ನಂದಾರ್ಕ) + ಕೆಜ಼ಿ ]

ತೆನುಂಗು 'ತೆಲುಂಗು' ನೋ.

ತೆನುಗು 'ತೆಲುಂಗು' ನೋ.

ತೆನೆ$_1$ (ನಾ). ೧. ಧಾನ್ಯದ ಹೊಡೆ ; ಕಾಳಿನ ಕದಿರು : "ಕಣಿಶಂ, ಧಾನ್ಯ ಶೀರ್ಷಕಂ – ಈ ೨ ತೆನೆ" (ಹಲಾಯು. ೯೫-೪೫೫) ; "ತೆನೆಯೊಳು ಕದಿರು" (ಶಬ್ದಮಂ. ೧೦೬) ; ಪ್ರಬಳ ಫಳಭಾರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನಸಹತಿಯಿಂದೆ (ಸುಕುಮಾ. ೯-೫೨) ; ಪಿಂಗಳವಾದ ನೆಲ್ಲ ತೆನೆಯಂ ನಸುಂಗರ್ಚಿದ ರಕ್ತಚಂಚು ಪಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರವಾಲೆ (ಜಗವಿ. ೪-೬೬) ; ಪೊಸಕವ್ಮಂಗಳವೆಯು ತೆನೆಯ ತುದಿಯು ತನಿಗಂಪಂ ಭುಂಜಿಸಲ್ (ಜಯಕಾ. ೧-೩೯): ದನಗಳ ಜೋಳದ ತೆನೆಯನ್ನು ಬಿಡಿಸಿದರೆ ಹೇಗೆ? (ಮಹಾತ್ಮಾ. ೬). ೨. ಕೋಟೆಯ ಗೋಡೆಯ ಮೇಲ್ಭಾಗದ ರಚನೆ; ಕೋಟೆಯ ಪ್ರಾಕಾರದ ತುದಿಯ ಗಾಲಿ ಯಾಕಾರದ ರಚನೆ: "ಕೋಟೆಯ ತೆನೆಯಲ್ಲಿಯುಂ ಕಪಿಶೀರ್ಷಮೆಂಬುದು" (ಹಲಾಯು. ೧೩೦-೨) ; ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ಪಾಯುವ ತೆನೆ ಹೂಡಿ (ಅಱಿಮಾ. ೧೬೬-೫೦೯) ; ರಥಾಂಗವೆ ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೧-೧೦೧) ; ತುಱುಗಿತ ಮರರು ಖಳನ ದುರ್ಗದ ತುದಿಯ ತೆನೆಗಳಲಿ (ಕುವ್ಯಾಅ. ೧೨-೩೩) ; ಕೆಡಹಿದರು ಕೋಟೆಗಳ ತೆನೆಗಳನೊಡೆಡಬಡಿದರಟ್ಟಳೆಗಳನು (ತೊರರಾ. ೬-೧೭-೬) ; ಕೋಟೆಯ ನೂತನ ತೆನೆಗಳೊಪ್ಪಿದುವು (ಕಂನವಿ. ೨-೭೦). 'ಕೋಟೆದೆನೆ' ಪರಾ. [ ದೇ. ॥ ತಮಿ. ತಿನ್ನೆ ; ಮಲ. ತಿನ ]

ತೆನೆ$_2$ 'ತನೆ' ನೋ.

ತೆನೆಂದಕ 'ತೆನ್ನಂದಾರ್ಕ ನೋ.

ತೆನೆಂಧಕ 'ತೆನ್ನಂದಾರ್ಕ' ನೋ.

ತೆನೆಗಟ್ಟು (ಕ್ರಿ). ತೆನೆ ಬಿಡು ; ಕಾಳಿನ ಹೊಡೆ ಕಟ್ಟು ; ಕಾಳಾಗು : ಅದೆ ಕಾಣ್ ಅದೊ, ಈ ನಾಡಿನ ನಡಜಾಡಿನ ಪಿರಿಜಾಣಿನ ತೆನೆಗಟ್ಟಿದ ಬೆಳಸು (ದ್ರಾಕ್ಷಿದಾ. ೨-೨೧). [ ತೆನೆ$_1$ + ಕಟ್ಟು$_1$ ]

ತೆನೆಗರ್ಚು (ಕ್ರಿ). ಧಾನ್ಯದ ಗೊಂಚಲನ್ನು ಕಚ್ಚು,–ಕಡಿ : ತಮ್ಮ ಕೆಯ್ಪುಱಿಗೆ ಬೆರ್ಚಿ ಶುಕಂ ತೆನೆಗರ್ಚಿ ಬೇಗದಿಂ ಪಾಱಿ . . . ಪಾಮರಿಯ ರೀಕ್ಷಿಪರಾರ್ದು ನಭೋವಿಭಾಗವಂ (ಧರ್ಮನಾ. ೨-೨೮). [ ತೆನೆ$_1$ + ಕರ್ಚು$_1$ ]

ತೆನೆಗಾಯಿ (ನಾ). ವರ್ಷದ ಮೊದಲ ಫಲ : ಗೌರೀ ಹಬ್ಬಕ್ಕೆ ಸರಿಯಾಗಿ ತೆನೆಗಾಯಿ (ರೂಢಿ). [ ತೆನೆ$_2$ (<ತನೆ) + ಕಾಯಿ$_1$( < ಕಾಯ್$_4$) ]

ತೆನೆಗೊನೆ (ನಾ). ಕೋಟೆಯ ಬುರುಜಿನ ತಂದಿ : ತಾರಗೆಗಳ್ ತೆನೆಗೊನೆ ಗಳೊಳ್ಗೋರಂದದೆ ಬೆಳಪ ಸೊಡರ್ಗಳಂತಿರೆ (ಚಂದ್ರಪು. ೧-೧೧೯) ; ಹೊಂಗೋಂಟೆದೆನೆಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ಸ್ಥೂಲದಂಡಾಕೃತಿಯ ನಾಂತವೋಲ್ . . . ಡೆಂಕಣಿಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ (ಜೈಮಿಭಾ. ೩-೨೧). [ ತೆನೆ$_1$ + ಕೊನೆ$_2$ ]

ತೆನೆಗೊಳ್ (ಕ್ರಿ). ೧. = ತೆನೆಗಟ್ಟು. 'ತೆನೆಗೊಳಿಸು' ಪರಾ. ೨. ಕೋಟೆಯ ತುದಿಗೆ ತಾಗು : ಮುಂತ್ರಿನೋಳಿ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ (ಮಲ್ಲಿಪು. ೨-೫೩). [ ತೆನೆ$_1$ + ಕೊಳ್$_1$ ]

ತೆನೆಗೊಳಿಸು (ಕ್ರಿ). ಹೊಡೆ ಮೂಡುವಂತೆ ಮಾಡು ; ತೆನೆಯಾಗುವಂತೆ ಮಾಡು : ಬಿತ್ತಿ ಬೆಳೆಯಿಸಿ ಪರಾಂಬರಿಸುವುದು ಒಕ್ಕಲಿಗನಾದರೆ, ಕೈಯನ್ನು ತೆನೆಗೊಳಿಸಿ ಮಾಗಿಸುವುದು ಕಾಲದ ಕೈವಾಡ (ವೀರಬಂ. ೪೮). [ ತೆನೆಗೊಳ್ + –ಇಸು$_3$ ]

ತೆನೆತೀವು (ಕ್ರಿ). ಬಸಿರು ತುಂಬು : ಅಲ್ಲಿಯೆ ಪೋಂತಪ್ಪುದುಮುದು ಮೆಲ್ಲನೆ ತೆನೆತೀವಿ ಸುಟಿಯೆ (ಯಚೋಡ. ೩-೫೫). [ ತೆನೆ$_2$ (< ತನೆ) + ತೀವು$_1$ ]

ತೆನೆತುಂಬು$_1$ (ಕ್ರಿ). = ತೆನೆಗಟ್ಟು : ಕನ್ನಡ ನುಡಿ ಪಯಿರ್ ಮುನ್ನಡೆ ತೆನೆ ತುಂಬಿ ಪೊನ್ನಡಕಿಲ್ಗಂ ಪೊನ್ನಕ್ಕೆ (ಹೊಂಗಳು. ೪೫ ಹಾರೈಕೆ). [ ತೆನೆ$_1$ + ತುಂಬು$_1$ ]

ತೆನೆತುಂಬು$_2$ 'ತನೆತುಂಬು' ನೋ.

ತೆನೆದರ್ಭೆ (ನಾ). ತೆನೆ ಬಿಡುವ ಒಂದು ಬಗೆಯ ದರ್ಭೆ : "ಚಾಮರ ಪುಷ್ಪಃ – ತೆನೆದರ್ಭೆ" (ಓಷಧಿ. ೫೬). [ ತೆನೆ$_1$ + ದರ್ಭೆ ]

ತೆನೆದುಱುಗಲ್ (ನಾ) ಕಾಳಿನ ಗೊಂಚಲಿನ ಗುಂಪು; ಕಣಿಶಗಳ ಸಮೂಹ: ಅನಿಳಾಹತಿಯಿಂ ಕಟಮೆಯ ತೆನೆದುಱುಗಲೊಳೊಱೆತುಪರಿವ ಪಾಲಂ ಕಳ ಹಂಸ ನಿಕಾಯಮಿಾಂಟಿ ಪಾಳಿಯನನವರತಂ ಬಿಡದು ಪಾಳಿಯಂ ಪಾಳಿಪ ಪೋಲ್ (ಶಾಂತೀಶ್ವ. ೧-೯೪). [ ತೆನೆ$_1$ + ತುಱುಗಲ್ (< ತುಱುಂಗಲ್) ]

ತೆನೆನಿಲ್ಲು 'ತನೆನಿಲ್' ನೋ.

ತೆನೆಬಲಿ 'ತನೆಬಲಿ' ನೋ.

ತೆನೆಬಿಡು (ಕ್ರಿ). ಕಾಳಿನ ಗೊಂಚಲನ್ನು ಬಿಡು ; ಹೊಡೆಯಾಗು : ಹೊಲದಲ್ಲಿ ಜೋಳ ತೆನೆಬಿಟ್ಟಿದೆ (ರೂಢಿ). [ ತೆನೆ$_1$ + ಬಿಡು$_1$ ]

ತೆನೆಬಿದಿರು (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಬಿದಿರು : (ಮೃಜಿ. ೫೯-೧೧೮೦) [ ತೆನೆ$_1$ + ಬಿದಿರು$_2$ (< ಬಿದಿರ್$_2$) ]

ತೆನೆಮುಗುಟು (ಕ್ರಿ). ಗರ್ಭಸ್ರಾವವಾಗು; ವ್ಯೆಯಿಳಿ: "ತೆನೆಮುಗುಟ್ದುದು ವೇಹತ್ತು" (ವಸ್ತುಕೋ. ೯೦-೮). [ ತೆನೆ$_2$ (< ತನೆ) + ಮುಗುಟ್ ]

ತೆನೆಯಾವು 'ತನೆಯಾವು' ನೋ.

ತೆನೆವಳಿ (ನಾ). ಕೋಟೆಯ ತುದಿ ; ದುರ್ಗದ ಉನ್ನತಭಾಗ : ಕಲುವಳಿಯ ಕೋಲಾಹಲಕ್ಕಿವರಳುಕದಿಱಿದರು ಸುರಗಿಯಲಿ ತೆನೆವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ (ಕುವ್ಯಾಸ. ೩-೫೦). [ ತೆನೆ$_1$ + ಬಳಿ$_3$ ]

ತೆನೆವಾಲ್, ತೆನೆಹಾಲು (ನಾ). ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು ; ಎಳೆಯ ತೆನೆಯೊಳಗಿನ ರಸ : ಫಳರಸದಿ ಬೆಳವ ನವಶಾಲೀವನಂಗಳಿಂ ತೆನೆ[ಪಾಠಾಂ. ತನಿ]ವಾಲನುಂಡು ಬಳೆವರಗಿಳಿ ಗಳುರ್ಕಿನಿಂ (ತಿರುರ. ದೀ. ೨-೧೧) ; ತೆನೆವಾಲನುಂಡು ಬಳೆದುವು ಗಿಳಿಗಳು (ನಂಬಿರ. ೯-೧೭). ತೆನೆಹಾಲು : ತೆನೆಹಾಲು ದಕ್ಕಲಿ ಕಕ್ಕಿಸಬೇಡದನು ನಿನ್ನ ನಂಜಿನ ಸೆರಗ ಬೀಸಾಡಿ (ಗರಿ. ೧೦೬-೧೭) ; ಜನಕೆ ನಿನ್ನೀ ಹಾಡು ಕೆನೆಹಾಲು ಇದ್ದಂತೆ ತೆನೆಹಾಲು ನಿನಗೆ ಒಕ್ಕಲಿಗ ಇಂಪಾಗಿ ಮನಸೋತು ಮಲಗೆ ಶಿವಲೋಕ (ಕನ್ನಜಾ. ೨೦೭). [ ತೆನೆ$_1$ + ಪಾಲ್$_1$ ]

ತೆನೆವೆರಸು (ಕ್ರಿ). ತೆನೆಗಳಿಂದ ಕೂಡಿರು: ತೆನೆವೆರಸಿದಿಕ್ಷುಗಳ ಹೊರೆಗಳಗೊನೆ ವೆರಸಿ ಶೋಭಿಸುವ ಕದಳಿಯ (ನಿಭಾಗ. ೪-೮-೫೪). [ ತೆನೆ$_1$ + ಬೆರಸು$_1$ ]

ತೆನೆವೊಱು (ಕ್ರಿ). ಕಾಳಿನ ಗೊಂಚಲನ್ನು ಹೊತ್ತುಕೊಳ್ಳು ; ಹೊಡೆ ಯಾಗು: ತಿಳಿದ ತಡವಿಡಿದ ಮುಡಿಗಳ ಜಳದೊಳ್ ರಂಜಿಸುವ ಧಾನ್ಯ ಮುಂಜರಿಯ ನೆಟಿಲ್ ಪೊಳೆಯೆ ತೆನೆವೊತ್ತು[ಪಾಠಾಂ. ವೋದು]ವಿವು ಬೇರ್ಗಳಿನೆನಿಪುದು ಬೆಳೆದ ಕಟಮೆ ಭೂಸಾರತೆಯಿಂ (ಚಂದ್ರಪು. ೧-೯೨) ; (ಕಾವ್ಯಸಾ. ೧೧೦ ನೋ). [ ತೆನೆ$_1$ + ಪೊಱು ]

ತೆನೆವೋಗು (ಕ್ರಿ). ೧.= ತೆನೆಬಿಡು: ತೃಣಮುಂ ತೆನೆವೋದ ಬಱಿಕ್ಕೊಣಗು ವುದು (ಅನಂಪು. ೩-೭೦). ೨. (ಕೋಟೆಯ) ತೆನೆಯಾಕಾರವಾಗು. ೧, ೨: ವಸುಧೆಯ ಮಿಸುನಿ ಬೆಳೆದು ತೆನೆವೋದುದೆಂಬೆಸಕವನೀಕ್ಷಿಸುವರಿಗೆ ಪೊಸಯಿಸುತಾ ಪುರವರದ ಪೊಂಗೋಂಟೆ ಕಣ್ಗೆಸೆದುದು (ಕುರಾಸಾಂ. ೩-೩೩). [ ತೆನೆ$_1$ + ಪೋಗು$_1$ ]

**ತೆನೆಹಾಲು** 'ತೆನೆವಾಲ್' ನೋ.

**ತೆನೆಹುಲ್ಲು (ನಾ).** ೧. ತೆನೆಬಿಡುವ ಹುಲ್ಲು: ಕೈತೋಟದಲ್ಲೆಲ್ಲಾ ತೆನಹುಲ್ಲು ಬೆಳೆದಿದೆ (ಋಧಿ). ೨. ತೆನೆಸಹಿತವಾದ ಹುಲ್ಲು.

[ ತೆನೆ₁ + ಹುಲ್ಲು (< ಪುಲ್) ]

**ತೆನ್ನಂದಾರ್ಕ, ತೆನಂದಾಕ, ತೆನೆಂದಕ, ತೆನೆಂಧಕ (ನಾ).** ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ವಾಣಿಗ ತೋಟ್ಟಮ್ ತೆನ್ಕಣ್ಣಮುಂ ವಡಕಣ್ಣಮುಂ ವಿನೀತೇಶ್ವರಕ್ಕಮ್ ಪೊಯ್ದರ್ ಮಾನ್ದ ತೆಂನನ್ದಾರ್ಕರುಂ ಮಾರಾಟ್ಟ ತೆಂನನ್ದಾರ್ಕರುಂ ಅವರ ಕುಂಬು ಪೊಯ್ದಾರ್ (ಎಕ. IV, ಚಾಮರಾ. ೬೩-೮ ; ಸು. 750). **ತೆನಂದಾಕ :** ಪೆರ್ವ್ವಯಲ ಕೆಟಿರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರದರುಂ ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦-೭೨ ; ಸು. 890) ; ತೆನಂದಾಕಗಾದೆಯುಂ ಕಣ್ಣಮಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೮೫ ; 903). **ತೆನೆಂದಕ :** ನೊಕ್ಕಿ ಊರೊಳೆ ಅಗ್ಗಡಿ ಕಳೊಸ ಕೊಟ್ಟ ನೆಲ ತೆನೆನ್ದಕ ಕಾಡೆಜುಕು ಸಾಕ್ಷಿ (ಮೈಆರಿ. ೧೯೧೬, ೧೩-೮ ; 726). **ತೆನೆಂಧಕ :** ಕೊಟ್ಟ ನೆಲ ತೆನೆನ್ಧಕ ಕಾಳೆಜುಕು ಸಾಕ್ಷಿ (ಎಕ. III, ಮೈಸೂರು. ೨೫-೨ ; 750). [ ? ]

**ತೆನ್ನಮರ (ನಾ).** ೧. ತೆಂಗಿನ ಮರ. ೨ ತೆಂಗಿನ ಮರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೆನ್ನಮರಂ (ಎಇ. XVIII, ೧೪೨-೪೮ ; 1434). [ ← ತಮಿ. ತೆನ್ನಮರ ]

**ತೆನ್ನೆಲೆಹುಳಿಗ (ನಾ).** ಒಂದು ಬಗೆಯ ಮೂಲಿಕೆ ; ಅಗಳುಶುಂಠಿ : "ಅರಣ್ಯವಾಸಿನಿ – ತೆನ್ನೆಲೆಹುಳಿಗ" (ಓಷಧಿ. ೯); "ವಲ್ಲೀಕಾ–ತೆನ್ನೆಲೆಹುಳಿಗ, ಹಿಡಿಹಿಡಿಕೆ, ಶ್ರೀವಲ್ಲಿ, ಅಗಳುಶುಂಠಿ" (ಓಷಧಿ. ೧೪೫). 'ತನ್ನೆಲೆಹುಳಿಗ' ಪರಾ. [ ? ]

**ತೆನ್ನೊಟಿಬ್ಬಿ (ನಾ).** ದಕ್ಷಿಣಕ್ಕಿರುವ ಬೇಲಿ : ದಕ್ಷಿಣಸ್ಯಾನ್ದಿಸಿ(ಶಿ) ಕ (?) ಜು ಪ್ರೊಟಿಕ್ಕಾಲ್ ತೆನ್ನೆ(ನ್ನೊ)ಟಿಬ್ಬಿ . . . ಎಕಿಜುವ ದಿಕ್ಕಾಲ್ ತೆನ್ನೊಟಿಬ್ಬಿ ಎಕುಟ್ಟಿಕ್ಕಾಲ್ ತೆನ್ನೊಟಿಬ್ಬಿ (ಇಆ. XVIII, ೩೬೭-೨೩ ; 8ನೆಯ ಶತ).

[ತೆಂ + ಒಟಿಬ್ಬಿ (<ಒಟಿಬ್ಬಿ )]

**ತೆಪರ (ನಾ).** ಬುದ್ಧಿಯಿಲ್ಲದವನು ; ದಡ್ಡ : ಸೈಕೋಲ್ ಕೊಟ್ಟು ಬುಡೋವಷ್ಟು ತೆಪರಾ ಅಂತ ತಿಳಕೊಂಡಿಯೇನೋ ? (ಇಹನೋ. ೨೨). [ ? ]

**ತೆಪ್ಪ, ತೆಪ್ಪೆ (ನಾ).** ೧. ನದಿ ಅಥವಾ ಹೊಳೆಯನ್ನು ದಾಟಲು ಬಳಸುವ ಸಾಧನ ; ಹರಿಗೋಲು ; ನಾವೆ : "ತಳ್ಪಂ, ಉಡುಪಃ, ಪ್ಲವಃ – ಈ ೩ ತೆಪ್ಪಂ" (ನಶಾಯು. ೧೧೦–೪೯) ; "ಉಡುಪ ಪ್ಲವ ಕೋಲ" (ನಾಚಿರಾ. ೬) : ಪರಿದರ್ಪ ಪರ್ಬಿಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಪಂಚತಂ. ೨೯೬-೦೧) ; ತೊಟಿಯೊಳ್ ಪೋಪನಂಗೆ ತೆಪ್ಪವನಿಕ್ಕಿದಂತೆ (ಧರ್ಮಾಮೃ. ೧-೧೪೮) ; ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಿಂ (೧೧ಕ. ೨-೭೧ ವ) ; ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು ಗಾಲಿಗಳ ಹಾವರದ ಭಾರಿಗೆ (ಕುವ್ಯಾವಿ. ೬,೦೩. ೬–೫೯) ; ಉರುಳುತಿರ್ದವು ರಣದೊಳಗೆ ಹೆಣನೆರಡು ಸೇನೆಯಲರುಣಜಲವುಬ್ಬರಿಸುತಿರ್ದುದು ನೆಗಹಿ ನಾಲುಕು ಬಲದ ತೆಪ್ಪಗಳ (ತೊರರಾ. ೬–೦೩–೪೧) : ನದಿಯ ದಂಡೆಯಲ್ಲಿ ಒಂದು ತೆಪ್ಪವು ಕಟ್ಟಿ ಹಾಕಲ್ಪಟ್ಟಿದ್ದಿತು (ಶ್ರೀರಾಯ. ೧). ೨. ಬಿದಿರು, ಹಲಗೆಗಳಿಂದ ನಿರ್ಮಿಸಿದ ಚಪ್ಪಟೆಯಾದ ತೇಲುಸಾಧನ. 'ತೆಪ್ಪೋತ್ಸವ' ಪರಾ. **ತೆಪ್ಪೆ :** ೧. ಉದಕದಲ್ಲಿ ತೇಲಾಡುವ ತೆಪ್ಪೆಯ ವಿಧದಿಂದ ಮಹಾತ್ಮರು ಲೋಕ ಸಮುದ್ರದಲ್ಲಿ ಮುಳುಗದೆ ದಡವನ್ನು ಸೇರುವರು (ಮುಡಿಶ್ಯಾ. I, ೨೨೦) [ ದೇ.II ತಮಿ. ತೆಪ್ಪ, ತೆಪ್ಪಲ್, ತೇಪ್ಪೈ; ತುಳು. ತೆಪ್ಪ, ಚೆಪ್ಪೊ, ತೆಪ್ಪೊ; ತೆಲು. ತೆಪ್ಪ, ತೇಪ./ಅರ. ತಾಇಫಾ ; ಮರಾ. ... ]

**ತೆಪ್ಪಗೆ (ಅ).** ೧. ಸುಮ್ಮನೆ ; ನಿಶ್ಚಲವಾಗಿ ; ಮೌನವಾಗಿ : ಮೊಳೆವುದೊಮ್ಮೊಮ್ಮೆ ಚಿತ್ತದೊಳು ವಿಕಲ್ಪ ಕೂಡಳಿವುದೆಂತೆನೆ ಘಾಳಿಯಿಂದ ಜಲದಲ್ಲಿ ತೆರೆಯೇಳುವಂತೆ ಮತ್ತಾ ಘಾಳಿ ನಿಲೆ ಜಲ ತೆಪ್ಪಗಿಹಂತೆ (ಭರಶ. ೧೮–೪೯); ಆಜ್ಞೆ ಕೊಡಲಾರದೆ ತೆಪ್ಪಗೆ ನಿಂತುಕೊಂಡರು (ನಾಪೋಲಿ. ೮೦) ; ತೆಪ್ಪಗೆ ಕುಳಿತುಕೋ (ರಂಗಕ. ೧೦೯). ೨. ಪೆಚ್ಚಾಗಿ ; ಬೆಪ್ಪಾಗಿ : ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ (ಆಲಹೂ. ೪೯). ೩. ಆರಾಮವಾಗಿ ; ಸುಖವಾಗಿ ; ಹಾಯಾಗಿ : ತೆಪ್ಪಗೆ ಮದುವೆಯಾಗಿ ಸಂಸಾರಿಯಾಗು (ವಿದ್ಯಾರಿ. ೩೬).

ತೆಪ್ಪಗಾಗು = ಸುಮ್ಮನಾಗು ; ಮಾತನಾಡದಿರು ; ಮೌನವಾಗಿರು : ಖೈದಿಗಳೆಲ್ಲ ಸದ್ದು ನಿಲ್ಲಿಸಿ ತೆಪ್ಪಗಾದರು (ಪುನರು. ೫೩೮); ಈ ಮಾತುಗಳನ್ನು ಕೇಳಿ ಕುಡುಕನು ತೆಪ್ಪಗಾದನು (ಹಬ್ಬಿಬ. ೨೦೦) ; ಇಬ್ಬರೂ ತೆಪ್ಪಗಾದರು (ಮುರುಳು. ೬). ತೆಪ್ಪಗಿರು=೧. ಸುಮ್ಮನೆ ಇರು; ಮೌನದಿಂದಿರು: ಟಿಪ್ಪು ತನ್ನ ಹಗೆತನವನ್ನೂ ಹಿರಿಯಾಸೆಯನ್ನೂ ತೋರೆದು ತೆಪ್ಪಗಿರಲಿಲ್ಲ (ಭಾರದ. ೪೨೫) ; ಅವನು ಹೆದರಿ ತೆಪ್ಪಗಿದ್ದರೆ ಅವನ ಸಹೋದ್ಯೋಗಿಗಳು ಹೇಡಿಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೪೪). ೨. ಹಾಯಾಗಿರು; ನೆಮ್ಮದಿಯಿಂದಿರು: ನಾನೆ ಪೋಪೆನಮ್ಮಾಜಿ ತೆಪ್ಪಗಿರಿ ನೀವೆಂದ (ಭರಜ. ೩೭–೫೫) ; ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು (ಪಂಜಪಂ. ೧೮೧). 'ಸಪ್ಪಗೆ' ಪರಾ.

**ತೆಪ್ಪತೇರು (ನಾ).** ತೆಪ್ಪೋತ್ಸವದ ತೇರು ; ತೆಪ್ಪದ ರಥ : ಅವನ ತೆಪ್ಪತೇರಿನ ಮೇಲೆ . . . ನವಿಲುಹಿಂಡು ಕುಳಿತುಕೊಂಡು ಕಳಸಕ್ಕೆ ಕಪ್ಪು ತುಂಬುತ್ತವೆ (ಹಳ್ಳಿಜಾ. ೧೭). [ ತೆಪ್ಪ + ತೇರು₂ (<ತೇರ್₂) ]

**ತೆಪ್ಪತ್ತ** 'ತೆಪ್ಪಟು' ಪರಾ.

**ತೆಪ್ಪತ್ತು** 'ತೆಪ್ಪಟು' ಪರಾ.

**ತೆಪ್ಪನೆ (ಅ).** ೧. ಸುಮ್ಮನೆ ; ತೆಪ್ಪಗೆ : ಎಲೆ ಮರುಳೆ ! ನೀಂ ಭಯಂಬಡಬೇಡ, ತೆಪ್ಪನೆ ನಡೆ (ಮಿತ್ರಗೋ. ೨೩) ; ಇಬ್ಬರೂ ತೆಪ್ಪನೆ ನಡೆದು ಬರುತ್ತಿದ್ದೆವು (ಮಗಮಾಂ. ೩೯). ೨. ಒಮ್ಮೆಲೆ ; ಇದ್ದಕ್ಕಿದ್ದಂತೆ ; ನಿಷ್ಕಾರಣವಾಗಿ : ಮುಪ್ಪಾಗ ಬೆಣ್ಣೆಯನ್ನು ತಪ್ಪದೆ ನಾ ಹಾಕಿ ಸಾಕಿದ ಒಪ್ಪದಿಂದ ಗಿಳಿಯು ಈಗ ತೆಪ್ಪನೆ ಹಾರಿ ಹೋಯಿತಯ್ಯೊ (ಪುರಂದ. ೧-೧೧೨-೪). ೩. ಹಾಯಾಗಿ; ಸುಖವಾಗಿ : ತೆಪ್ಪನೆ ಬೀಣೆವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಿಕವಿ. ೪-೧೧೪).

ತೆಪ್ಪತೆಪ್ಪನೆ (ದ್ವಿರುಕ್ತಿ) : ಅವ್ಯಯ ಪದಾಂತ ಲೋಪಕ್ಕೆ . . . ತೊಪ್ಪತೊಪ್ಪನೆ, ತೆಪ್ಪತೆಪ್ಪನೆ ಪುರುಳ್ (ಶಮದ. ೧೯೩ ಪ್ರಯೋ). ತೆಪ್ಪನಾಗು = ತೆಪ್ಪಗಾಗು ; ಸುಮ್ಮನಾಗು : ಸುಮ್ಮನಿರುವುದರಲ್ಲಿ ಪುರುಷಾರ್ಥವಿದೆಯೆಂದು ಭಾವಿಸಿ ಬಸಗೋಂಡ ತೆಪ್ಪನಾಗುತ್ತಿದ್ದ (ದೀಪಹ. II, ೦೪೩). ತೆಪ್ಪನಿರು = ತೆಪ್ಪಗಿರು ; ಸುಮ್ಮನಿರು : ಹುಟ್ಟುಗುಣಗಳ ಮನಶ್ಶಕ್ತಿ . . . ಗುಪ್ತಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ. ಎಂದು ತೆಪ್ಪನಿರುವಂತಿಲ್ಲ (ಶಿಕ್ಷದ. ೬೪೯).

**ತೆಪ್ಪರಿಗೆ (ನಾ).** (ಕರಾ) ತೆಂಗಿನ ಗರಿಯ ಬುಡದಲ್ಲಿರುವ ಎಳೆಎಳೆಯಾದ ಹೊದಿಕೆ ; ತೆಂಗಿನ ಸೀರೆ ; ಸೀಬಿ : ನಾವು ಗವಿಯೊಳಗೆ ಹೋಗುವಾಗ ತೆಂಗಿನ ಗಿಡದ 'ತೆಪ್ಪರಿಗೆ'ಯ ಸೂಟೆಗಳನ್ನು ಬೆಳಕಿಗೆಂದು ಒಯ್ದಿದ್ದೆವು (ಗಂಗಾಪ. ೬೫). [←ತುಳು. ತೆಪ್ಪರಿಗೆ, ಚೆಪ್ಪರಿಗೆ]

**ತೆಪ್ಪರಿಸು (ಕ್ರಿ).** ಚೇತರಿಸು ; ಎಚ್ಚೆತ್ತುಕೊಳ್ಳು : ಶ್ರೀರಾಜ ಒಡೆಯ ಮಹಾಸ್ವಾಮಿಯವರು ಆ ಮಹಾಸಭೆಯ ವಿಕಾರ ವಿಲಾಸಗಳ ಉಮ್ಮಹವದನ್ನು ತಲೆಗಿಡಿಸಿ ತೆಪ್ಪರಿಸಿ ನೇರ್ಪಡಿಸಿಕೊಂಡರು (ಮಂತ್ರಶ. ೧೫೫-೨೨). [ತೆಪ್ಪರು (< ತೆಪ್ಪಟು ) + – ಇಸು₃ ]

**ತೆಪ್ಪರು** 'ತೆಪ್ಪಳು' ನೋ.

**ತೆಪ್ಪಸ** (ನಾ). = ತೆಪ್ಪ ೧ : ನರರ ತುರಂಗಂಗಳ . . . ಶರಹತಿಯಿನಾದ ಪಲ್ಲಟಗಡಿಗಳ್ ಪರಿವರುಣಜಲದ ತೊಱೆಯೊಳ್ ತೆರಳ್ದು ತೆಪ್ಪಸದ ತೆಱದೆ ಪರಿದವು ಧುರದೊಳ್ (ಮಹಾನೀ. ೫-೪೮). [< ತೆಪ್ಪ]

**ತೆಪ್ಪಹಾಂಸೆ** (ನಾ). ನೀರಿರುವ ಪ್ರದೇಶದಲ್ಲಿ, ಬೇರು ಆಳಕ್ಕಿಳಿಯದೆ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಸಸ್ಯ ; ಅಂತರ ಗಂಗೆ : ಅಂತರಗಂಗೆ ಅಥವಾ ತೆಪ್ಪಹಾಂಸೆ (ಮುಂಬಯಿ. ೬-೨೭೫).
[ತೆಪ್ಪ + ಹಾಂಸೆ (<ಪಾವಸೆ)]

**ತೆಪ್ಪಳು, ತೆಪ್ಪರು, ತೆರ್ಪಳು** (ಕ್ರಿ). ತೆಪ್ಪತ್ತ (ಭೂತಕೃ), ತೆಪ್ಪತ್ತು, ತೆರ್ಪತ್ತು (ಭೂತನ್ಯೂ). ಎಚ್ಚರಗೊಳ್ಳು ; ಚೇತರಿಸಿಕೊಳ್ಳು : "ತೆಪ್ಪಳು – ಚೇತನಕರಣೇ" (ಶಮಧಾ) ; ಆಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣ ನೆಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ (ಪಂಪಭಾ. ೧೩-೫೮ ವ) ; ಕೂಸಂ ಕಾಣದೆ ಬೆರ್ಚಿ . . . ಪೊಡರ್ಪುಗೆಟ್ಟು ಮರವಟ್ಟಂತಂತೆ ತೆಪ್ಪತುರ್ . . . ಕಾಂತೆ ಪುಯ್ಯಲ್ಚಿದಳ್ (ಬಂಹರಿ. ೮-೫); ಮೂರ್ಛೆಗೆ ಸಂದ ರಾಯುಂ . . . ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ (ರಾಮಾಶ್ವ. ೧೩-೨೨). **ತೆಪ್ಪರು :** ಕರೆಕರೆಯಾಂಪಳೊರ್ವೆ ನಿಜದೈವಮ ನೊರ್ವೆ ಕಡಂಗಿ ಬಯ್ದು ತೆಪ್ಪರುವಳದೊರ್ವೆ ಚಿಂತೆ ತಲೆದೋರೆ ಪಲುಂಬುವಳೊರ್ವೆ (ಚಂದ್ರಭ್ಯು. ೬-೨೭). △ **ತೆರ್ಪಳು:** "ತೆರ್ಪತ್ತಂ– ಮೂರ್ಛೆತಿಳಿದಂ" (ಶಮದ. ಪರಿ. ೨) ; ತೆರ್ಪತ್ತು ಬಿಬ್ದು ನಮೆಯು ತ್ತಿರ್ಪರ್ ನಾರಕರ್ (ಶಾಂತಿಪು. ೭-೯೯) ; ಎಚ್ಚಂಬೆರ್ದೆಯಿಂದುರ್ಚಲ್ . . . ತೆರ್ಪತ್ತಾಗಳ್ (ವೀರವಿ. ೧೨-೩೭).

ತೆಪ್ಪತ್ತುಕೊಳ್ಳು=ಚೇತರಿಸಿಕೊಳ್ಳು; ಎಚ್ಚತ್ತುಗೊಳ್ಳು : ಸ್ವಲ್ಪಕಾಲ ದಲ್ಲಿಯೇ ಮೊಗಲನು ತೆಪ್ಪತ್ತುಕೊಂಡು . . . ರಂಗಸ್ಥಳದಿಂದ ಹೊರಕ್ಕೆ ಹೋದನು (ಭಾರವೀ. ೧೨೩); ಅಂದಿನಿಂದ ಅವರು ಸ್ವಲ್ಪ ತೆಪ್ಪತ್ತುಕೊಂಡು ಎದ್ದು ಊಟ ಮಾಡಲೂ ಅಲ್ಲಲ್ಲಿ ತಿರುಗಲೂ ಅನುವಾದರು (ನಗಗ. ೭೭).
[ ದೇ.॥ ತೆಲು. ತೆಪ್ಪಱು, ತೆಪ್ಪರು, ತೆಪ್ಪಿರು, ತೆಪ್ಪಿಱಿಲು, ತೆಪ್ಪಿಱು ]

**ತೆಪ್ಪೆ** 'ತೆಪ್ಪ' ನೋ.

**ತೆಪ್ಪೋತ್ಸವ** (ನಾ). ತೆಪ್ಪದಲ್ಲಿ ದೇವರನ್ನು ಕೂರಿಸಿ ಮಾಡುವ ಉತ್ಸವ,–ಮೆರವಣಿಗೆ: ನಮ್ಮ ದೇವಾಲಯಗಳ ಲಕ್ಷದೀಪ ತೆಪ್ಪೋತ್ಸವ, ದೀಪಾರಾಧನೆಗಳಲ್ಲಿ ಅಸಂಖ್ಯಾತ ದೀಪಗಳನ್ನು ಹಣತೆಯಲ್ಲಿ ಉರಿಸುತ್ತೇವೆ (ಜಾಲಪ್ರ. III, ೧೩೬೯). ℙ ಈ ರೂಪ ವ್ಯಾಕರಣ ಶುದ್ಧವಲ್ಲ.

**ತೆಬ್ಬಱಿಸು** (ಕ್ರಿ). ೧. ಹಾರು ; ನೆಗೆ ; ಚಿಮ್ಮು ; ಪುಟನೆಗೆ : ಎತ್ತಂ ತೆಬ್ಬಱಿಸಿಯಾಡುವಟ್ಟೆಗಳುಬ್ಬರದಿಂದೊಱೆದು ಪರಿವ ರುಧಿರಸ್ರೋತಂ (ನೇಮಿಪು ೧೧-೧೮೪). 'ಟೆಪ್ಪರಿಸು' ಪಠಾ. ೨. ಉತ್ಸಾಹಗೊಳ್ಳು ; ಹುರಂಪನ್ನು ಪಡೆ : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬಱಿಸಿ ಯುಮಪ್ಪಯ್ಕೊಳಪ್ಪಿಕೊಂಡು (ಪಂಪಭಾ. ೧೩-೮ ವ) ; ಆನಂದಿತಚಿತ್ತರಾಗಿ ತಡವರಿಸಿಯುಂ ತೆಬ್ಬಱಿಸಿಯುಂ ತೆಗೆದಪ್ಪಿಯುಂ (ಗದಾಯು. ೩-೮೪ವ) : "ಚೇತರಿಸಿಕೊಳ್ಳುವಂತೆ ಮಾಡು" (ಗದಾಸಂ. ಟಿಪ್ಪಣಿ) ;ಕರವಾಳ ಘಾತದಿಂ ಪರಿದುರುಳ್ವ ತಲೆಗಳನವುಂಕಿ ಪಿಡಿದರೆಬರ್ ತೆ[ಪಾಠಾಂ. ಟೆ]ಬ್ಬಱಿಸಿ ಮಗುಬ್ದಟ್ಟೆಯೊಳ್ ಬಿತ್ತರದಿ ಬೀರಕ್ಕೆ ಕಳಶವಿಡುವಂತಿಟ್ಟರ್ (ಚಂದ್ರಪು. ೧೦-೭೩). [ <ತೆಬ್ಬು$_1$ + – ಇಸು$_3$ ]

**ತೆಬ್ಬು$_1$** 'ತುಬ್ಬು$_1$' ನೋ.

**ತೆಬ್ಬು$_2$** 'ತಿರುವು$_3$' ನೋ.

**ತೆಮಟೆ** 'ತೆಟ್ಟೆ' ನೋ.

**ತೆಮರ್$_1$, ತೆಮರು$_1$, ತೆಮಱು, ತೆವರು$_1$** (ಕ್ರಿ). ೧. ಅಟ್ಟು; ಓಡಿಸು; ನಿವಾರಿಸು : ತಿಮಿರಭ್ರಮರವ್ರಜಮಾಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರ ದಿಶಾರಮಣ ತೆಮರಲ್ಕೆ ಚಂಪಕಸುಮಕಂತುಕಮಿಟ್ಟಳೆನಿಕುಮಾ ವಿಧು ಬಿಂಬಂ (ರಾಜಶೇ. ೧೧-೪೬) ; ಪರಿತಂದು ತಿಮಿರ ಮಧುಪೋತ್ಕರಮುಮಡು ಸುಮಚಯಕೆ ಬಳಸಿ[ಸೆ] ತೆಮರಲ್ ಭರದಿಂ ಹರಿದಿಗ್ವಧುಮಿಟ್ಟತಿಭಾಸುರ ಚಂಪಕದಿಂಡೆಯೆನೆ ನಿಶಾಕರನೆಸೆಗುಂ (ವಿಷ್ಣುಪು. ೫-೩-೧೦೦) ; ನೋಡಿದನ ಖಿಳಾಘಮಂ ತೆಮರ್ವ ಕಣ್ಗಳಿಂ (ಶಬಶಂ. ೫-೪೦) ; ಐದು ಕೋಶಗಳ ಹೊಕ್ಕೈದು ಯೋಗಗಳ ಮಿಕ್ಕೈದು ಲಕ್ಷಣವ ತೆಮರ್ದೈದು ವಿಷಯಗಳ ನೆಮರ್ದು (ಕೈಕವ. ೧-೨೧-೩). ೨. ಹೆದರು ; ಬೆದರು ; ಹಿಮ್ಮೆಟ್ಟು : ಸೆಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ದನೆಂದುಂ – ಈ ೮ ಭಯಂಗೊಂಡವಂ (ಕ ಶ ಸಾ. ೧೨-೨೨೫) ; ಜನ್ಮಾರ್ಜಿತಾಘಂಗಳುಂ ತೆಮರ್ಗುಂ (ಕಮನಾ. ೩-೩೯೭). ೩. ಹೀಯಾಳಿಸು ; ತಿರಸ್ಕರಿಸು : ಎಮೆದುಱುಗಲ್ಕವಲ್ತು ಕುಡಿಗೊಂಡವೊಲಾಗಿರೆ ಸೋಗೆ ಸೋಗೆಯಂ ತೆಮರ್ವವೊಲೊಪ್ಪೆ ಸೋಮರ್ಡಿ . . . ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ (ರಾಜಶೇ. ೦೨-೫೫) **ತೆಮರು$_1$ :** ೧. ವಿಭ್ರಮ ಮುಱಿದಿರ್ಪುಗುಂದಿ ಬಸಿಱಂ ಪೊಸೆದೊತ್ತಿನೊಳೊಂದಿ ನಿಂದರಂ ತೆಮರಿ ತೆರಳ್ಕೆ ಕಾರ್ಯಮಣಮಿಲ್ಲದೆ ಬಿಣ್ಪೞಿದೊರ್ವಳೊಪ್ಪಿದಳ್ (ರಸರ. ಪರಿ. ೦೦೯). △ **ತೆಮಱು :** ೧. ನಡೆದುಚ್ಚಂಗಿಗೆ ಬಂದ ರಾಯದಳಮಂ ಕಯಿ ಕೊಳ್ಳದೊಂದಂಗದಿಂ ಬಿಡದೆಚ್ಚಾಡಿ ಸರಂಗಳಿಂ ತೆಮಱಿಯಂತಾ ಸೇನೆ ಪಿಂಗಲ್ಕೆ ತಾಂ ಪಡೆದಂ ವೀರದ ಪೆರ್ಮೆಯುಂ (ಎಕ. V, ಅರಸೀ.೧೦೮–೨೦ ; 1255). **ತೆವರು$_1$ :** ೧. ತುಂಬಿ ತುಂಬಿಯುನಟ್ಟುವಂತಳಕವಳೆಕವರಲಂಬಂಬ ತೆವ[ಪಾಠಾಂ. ಮ]ರುವಂತೆ . . . ಚಿಟ್ಟುಮುರಿಯಾಡುತಿರ್ದರು ಸತಿಯರು (ಹಚಕಾ. ೪-೧೦) : ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ (ಕುವ್ಯಾಆ. ಓರಿಷ. ೨೬-೧೧೫) ; ಭವಾಂತರದೋಷತಮವ ತೆವರುವ ನೇಸಱಿಂದೆನಿಪ್ಪುದು (ಸೌಂದಪು. ೬-೪೫) : ಗಿಳಿಗಳಂ ತೆವರುವ ಪಾಮರ ಸ್ತ್ರೀಯರ್ (ರೇವಣ. ೨೩-೯) ; ವಿಷಮುನಮೃತಂ ಪುಣ್ಯಮಾ ಪಾಪವ ಸಲೆ ತೆವರುವಂತೆ ಪರವಾದಮಂ ಗೆಲ್ದು (ಚಿಬಪು. ೩-೨೮) : ಅಪ್ಪಳಿಸಿ ಹೊಯ್ದೆ ಳೆದು ಸದೆದಿಟ್ಟೊರಸಿ ಮೆಟ್ಟಿ ಸೊಪ್ಪಿಸಿ ಪೊರಳ್ದರೆದು ತೆವರಿ ಪರಿದರೆಯಟ್ಟಿ ಚಿಪ್ಪುಚೀರಾಗಿಸಿತು ಸಕಲ ಪರಿವಾರಮಂ (ಜೈಮಿಭಾ. ೦೩-೫೦). ೨. ಇವನ ಕಾಣಾತ ಸಕಲಸುರಮುನಿನಿವಹಮಾಚರಿಸಿತು ದೆಸೆದೆಸೆಗವಯವದ ಭೀತಿ ಯೊಳಗೋಡಿತು ಬ್ರಹ್ಮವಟುನಿವಹ ತೆವರುತಿರ್ದವು ಖಗ ಮೃಗಾವಳಿ (ಅಂಬಿಕಾ. ೭-೪೪). ೩. ಅರೆನಗೆಯು ಬಿಱುನಗೆಯು ನಗೆಗಳ ಹೊರಳಿಗಳ ಲಡಬಿದ್ದು ಕೈದಾವರೆಯು ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರರಾ ೧-೧೫-೮).

**ತೆಮರ್$_2$, ತೆಮರು$_3$, ತೆವರ್, ತೆವರ, ತೆವರಿ, ತೆವರು$_2$** (ನಾ). ೧. ದಿಣ್ಣೆ ; ಬೋರೆ ; ದಿಬ್ಬ ; ತಿಟ್ಟು : ಅಡವಿ ಬಯಲಾಗೆ ನದ ಮೊಟ್ಟುಡುಗೆ ತೆಮರ್ಸರಿಸಮಾಗೆ (ಕಾವ್ಯಾವ. ೨೯೪) ; ತೆಮರೆಲ್ಲಂ ಜೈನ ರಾಜಾಯತನಮೆ ಕುೞಿಯೆಲ್ಲಂ ನವಾಂಭೋಜಿನೀಷಂಡಮೆ ಪೌರೋದ್ಯಾನ ಮೆಲ್ಲಂ ಸುರಕುಜಮೆ (ಅನಂಪು. ೩-೭) ; ಮುಂಡಿಗೆಯ ತುದಿಗಳಂ ಕುೞಿ ತೆಮರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನನಪ್ಪಂತೆ ನೆಲಂ (ಅಶ್ವಶಾ. ೭-೫). **ತೆಮರು$_3$ :** ೧. ಪಳ್ಳದ ಬಡಗಣ ತೆಮರು (ಮ್ಯಆರಿ. ೧೯೨೯, ೩೮-೯; 8 ನೆಯ ಶತ). **ತೆವರ್:** ೧."ದ್ವೀಪಃ, ಅಂತರೀಪಂ ಈ ೨ ನೀರ ನಡುವಣ ಕುರುವದ ಪೆಸರು. ಉದಕದ ತೆವರೆಂದು ಎಂಬರು" (ನಾಚಿರಾ. ೯೯) ; "ತೆವರಾರಯಲುದ್ದನೆಲಂ" (ಚತುನಿ. ೩೫) ; ಮುಗಿಲಿಂದೆ ಱಗುವ ಮೞೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊರಡುಪ ಜಲಧಿಗಳೆನೆ (ಆದಿಪು. ೬-೬೨) ; ತೆವರೆಲ್ಲಂ ದೇವತಾಮಂದಿರನಿವಹಮೆ (ಎಇ. XVI, ೩೮-೨೪ ; 1152) ; ಕಲ್ಲಾಗಿ ಮಣ್ಣಾಗಿ ಕುಳಿಯಾಗಿ ತೆವರಾಗಿ (ಪಿಂಡೋರ.ಹ. ೫೦೦-೭) : ಕುೞಿಯುಂ ತೆವರುಂ ಸಮನಾಯ್ತುದೆತ್ತಲುಂ

(ಪುಷ್ಪಪು. ೫-೪೬) : ಭೂಮಿಯ ಕುಳಿ ತೆವರ್ಮೊದಲಾದುದಂ ನೋಡಿ (ಶ್ರಾವಕಾ. ೯೩-೨೨) : ತೊರಳೆಗುಪ್ಪೆ ಮಜ್ಜೆಯ ತೆವರ್ ಸುಂಟಿಗೆಯ ಸಾಲ್ (ಚಿಬಪು. ೯೮-೫೬). **ತೆವರ** : ೧. ಆ ತೆವರದ ಶಿಲೆಯ ಕಂಬ (ಎಕ. XII, ತುಮಕೂ. ೬-೧೨ ; 1515) : ತಿಟ್ಟೆಯೊಳು ತೆವರದೊಳು ಹುಟ್ಟಿಹನೆ ಪರಶಿವನು ಹುಟ್ಟು ಸಾವುಗಳು ಅವಗಿಲ್ಲ ಜಗವನ್ನು ಬಿಟ್ಟಿಹನು ನೋಡ (ಸರ್ವಜ್ಞ. ೩೩೩). **ತೆವರಿ** : ೧. ತನೆ ತಿಂದ ಎತ್ತು ತೆವರಿಯನ್ನು ಏರಿತು (ಗಾದೆ). ೨. ಹೊಲ ಗದೆ ಮೊದಲಾದುವುಗಳ ಬದು,–ಏರಿ,–ಅಂಚು : ಗದ್ದೆಯ ತೆವರಿಯಲ್ಲಿ ಬರುತ್ತಿದ್ದ ದೊಡ್ಡನನ್ನು ದೂರದಿಂದಲೇ ಬೆಳ್ಳಿ ನೋಡಿದಳು (ಕಾಲೂರ. ೪ ಕಥಾಸಾರ). **ತೆವರ್ಪು** : ೧. ತಜ್ಞಣ ತೆವರು ಪಡುವ ಪಳ ಮೇರೆ (ಎಕ. V, ಅರಕ ೨೪-೧೩ ; ಸು. ೯೦೦) ; ಉಗುಳ ನುಂಗಿ ಹಸಿವ ಕಳೆದು ತೆವರ ಮಲಗಿ ನಿದ್ರೆಗೆಯ್ದೆನಲ್ಲಾ (ಅವಡಂ. ೮೨-೩೬೮) ; ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುಚಿಯಿತ್ತು (ಮೋಳಿಮಾ. ೧೩೪-೩೦) ; ಗುರುಸೇವೆ ಕೈಕೊಂಡು ಹಿರಿದಾಗಿ ಮಾಡದರೆ ಹರಿದೇಚಿ ಮುಕ್ತಿ ಪಡೆಯುವಡೆ ಅದು ತಾನು ಹಿರಿದಾದ ತೆವರೆ (ಸರ್ವಜ್ಞ. ೫೬) ; ಸಂದಿಗೊಂದಿಯೊಳೆ ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಬೀಗೀ. ೨೪-೪೧೯) ೨. ಗದ್ದೆಗೆ ತೆವರು ಗಟ್ಟಿಯಿರಬೇಕು (ಸಂಸ್ಕಾರ. ೩೬) ; ನಮ್ಮ ಎರೆಹೊಲದ ತೆವರಿನಲ್ಲಿ ಒಂದು ಒಳ್ಳೆ ಹಲಸಿನ ಮರವಿದೆ (ಜಿಂಗಾಳ್ಸ್. ೩೫). [ ? ]

**ತೆಮರ್ಪು₁** 'ತೆಮರ್₁' ನೋ.

**ತೆಮರ್ಪು₂** 'ತೆಮರ್₂' ನೋ.

**ತೆಮಲಿಸು** (ಕ್ರಿ). ನೂಕು; ತಳ್ಳು; ಕದಲಿಸು : ಮಾರಿಯಂದದಿ ನಿಂದಿಹನ ಮತ್ತಾರು ತೆಮಲಿಪರೆಂದು ಬಳಲಿಕೆ ಸಾರಿದರು ಮೊದಲಿಂದ ಸೆಣಸಿದ ಖಚರಸಂತತಿಯೂ (ಜಿನಭಾ. ೫೨-೩೬).

[ ತೆಮಲು (<ತೆಮುಟ್) + – ಇಸು₃ ]

**ತೆಮಲು** 'ತೆಮುಟ್' ನೋ.

**ತೆಮಳ್** 'ತೆಮುಟ್' ನೋ.

**ತೆಮಳು** 'ತೆಮುಟ್' ನೋ.

**ತೆಮಳ್ಚು, ತೆವರ್ಚು** (ಕ್ರಿ). = ತೆಮಲಿಸು : ಮೇಲುದಂ ತೆಮಳ್ಚಿ ಕುಚ ಮಂಡಳಂ ಕುಣಿಯೆ . . . ಘಟ್ಟಿವಳ್ತಿಯರದೇಂ ಮನಂಗೊಂಡರೋ (ಧರ್ಮನಾ. ೨-೪೪). **ತೆವರ್ಚು** : ಮೇಲುದಂ ತೆವರ್ಚುತ ಸುಯ್ಯುದ್ದ ಬಿನ್ನಣದಿಂ ಬೇಟವಂ ಬೀರಿ ಮುಂಬರಿವವಳ (ರುಕ್ಮಾಂಗ. ೬-೬೧).

[ ತೆಮಳ್ (<ತೆಮುಟ್) + – ಚು₁ ]

**ತೆಮಳ್ದು** 'ತೆಮುಟ್ದು' ನೋ.

△ **ತೆಮುಚು** 'ತೆಮರ್₁' ನೋ.

**ತೆಮುಟ್, ತೆಮಲು, ತೆಮಳ್, ತೆವಂಳಂ, ತೆವಳ್, ತೆವಳು** (ಕ್ರಿ). ೧. ಸೇರು ; ಕೂಡು ; ಬೆಂಬಲಿಸು : ಅಮಳರುಮಾ ಬೇಳ್ವೆಯ ಮಾತಂ ತೆಮುಟಿ [ಪಾಠಾಂ. ತವುಗೆ] ನುಡಿದೊಡಮ್ಮ ಗಂಡವಾತುಮಳುಂಬಂ ಭೃತಮಕ್ಕುಮೆಂದು (ಪಂಪಭಾ. ೬-೨೬ ವ). ೨. ತಿರುಗು ; ಹೊರಳು : ತೆಮುಟ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು (ಶಾಂತಿಪು. ೯-೧೪೩ ವ). ೩. ಹೊಟ್ಟೆ ಮೇಲೆ ಭಾರ ಹಾಕಿ ಮುಂದೆ ಸರಿ ; ದೇಕು : ಏಟು ದಿವಸದೊಳ್ ತೆಮುಟ್ದು ಪೆಜವೇಟುದಿವಸಕ್ಕೆ ತಳರ್ನಡೆ ನಡೆದುಂ (ಆದಿಪು. ೫-೪೦ ವ) ; ತಡೆಯದೆ ಕುಳ್ಳಿರಲ್ ತುರಿಪದಿಂ ತೆಮುಟಲ್ ತದನಂತರಂ ತಳರ್ನಡೆ ನಡೆಯಲ್ (ಶಾಂತಿಪು. ೬-೧೦೬). ೪. ಮಾಸು : ಮಂಕಾಗು ; ಮಸುಳು: ಮುಟ್ಟಿ ಮಾಡೆ ಸುಕರತ್ವಂ ತೆಮುಟ್ದುಪ್ಪುದೆಂದು ಮನೋಜಾತ ನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿದ್ಧಮಂ (ಅನಂಪು. ೨-೧೩). ೫. ಸಮನಾಗಿರು; ಮಟ್ಟಸವಾಗಿರು: ತೆಮುಟಿದೆ ಕುಟಿಯಿಲ್ಲದೆಯುಂ ಸುಮನೋಹರಮಪ್ಪ ಕಕ್ಷಮತಿಶುಭದಂಗಳ್ (ಲೋಕೋಪ. ೧೧-೦೦). **ತೆಮಲು** : ೬. ಅಲುಗು; ಕದಲು; ಜರುಗು: ಜೈನರು ಬಸದಿಗಂ ಪೋಗಿ ಹೇಮಗದಗಳ ಬೀಗಮಂ ತೆಗೆದು ನೂಂಕಲುದ್ಯಾಮದಿಂ ತೆಮಲದಿರಲವರು ವಾದಯ್ಯನಿಂದಾದ ವಿಘ್ನವಿದೆನ್ನಲು (ಪ್ರಭುಪು. ೮-೫೦). **ತೆಮಳ್** : ೩. ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಗಡಿಯನಿರದಿಡಲ್ಕಾಟಿ ದಂಬಳ್ಗೈಗಳಿಂ ತೆಮಳ್ದು ಭರದೆ ಬರ್ಪರ್ ಕೆಲರ್ (ಅರಾಜ. ೪-೩೬). ೬. 'ತೆಮಳ್ಚು' ಪರಾ. ೭. ಹಿಮ್ಮೆಟ್ಟು ; ದೂರವಾಗು : ಮದಂಭ್ರಿಯುಂ ಸಮರ್ಚಿಪುದದಱಿಂ ತೆಮಳ್ಗುಂ ದ್ವಿಜಘ್ನದೋಷಂ (ಹಸ್ತಿಮಾ. ೯-೨೪) **ತೆಮಳು** : ೮. ನಡೆಸು ; ಚಲಿಸುವಂತೆ ಮಾಡು : ಸುಮತಿಸಾಗರ ಮುಂದೆ ಭರದಿ ವಿಮಾನವ ತೆಮಳಿಕೊಂಡಿಯ್ದು ವಾರ್ತೆಯನು ನಮಿರಾಜಗಱುಹೆ (ಭರಜ. ೩೪-೮). **ತೆವಳ್** : ೩. ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದುವು ದೂಳ್ಗಳರುಣಾಂಬುವಿಂದೆದೆಯೊಳ್ಸವಳ್ದ ಹಿಯವೋಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನು (ಜೈಮಿಭಾ. ೧೪-೧೬) : ಗಟಿಗೆಯನಿತು ತೆವಳಲಿರ್ಪ ಉಸಿರಿಗಳಾ ಸಾಹಸಮ್ (ಬದ್ಮಪು. ೨೯-೬೧೯). **ತೆವಳು** : ೩. ಕರಯುಗದೊಳಿರದು ಕೈಮಣೆವಿಡಿದುಕೊಂಡು ಪುರವರದ ಬೀದಿಯೊಳೊರ್ವ ಕುಂಭಕಾರಂ ತೆವ[ಪಾಠಾಂ. ಮ]ಳಿ ಬರುತಿರಲ್ಕೆ (ಸಮ್ಯಕ್ತಾ. ೨-೯೨) ; ಮೆಲ್ಲನೆ ತೆವಳಿ ಆಡುವ ಕಿಱುವರೆಯದಂದಂಗಳದೊಳಾಡುತಲು ಹರಿಯಿರಲು (ಸಾಳ್ಸಭಾ. ೨೧-೪೩) ; ಕಾಲೊಡೆದು ಕೆಲವು ದೂರ ತೆವಳುತ್ತ ಪೊರಳುತ್ತ ರಕ್ತಂ ಸುರಿವುತಾ ರಮಣಿ ಬರುತ್ತಿರಲ್ (ಪಾಸೋಪು. ೪-೧೪೮) ; ಇರದಮೃತ ಕಾಂತೆಯಂ ಕೈವೀಸಿ ಕರೆವಂತೆ ಕರವ ಮುಂದಿಟ್ಟಲ್ಲಿ ತೆವಳುವಳು ಬಳಲುವಳು (ಸಿದ್ಧಕಾ. ೫-೩೦) ; ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ (ಅನಾಥ. ೨೬೩) ; ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ (ಗಾದೆ). ೯. ನಿಧಾನವಾಗು; ಮಂದಗತಿಯಾಗು : ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ ತೆವಳುವುದು (ಶಿಕ್ಷದ. ೭೪).

[ ದೇ.॥ ತಮಿ. ತವಟ್, ತಿವಳ್; ಮಲ. ತವಿಟು; ತೆಲು. ತೆಮಲು ]

**ತೆಮುಟ್ದು, ತೆಮಳ್ದು** (ಕ್ರಿ). ೧. ಒಟ್ಟುಮಾಡು ; ಒಂದುಗೂಡಿಸು ; ಕೂಡಿಸು ; ಸಂಗ್ರಹಿಸು : ತುಮುಳಯುದ್ಧದೊಳಿಂತೆ ನಿರಂತರಂ ತೆಮುಟ್ದಿ ಕಾದಲೆ ನಮ್ಮಯ ಸತ್ವರಾಕ್ರಮಮನೆಂತಱಿಗುಂ ಜಗಮಂತಱಂ ಕ್ರಮದಿನೊರ್ವರೊಳೊರ್ವರೆ ಕಾದುವಂ (ನೇಮಿಪು. ೧೨-೨) : ವಿರಹಾನಲನಾಳಿಯರೊಂದಹರ್ನಿಶಂ ತಳಿಯೆ ತೆಮುಟ್ದು [ಪಾಠಾಂ. ದುರ್] ಪೇರ್ದ ಪಟನೀರ್ಗಳನಟ್ಟಿಸಲಾಱದೆಯ್ದೆ ಕಂಟಳಿಸಿ ಮುಗುಳ್ಚಿದಪ್ಪ ದೆನಲುಮ್ಮನೆ ಕಾಮಿನಿಯೇಂ ಬೆಮರ್ತಳೋ (ಲೀಲಾವ. ೧೨-೩೮) ; ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮೈಮೆಯ ಬಲ್ಮೆಯಿನೊರ್ಮೊದಲೊಳೆ ತೆಮುಟ್ದಿ ಬಿಚ್ಚಟಿಸಿ ನೋಡಲ್ (ರಾಮಾಶ್ವ. ೬೯-೧೬). ೨. ಬಳಿದಂಕೊಳ್ಳು ; ಪೂಸು ; ಹಚ್ಚಿಕೊಳ್ಳು : ಕುಮುದದ ಕೇಸರರಜಮಂ ತೆಮಳ್ದಿ ತಟಿಸ್ಕೈಸಿ (ಲೀಲಾವ. ೫-೮೫). **ತೆಮಳ್ದು** : ೧. "ತೆಮಳ್ದು – ಚಯನೇ (ಕೂಡಿ ಹಾಕು) (ಶಮಧಾ)". ೩. ಒಟ್ಟಾಗು ; ಒಂದುಗೂಡು : ತಾಳ್ದನಸುರಾರಿ ಭೀತಿಯನೆಳ್ದೊಡಿದನಿಂದ್ರನಖಿಳದೇವ ಪ್ರತತಿ ತೆಮಳ್ದುದು (ವೀರವಿ. ೧೧-೮).

**ತೆಮುಟ್ದಿಕೊಳ್** = ೧. ಒಟ್ಟುಮಾಡು ; ಒಂದುಗೂಡಿಸು : ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮುಟ್ದಿಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು (ಆದಿಪು. ೨-೩೯ ವ) ; ತಾನುಗುಟುತ್ತು ಮಿರ್ಪ ಪೊಸಗಂಪುಮನಿತ್ತೆ ತೆಮುಟ್ದಿಕೊಂಡು ಮಂದಾನಿಳನುಯ್ಯುತಿರ್ಪ

ತನಿಗಂಪುವನಿತ್ತೆ . . . ಗಡಂ ಪ್ರಫುಲ್ಲಮಲ್ಲೀನವಪುಷ್ಪಮೋಗರದ ಕಂಪು ಗಳಾಗರವಮಾಯ್ತು ಸುಗ್ಗಿಯೊಳ್ (ಚಂದ್ರಪು. ೭-೪೯). ೨. ಬಳಿದಂ ಕೊಳ್ಳು; ಪೂಸಂ; ಲೇಪಿಸಿಕೊಳ್ಳು: ಕಿದಱುತ್ತುಂ ವಣಲಂ ತೆವಮಟ್ದಿ ಕೊಳುತಂ ಭೂರೇಣುವಂ . . . ಪೊಕ್ಕುದು ಬೀಡಂ ಲಯಕಾಲಕಾಲ ವಿಚಲದ್ವೀಪಮಾರುತಂ ಮಾರುತಂ (ಕಾವ್ಯಾವ. ೪೦೯). [ <ತೆಮಟ್ ]

ತೆಮ್ಮ 'ತೊಂಬೆ$_1$' ನೋ.

ತೆಮ್ಮಲ್, ತೆಮ್ಮಲಂ (ನಾ). ಗುಂಪು; ಸಮೂಹ: "ಬಂಬಲ್, ತುಱುಗಲ್ . . . ತೆಮ್ಮಲ್, ಗುಮ್ಮಿ, ಗೊಂದಣ (ಉಂದಲ್) ಈ ೪೦ ಸಮೂಹಂ" (ಕಶಸಾ. ೬೯-೨೩೨): "ತಂಡಂ ತೆರಳ್ಕೆ . . . ತೆಮ್ಮಲ್ . . . ಪಂಡಿತರಿಂ ಗಡಣ ವಂಗಡಂ ಕಿಕ್ಕಿಂದಂ" (ಕವಿಕಂ. ೧೧೬). ತೆಮ್ಮಲು: ತೆಮ್ಮಲಿನ ತಿಂಡಿಗಳ್ ಹಸುರಲೆಯು ತಟ್ಟೆ (ಕಾಲೂರ. ೬೩-೧೦೯). "ಸಂಗ್ರಹ" (ಕಾಲೂರ. ಕೋಶ). [ ತೆಮ್ (<ತೊಂಬೆ$_1$) + -ಅಲ್$_2$ ]

ತೆಮ್ಮಲು 'ತೆಮ್ಮಲ್' ನೋ.

ತೆಮ್ಮೊಡಲು 'ತೆಂ' ಪರಾ.

ತೆಮ್ಮೊಡು 'ತೆಂ' ಪರಾ.

ತೆಮ್ಮೆ 'ತೊಂಬೆ$_1$' ನೋ.

ತೆವ್ವೊಲ (ನಾ). ದಕ್ಷಿಣ ದಿಕ್ಕಿನಲ್ಲಿರುವ ಹೊಲ: ಬಸದಿಗೆ ಪಡುವಣ ತೆಙ್ಗತೋಣ್ಟಮುಂ ತೆವ್ವೊಲದೊಳ್ನಾಲ್ಗೊಳೆವೆಡೆ ಪಳ್ಳ ಕಳನಿ (ಎಕ. X, ಕೋಲಾರ. ೯೦-೯೨ : 903). 'ತೆಂಬಾಲ' ಪರಾ. [ ತೆಂ + ಪೊಲ ]

ತೆಯ್ 'ತೇ$_1$' ನೋ.

ತೆಯುಲಯ್ಯಜೂಬು (ನಾ). ಒಬ್ಬಾತನ ಹೆಸರಂ: ತೆಯುಲಯ್ಯಜೂಬು ಕಾಲಂ ಕಚ್ಚಿ . . . ಏಱಿಯ[ರ]ಸಂಗೆ ಬಿಟ್ಟಗ್ರಹಾರ (ಎಕ. I, ೯೦-೧; 10ನೆಯ ಶತ). [ ? ]

ತೆಯುಲ್ಲಿ (ನಾ). ಒಂದು ಬಗೆಯಂ ಆಯುಧ (?): ಖಡಲ್ಲಿ ತೆಯುಲ್ಲಿ ಬಿಲ್ಲು ನಾರಾಚ ಗದೆ . . . ಚಿಲುತಲಿ ಮೊದಲಾದ ಬತ್ತೀಶಾಯುಧಾ ಶಕ್ತಿಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೧ ; 1776). [ ? ]

ತೆರ$_1$ 'ತೆಱ$_1$' ನೋ.

ತೆರ$_2$ 'ತೆಱ$^3$' ನೋ.

ತೆರಂ 'ತೆಱಂ' ನೋ.

ತೆರಂಗುಣಿ (ಕ್ರಿ). ಚೆನ್ನಾಗಿ ಕುಣಿ; ಅತಿಶಯವಾಗಿ ನರ್ತಿಸಂ: ಎನಗಿದೆ ಎಂತೆ ಮೆಯ್ಯುಡುಕವೋಪೊ ನವಿರ್ಗುಡಿಗಟ್ಟುಹಂ ಚಿಳಿಲ್ಲನೆ ಬೆವಮರಶ್ರು ಮಾಲೆ ಬಗೆದೇಂಕು ತೆರಂಗುಣಿವಾಸೆ ಪೊಂಕಮೇಕೆನಿತೊ (ಸಂಕಪ. ೨೦-೫೩). [ ತೆರಂ (<ತೆಱಂ) + ಕುಣಿ$_1$ ]

ತೆರಂಟು, ತೆರಟು$_1$ (ಕ್ರಿ). ವಧೂವರರಿಗೆ ಉಡುಗೊರೆಯನ್ನು ಕೊಡು; ಮುಂಯ್ಯಿಕೊಡಂ: "ತೆರಂಟುನಿವಸನೋದ್ವಹನೇ (ಮುಯ್ಯ ಸೀರೆ ಕೊಡು) (ಶಮಧಾ); ನಿತ್ಯ ಬಿಂದುಗೆ-ಬೆಡಂಗು ... ತೆರಂಟು, ಸೀಂಟು (ಶಮದ. ೩೬ ಪ್ರಯೋ). ತೆರಟು$_1$: "ತೆರಟು-ನಿವಸನೋದ್ವಹನೇ" (ಶಮಧಾ. ಸ). 'ತೆಲ್ಲಂಟಿ' ಪರಾ. [ <ತೆಱು$_1$ ]

ತೆರಂಬಿಡು (ಕ್ರಿ) ತೆರವಾಗಿ ಬಿಡಂ; ಖಾಲಿ ಮಾಡಂ: ಅವು ಮುನ್ನ ತಮಗಿರ್ದ ಗೌರವಕ್ಕೆಳ್ಳು ನೀರ್ ಕೊಟ್ಟು ದಿಕ್ಕುಗೆಟ್ಟೋಡುವುವು, ಬಾಳ್ ಭೂಮಿ ಸರ್ವಮುಂ ವೈರಿಗೆ ತೆರಂಬಿಟ್ಟು (ಶ್ರೀರಾಮಾ. ೬೪೩-೧೪೪). [ ತೆರ$_2$ (<ತೆಱ$^3$) + ಬಿಡು$_1$ ]

ತೆರಕೊಡು 'ತೆಱಕೊಡು' ನೋ.

ತೆರಗಾಲ (ನಾ). ಒಂದು ಪ್ರದೇಶದ ಹೆಸರು (?): ಪೆಮ್ಮಾಡಿಗಾವುಣ್ಡನ ಪೆಣ್ಡತಿ ಚಾವುಣ್ಡಬ್ಬೆ ಇ ದೇಗುಲವ ಮಾಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಮ್ಯಾಆರಿ. ೧೯೩೦, ೧೪-೯ ; ಸು. 870). [ ? ]

ತೆರಟು$_1$ 'ತೆರಂಟು' ನೋ.

ತೆರಟು$_2$ (ಕ್ರಿ). ೧. ದುಂಡಗೆ ಮಾಡಂ; ಸಂತ್ರು; ಸಂರುಳಿ ಮಾಡು. ೨. ಸೇರಿಸು: ಕೂಡಿಸಂ; ಹೊಂದಿಸು: (೩). [ ದೇ.II ತಮಿ. ಮಲ. ತಿರಟ್ಟು ]

ತೆರಟು$_3$ (ನಾ). ಹಿಂದಕ್ಕೆ ಬೀಳುವಿಕೆ; ಹಿಂದಿರುಗುವಿಕೆ; ಕೆಳಗೆ ಬೀಳಂವಿಕೆ (?): ಮಗ್ಗಿಗಳ ಮಿಗೆ ಕೂಡಿ ಕಳೆದರೆ ಸಗ್ಗವಹುದೇ ಮುಂದೆ ಭಾಗಿಸಿಯುಂಗ್ಗಡದ ಘನವರ್ಗಮೂಲವನಱದೊಡೀ ಭವದ ಹಗ್ಗ ಹರಿದೇಱುವನೆ ಮುಕ್ತಿಯ ದುಗ್ಗವನು ಕೇಳಯ್ಯ ತೆರಟನ ಬುಗ್ಗಿಯಲ್ಲದೆ ಬರೆದೊಡಂತ್ಮದೊಳಿಲ್ಲ ಸುವಿವೇಂದ (ಪ್ರಹ್ಲಾಚ. ೭೦೯): "ಕಷ್ಟ" (ಪ್ರಹ್ಲಾಚ. ಕೋಶ). [ ? ]

ತೆರಟುವಾಲ್ (ನಾ). ಕುದಿಸಿ ಗಟ್ಟಿಗೊಳಿಸಿದ ಹಾಲಂ: ಬಟ್ಟವಾಲ್ ತೆರಟು[ಪಾಠಾಂ. ಡು]ವಾಲ್ ಚಿಲುಪಾಲುವೆಸರನದಕಟ್ಟು ಹಸಮಾಡು ವುದು (ಸೂಪಶಾ. ೨-೩). [ ←ತಮಿ. ತಿರಟ್ಟುಪ್ಪಾಲ್ ]

ತೆರಣಿ$_1$ 'ತೆರಳಿ' ನೋ.

ತೆರಣಿ$_2$ 'ತೆರಳ್ಕೆ$_2$' ನೋ.

ತೆರಣಿ$_3$ (ನಾ). ಒಂದು ಬಗೆಯ ಸಸ್ಯ: ಹತ್ತರಾಣಿಕೆ, ನಲ್ಲ, ಹೆದ್ದರಣಿ, ಬಿಳಚಿ, ತೆರಣಿ, ಕಕೋರ್ಲ (ಮೃಙಿ. ೬೩-೧೨೬೯). [ ? ]

ತೆರಣಿಗಟ್ಟು (ಕ್ರಿ). ಒಟ್ಟುಗೂಡಿಸಿ ಕಟ್ಟು; ಉಂಡೆಗಟ್ಟು: ಕಂಚಿನ ಕರಡಗೆಯೊಳಗೆ ಕಂಬಿಯು ತೆರಣಿಗಟ್ಟಿ ನಿಂತಾಳು (ಅವಚಂ. ೩೯೭-೧೩೦೦). [ ತೆರಣಿ$_2$ (< ತೆರಳ್$_2$) + ಕಟ್ಟು$_1$ ]

ತೆರಣೆ 'ತೆರಳಿ' ನೋ.

ತೆರತವಳಿ (ನಾ). ಒಂದು ಬಗೆಯ ಸೀರೆ: ಕುಂಬಳಗಂಟ ತೆರತ [ಪಾಠಾಂ. ಥ] ವಳಿ ತೆಳುಗಾವಿಯುಂ ಬಿಳಿದಿನ ಸೀರೆ ಬರಹ ನಿಂಬೆಯ ಕಾಯ ಪೊಪ್ಪಳಿ ಕರ್ಕವಾಡಗಳೆಂಬ ಸೀರೆಗಳೊಪ್ಪೆ ಮೆಱೆಯೆ (ಅಮುಸಾಂ. ೪-೦೪). [ ? + ಪಳಿ$_5$ (< ಪಟ್ಟಿ$_6$) ]

ತೆರಪಿಚು (ಕ್ರಿ). ತೆರವುಮಾಡಂ (?): [ ಕೊ ] ಡಕುಣಿಯ ಸ್ಥಳದ ಸೇನ ಬೋವನೂ ಕರಸಿ ಆತನ ಮಹಿಪ್ರಮಾಣಿನಲೂ ನೇಮಿಚಂದ್ರದೇವರೂ ಮಾಡಿಕೊಂಡ ಬಾಳ ತೆರಪಿಚಿ ಪಾಲಿಸಿದ ವಿವರ (ಕಇ. III, ೧೧-೧೪; 1542). [ ತೆರಪು (<ತೆಱಪು) + -ಚು$_1$ ]

ತೆರಪು 'ತೆಱಪು' ನೋ.

ತೆರಪುಕೊಡು 'ತೆಱಪುಗೊಡು' ನೋ.

ತೆರಪುಗಾಣಿಸು 'ತೆಱಪುಗಾಣಿಸಂ' ನೋ.

ತೆರಪುಗೆಯ್ (ಕ್ರಿ). ಹೋಗಲಾಡಿಸಂ; ಕಳೆ; ನಿವಾರಿಸಂ: ಭಾಸ್ಕರ ಬಾಣಮುಂ ತೆಗೆದು ಪೂಡೆಚ್ಚು ಖಳನ ಕೃತತಿಮಿರಮುಂ ತೆರಪುಗೆಯ್ಯೆ ಹರಿದುದು ಕತ್ತಲೆಯು (ನವಮೋ. ೩೨-೨೦). [ ತೆರಪು (< ತೆಱಪು ) + ಕೆಯ್$_1$ ]

ತೆರಪುಗೊಡು 'ತೆಱಪುಗೊಡಂ' ನೋ.

ತೆರಪುಮೊಳೆ (ನಾ). ಅಕ್ಷರದ ಮೊಳೆಗಳನ್ನು ಜೋಡಿಸಂವಾಗ ಜಿಡಂವಿ ನಲ್ಲಿ ಸೇರಿಸಂವ ತಗ್ಗಿ ಮೊಳೆ: ಸೂಚೀ ಚಿಹ್ನೆಗಳು . . . ತೆರಪು ಮೊಳೆ ಗಳು . . . ಮತ್ತು ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೧೯). [ ತೆರಪು ( <ತೆಱಪು ) + ಮೊಳೆ$_2$ ]

ತೆರವು$_1$ 'ತೆಱವು$_1$' ನೋ.

ತೆರವು$_2$ 'ತೆಱವು$_2$' ನೋ.

ತೆರವೆ 'ತೆಱವೆ' ನೋ.

ತೆರಸ 'ತೇರಸ' ನೋ.

ತೆರಸಿ 'ತೇರಸಿ' ನೋ.

**ತೆರಸು** (ನಾ). ತೆರೆಯುವಿಕೆ ; ವಿಕಾಸ : ಕಣ್ದೆರೆಯ, ನಿನ್ನ ಕಣ್ಣಿಂದುವಿನ ದೆರಸಂ ಮರಸದೆನ್ನಲಿ ಎನ್ನ ! (ಗೀವಿಂ. ೫೦-೧೩).

[ ತೆರೆ$_1$ (< ತೆಱೆ$^3{}_1$) + – ಸು$_2$ ]

**ತೆರಹು$_1$** (ಕ್ರಿ). ಬಿಚ್ಚು ; ತೆರೆ : ಸರಸಿಗೆ ತೆರಹಿ ತೋರುವದು ಜಗವು ಹೃದಯವ (ಉಯ್ಯಾಲೆ. ೨೨-೭). [ ತೆರೆ$_1$ ( <ತೆಱೆ$^3{}_1$ ) + – ಹು$_1$ ]

**ತೆರಹು$_2$** 'ತೆಱಪು' ನೋ.

**ತೆರಹು$_3$** (ನಾ). ಕಾಣಿಕೆ ; ಕಪ್ಪ ; ತೆರಿಗೆ : ತೆರಹುಗಳ ತತ್ತು ವರಹದ ಭಂಡಾರ ಅಂತು (ಎಕ. IX(S), ಕಾನಕಾ. ೩೩-೬ : 17ನೆಯ ಶತ).

[ ತೆರ$_2$ (<ತೆಱ$^3{}_3$) + – ಹು$_2$ ]

**ತೆರಹುಗುಡು** 'ತೆಱಪುಗೊಡು' ನೋ.

**ತೆರಳ್, ತೆರಳು** (ಕ್ರಿ). ೧. ಹೋಗು ; ಚಲಿಸು ; ಸರಿ ; ನಡೆ : ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೧-೭೧) ; ಎಸೆವ ನಭಸ್ಸರೋವರದೊಳುಣ್ಮೆ ಕೆಲಕ್ಕೆ ತೆರಳ್ದ ನೀಲಿಕಾಪ್ರಸರವೊ . . . ಎಂದೆನಿಸಿತಂದು ಪುರಂದರಚಾಪವಿಭ್ರಮಂ (ಚಂದ್ರಪು. ೪-೫೦) : ಮಹಾಸಂಗರದೊಳೊಬ್ಬರನೊಬ್ಬರೊಪ್ಪಿಸಿ ತೆರಳಲಾಗದು (ಕುವ್ಯಾದ್ರೋ. ೨-೭) ; ಹಸಿವು ನೀರಡಿಕೆ ಸಂತಾಪವ ನೆಱೆ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೬೦): ತೆರಳು, ತೆರಳುವೊಡಿನಿಯ ; ಪಥದಲಿ ನಿನಗೆ ಮಂಗಳವೊದಗಲಿ (ಭಾರವಿಾ. ೨೯೧). ೨. ಹರಿ ; ಪ್ರವಹಿಸು : ಕಡಲ್ ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೧) ; ಕುರವದಿಂ ಕೂಡೆ ನೆತ್ತರ್ತೆರಳ್ದುಣ್ಮುವಿನಂ ಮೆಯ್ಯೆಲ್ಲಮಂ ಜರ್ಜರಿಸಿ(ಸುಕುಮಾ. ೭-೩೫); ನೆಲನನಿತುಂ ತೆರಳ್ದಡಸಿ ಬಿಟ್ಟೊಣೆಯಿಂ ತವದೊಂದ ಮಾಱ್ಕೆಯಿಂ ನೆಲೆನೆಲೆವೆರ್ಚಿ ಮುಂಪರಿವ ಪೆರ್ದೊಱೆಗಳ್ (ಕಾವ್ಯಸಾ. ೪೬೩). ೩. ವ್ಯಾಪಿಸು; ಆವರಿಸು : ದಿನಕರಕರನಿಕರಂಗಳ್ ಘನವಿವರಪ್ರಸರಮಾಗಿಯುಂ ತಮ್ಮಂ ಕಂಡನಿತಱೊಳೆ ತೆರಳ್ದಿನ್ನಾ ಮನೋಗತಧ್ವಾಂತಬಂಧಮಳಱಿತ್ತೆಲ್ಲಂ (ಕವಿರಾ ೨-೬೭); ನಟ್ಟ ಕೋಲ ಬಱಿವಿಡಿದೆತ್ತಂ ಸುರಿದುವವಂದಿರ ಮುಳಿಸಿನ ತೆರಳ್ದ ದಳ್ಳುರಿಯನಿಱಿಸಿ ನವರುಧಿರಂಗಳ್ (ಪಂಪಭಾ. ೧೨-೧೪೮). ೪. ಎಬ್ಬಿಸು ; ಹೊಮ್ಮಿಸು : ತೆರಳ್ದು ಸುರಭೂರುಹಪ್ರಸವಧೂಳಿಯಂ . . . ನಯದಿನಾಡಿಸಿತ್ತಾಗಳಪ್ಸರಃಪ್ರಕರದೊಳ್ಗುರುಳ್ಗಳನದೊಂದು ಮಂದಾನಿಳಂ (ಆದಿಪು. ೭-೬೬). ೫. ಮೇಲೇಳು; ಚಿಮ್ಮು; ನೆಗೆ: ಕರಿಕರಶೀಕರಮದಜಳತುರಂಗಲಾಲಾಂಬುಸೇಕದಿಂದಱಿದುಱಿದಿರ್ದ ರಜಂ ನರೇಂದ್ರಚಾಮರಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ (ಆದಿಪು. ೧೧-೩೮). ೬. ಒಟ್ಟುಗೂಡು ; ಒಂದಾಗು : ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರಂತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್ಸೊಡರಿರ್ಪಂತಿರೆ ಚಕ್ರರತ್ನಮದಱೊಳ್ನಿರ್ಬಾಧಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಭೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ (ಆದಿಪು. ೧೩-೬೦); ತಳರ್ದು ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ ತೆರಳ್ದ ತುಪ್ಪುಳಿನೊನೆದಂಟ ಚಂಚುಪುಟದಿಂ . . . ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು (ಜಗವಿ. ೧೪-೧೦). ೭. ಅಲುಗು ; ಅಲ್ಲಾಡು : ಮಲಯಾನಿಲನೂದೆ ತೆರಳ್ವ ಚೂತಪಲ್ಲವದ ತೆರಳ್ಕೆ (ಪಂಪಭಾ. ೨-೧೪). ೮. ಹಿಮ್ಮೆಟ್ಟು ; ಹಿಂಜರಿ ; ಹೆದರು : ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಿಲೆ ತೆರಳ್ದು ತೂಳ್ದೊಡೆ (ಆದಿಪು. ೧೩-೫೦) : ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ (ಕಾದಂಬ. ೨೨೫) ; ನಿದಾಘದ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯ ಪೋಲ್ ಕಿಸುಸಂಜೆ ತೆರಳ್ದಿನಂ ಪಟಂಗಾಸಿನ ಪೊನ್ನಗಂಟೆಯವೊಲೊಪ್ಪಿದುದ್ಗತಭಾನುಮಂಡಲಂ (ಅಜಿಪು. ೬-೭೦) ; ಕರಿ ಕೆಡೆಯೆ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುವ್ಯಾಕ. ೧೫-೨೮). ೯. ಮುಂದಂಟು ; ಸಂಕ್ಕುಗಟ್ಟು : ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕಸೋ ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಳೆಜೊಳ್ಳೆತನಮಂ ಮೇಣಾಕ್ಕಣನೋ (ಆದಿಪು. ೨-೪೫) ; ಭೀಮಸೇನನ ಗದಾಘಾತದೊಳೂರುಭಂಗಮುಂ ಪದಘಾತದೊಳ್ ಮಕುಟಭಂಗಮುಮಾಗೆ ಸುರುಳ್ದು ತೆರಳ್ದು ಸುಯೊಧನನಿರೆ (ಗದಾಯು. ೯-೧೬ ವ). **ತೆರಳು** : ೧. ಹೈಮವತಿ ಕೈಲಾಸಗಿರಿಗೆ ತೆರಳಿದಳು (ಸಿದ್ಧರಾ. ೧-೬೦) ; ಸರ್ವಾಭಿಸಾರ, ಸರ್ವೌಘ, ಸರ್ವಸನ್ನಹನ–ಎಲ್ಲಾ ಸೇನೆಯು ತೆರಳುವುದು (ನಾಚಿರಾ. ೩): ತೆರಳಿ ಮುಂದಕೆ ಹೋಗಬಾರದು ಮರಳಿ ಹಿಂದಕೆ ಬರಲು ಬಾರದು (ಬಸಪು. ೪೦-೮) ; ಧನಂಜಯ ತೆರಳಿದನು ಪಾಳೆಯದ ಪಥವಿಡಿದು (ಕುವ್ಯಾಕ. ೦೪-೩೨) ; ಸರಸಿಜಗಂಧಿಯ ದಿವ್ಯಾಂಗ ಲಾವಣ್ಯಶರಧಿಯೊಳ್ನೆರವಿಗರಕ್ಷಿ ವರ ಮೀನುಗಳು ನೆಱೆ ಪೊರಳುತ ತೆರಳುತ ಮರಳಿ ಮುಳುಗುತೊಪ್ಪಿದುವು (ಕಂನವಿ. ೯-೯೫). ೨. ಕಣ್ಗಳಿಂ ಶೋಕಜಲಬಿಂದು ತೆರಳೆ . . . ಗದುಗದಿಸಿ ಬಿಕ್ಕುತೆ ಬಿದ್ದು (ಬಸರ. ೫-೧೯). ೮. ಅರಸನಂ ಕೆಡಿಸಿ ಹುಸಿ ತೋಱಿಂದಡೆನಗವಂ ತೆರಳುವವನೇ (ಹಚಕಾ. ೯-೧೭) ; ರವಿಯು ಕೈ ಕತ್ತಲೆಯ ಹೊರಳಿಯು ತಿವಿಗುಳಿಗೆ ತೆರಳುವುದೆ (ಕುವ್ಯಾಕ. ೧೦-೪೬). ೯. ಒಳಗೆ ಮಂಚದ ಮೇಲೆ ನಡುಗುವ ತಲೆಯ ತೆರಳಿದ ಮೈಯ . . . ಚಲಿತ ವಚನದ ವೃದ್ಧರನು ತೋಱಿದನು (ಕುವ್ಯಾಅ. ೧೫-೧೦). ೧೦. ಅಳಿಸಿ ಹೋಗು; ಇಲ್ಲವಾಗು: ಪೊರೆದ ದುಕೂಲವೊಂದಿನಿಸು ಮಾಸಿದೆ ಭಾಳದೊಳಿಟ್ಟ ಚಂದನಂ ತೆರಳಿದೆ (ದಶಕು. ೧೧-೨೧). ೧೧. ತೆಗೆ; ಕಳೆ; ಬಿಡಿಸು: ಹಿರಿದು ಹೊರೆಗಳನೊಂದನೊಂದಂ ತೆರಳಿ ಸುಲಿಯಲು ಬಾಳೆಯದು ತಾನೊರೆಯುಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸಪು. ೩೫-೩೮).

[ ದೇ. ॥ ತಮಿ. ತಿರಳ್ ; ತೆಲು. ತೆರಲು, ತೆರ್ಲು ]

**ತೆರಳಿ, ತಿರುಳಿ$_2$, ತೆರಣಿ$_1$, ತೆರಣೆ, ತೆರಳೆ$_1$** (ನಾ). ೧. ಮಣ್ಣು, ಮಲ ಮೊದಲಾದುವುಗಳನ್ನು ಉಂಡೆಗಟ್ಟಿ ಸಾಗಿಸುವ ಒಂದು ಬಗೆಯ ಹುಳು : ಸ್ಪರ್ಶ ರಸ ಗಂಧ ರೂಪುಗಳೆಂಬೀ ನಾಲ್ಕುಮನಱಿವ . . . ಮಿಡುತೆ ತೆರಳಿ ಕೊಟ್ಟಾರಿಗಂ ಯೆಡೆವುಱುಯೆಂದಿತ್ಯೇವಮಾದಿಗಳೊಳಂ (ಪಸಾರ. ೪೯). ೨. ತನ್ನ ಶ್ಲೇಷ್ಮದಿಂದ ತನ್ನ ಸುತ್ತಲೂ ಎಳೆಯನ್ನು ನೆಯ್ದು ಸುತ್ತಿಕೊಳ್ಳುವ ಒಂದು ಬಗೆಯ ಹುಳು ; ರೇಷ್ಮೆಹುಳು: ನಿಷ್ಕಾರಣಂ ತೆರಳಿಯ ಪುಱುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು (ಧರ್ಮಾಮೃ. ೧೪-೮೪); ತೆರಳಿ[ಪಾಠಾಂ. ತೆರಣೆ, ತೋರಣೆ]ಯ ಪುಱುವಂ ತನಗೆ ಮನೆ ಮಾಱ್ಪೆನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಱಮಡಲಱಿಯದೆ ಸಾವಂತೆ (ಜೀವಸಂ. ೧೪೦-೧೦ ವ) ; ಹಲವು ಮಾಯಾಮೋಹಪಾಶದ ಬಲೆಯೊಳಗೆ ನೆಱೆ ಸಿಲುಕಿ ತೆರಳಿಯ ಹುಳುವಿನಂತೊಳಗಿರ್ದು ತಾಪತ್ರಯದ ದುಃಖದಲಿ (ನಿಭಾಗ. ೭-೬-೧೩). **ತಿರುಳಿ$_2$** : ೨. ಹಲವು ಮಾಯಾಮೋಹಪಾಶದ ಬಲೆಯೊಳಗೆ ತನು ಸಿಲುಕಿ ತಿರುಳಿಯ ಹುಳುವಿನಂತಳವಳಿದು ತಾಪತ್ರಯದ ಬೇಗೆಯಲಿ (ನಿಭಾಗ. ೩-೧೪-೪). **ತೆರಣಿ$_1$** : ೨. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭). **ತೆರಣೆ** : ೨. ಮೇಲಿನ 'ತೆರಳಿ' ಉಲ್ಲೇಖದ 'ಜೀವಸಂ' ಪ್ರಯೋಗದ ಪಾಠಾಂತರವನ್ನು ನೋಡಿ. **ತೆರಳೆ$_1$** : ೨. ಕೌಶೇಯ–ತೆರಳೆಯ ಹುಱು ಮುಕುಲಾಕಾರದಿಂದ ಮಾಡಿದುದ ಬಿಡಿಸಿ ನೆಯ್ದ ಸೀರೆ (ನಾಚಿರಾ. ೩) ; ಪರಿಪರಿಯ ಸಂಸಾರವಿಷಯದಿ ಹಿರಿದು ಬಿಗಿವಡೆದಿರ್ಪ ಮನುಜಗೆ ದೊರಕುವುದೆ ಪರತತ್ತ್ವ ತೆರಳೆಯ ಹುಳುವಿನಂತಿಹಗೆ (ಅಮೃತ. ೧-೩೭). [ <ತೆರಳ್ ]

**ತೆರಳಿಕೆ** 'ತೆರಳ್ಕೆ' ನೋ.

**ತೆರಳಿಚು** 'ತೆರಳ್ಚು' ನೋ.

**ತೆರಳಿಸು** (ಕ್ರಿ). ೧. ಹೋಗುವಂತೆ ಮಾಡಂ; ಹೊರಡಿಸು; ಕಳುಹಿಸು: ಬೆಸವೇಳ್ದು ತೆರಳಿಸಿದನನುಜನನು (ತೊರರಾ. ೪-೫-೨೭) ; ಆತನನಲ್ಲಿಂದ ತೆರಳಿಸಿ ಬಿಟ್ಟಳು (ಕಂಸವಿ. ೬-೧೬೪). ೨. ಹೊಗಿಸು ; ಪ್ರವೇಶ ಮಾಡಿಸು : ಇಂತು ಸಿಂಗರವಾದ ಸ್ವಯಂವರಮಂಟಪಕಂ ತೆರಳಿಸಲು ಸುಮತಿಯ ಮಂತ್ರಣದಿಂದ ಸಿಂಗರಿಸಿದರಾ ದೇವಕಾಂತೆಯು ಶೃಂಗಾರ ದಾತೆ (ಶಾಂತೀಶ. ೩-೬೫). ೩. ಕೆದರು ; ಚೆಲ್ಲಾಪಿಲ್ಲಿ ಮಾಡು : ತೆರಳಿಸಿತು ಬಿಱುಗಾಳಿ ತಾರೆಯ ನೆರವಿಯನು (ಸಾಳ್ವಭಾ. ೧೬-೩೪).

[ ತೆರಳ್ + – ಇಸು₃ ]

**ತೆರಳು** 'ತೆರಳ್' ನೋ.

**ತೆರಳ್ಳಿ₁** 'ತೆರಳಿ' ನೋ.

**ತೆರಳ್ಳಿ₂, ತೆರಣ್ಣಿ₂** (ನಾ). ತುತ್ತು; ಮುದ್ದೆ ; ಉಂಡೆ : ತೆರಳೆ ಕೈಯೊಳಗಿದೆ ಬಾಯೆಮ್ಮ ತಂದೆ ಕುಳ್ಳಿರುಯೆಂದು ಕರೆದರಚ್ಯುತನಾ (ಕೃಷ್ಣಗೋ. ೨-೮೫) ; ಭಕ್ತನು ಒಂದು ಹೊತ್ತು ಅಡಿಗೆ ಮಾಡಿಕೊಟ್ಟ ಊಟದ ಕೆರಳೆಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು (ಸಣ್ಣಕ. VI, ೨೬). ತೆರಣ್ಣಿ₂ : 'ತೆರಣಿಗಟ್ಟು' ಪರಾ.

[ ದೇ.॥ ತಮಿ. ತಿರಳ್ಳೈ, ತಿರಣ್ಣೈ ; ತೆಲು. ತೆರಲ ]

**ತೆರಳ್ಕೆ, ತೆರಳಿಕೆ** (ನಾ). ೧. ಚಲನೆ ; ಅಲುಗಾಟ ; ಸ್ಪಂದನ : ಮಲಯಾನಿಲನೂದೆ ತೆರಳ್ವ ಚೂತಪಲ್ಲವದ ತೆರಳ್ಕೆ ತದ್ವನವಿಳಾಸಿನಿಯುಟ್ಟ ದುಕೂಲದೊಂದು ಪಲ್ಲವದ ತೆರಳ್ಕೆಯಂತೆಸೆಯೆ (ಪಂಪಭಾ. ೨-೧೪); ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೊಲಗಿಸೆ (ಚಂದ್ರಪ್ರ. ೧-೯೪) ; ಚರಣನ್ಯಾಸದ ತುಱುಗಲ ತೆರಳ್ಕೆಯಭಿನಯದೊಳಭಿನವಂಬೆತ್ತು ಮನೋಹರವಾಗೆ (ಮಹಾನೀ. ೯-೧೧) ; ಉರಿಯುಂ ಮೇಣ್ ಕಣ್ಗಳ ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಳಿಱುತ್ತಿರೆ (ಅಶ್ವಶಾ. ೪-೭೨). ೨. ಓಡುವಿಕೆ ; ಓಟ : ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳಂ ಪಾಡಱಿದಿರ್ಪಿನಂ . . . ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಬ್ಬಿಗ. ೨೦೫). ೩. ವ್ಯಾಪಿಸುವಿಕೆ ; ಹರಡುವಿಕೆ : ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದಂಬುದನೆನೆ ಪೆರ್ಮೆಯುಂ ತಳೆದನೋ ನೃಪರೊಳು ನೃಪಶೈಲಶಾನ್ತರಂ (ಎಕ. VIII, ಸಾಗರ. ೧೫೯-೧೩ ; 1159). ೪. ಹೆಚ್ಚಳ ; ಆಧಿಕ್ಯ ; ಅತಿಶಯ : ಸೋರ್ವ ಕಂಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ (ಆದಿಪು. ೯-೭೬); ಸಿರಿಯ ತೆರಳ್ಕೆ ಜವ್ವನದ ಪೆರ್ಚುಗೆ ರೂಪವಿಳಾಸದೇಳ್ಗೆ . . . ಮೂರ್ತಿವೆತ್ತುದು (ವರ್ಧಪು. ೨-೩೪). ೫. ಸಮೂಹ ; ಗುಂಪು ; ನೆರವಿ : "ತಂಡಂ ತೆರಳ್ಕೆ . . . ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ" (ಕವಿಕಂ. ೧೧೭) ; ಈಳೆಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕುತ್ತುಱುಂ . . . ಎನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೧೧-೭೪ ವ) ; ಸುವಿಲಾಸದಿಂದಪ್ಪವಸುಗಳ ತೆರಳ್ಕೆ ಘನಜವದಿಂದೆ ಸಪ್ತಋಷಿಗಳ ನೆರವಿ . . . ಓಲಗಕೆ ಬಂದುದು (ಜಿಬಪು. ೨-೧೭) ; ಸುಯ್ಸಿಟ್ಟ ಪೊರೆಗಳಂ ಬಿಟ್ಟು ಪೈಗರೆದು . . . ಪೆಣ್ ತೆರಳ್ಕೆಯು ತೆರಳೆ (ಕಾಲೂರ. ೧೩೧-೨೭೯). ೬. ಮಡಿಕೆ ; ನಿರಿಗೆ. 'ತೆರಳ್ಕೆವೆಱು' ಪರಾ. ೭. ಠೀವಿ ; ಒಯ್ಯಾರ; ಬೆಡಗು: ಸ್ಮರಶರವುಂ ತದೀಯಮೃದುಗೇಯಮುಮುರ್ಚಿದ ಪುಣ್ಣನೊಕ್ಕ ಸೆತ್ತರನಱಸಲ್ಕೆವೇಡ . . . ಬರ್ಬರೆಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಳ್ಕೆಯುಂ (ಶಾಂತಿಪು. ೨-೨೨) ; ಮಾತಿನ ತೆರಳ್ಕೆಗಳಿಂ ರಸಗೇಯದಂತಿರೀ ಕೃತಿ ಪೊಸದೇಸಿಯಿಂದಸೆದು ಸೋಲಿಪುದಚ್ಚರಿಯೇ ರಸಜ್ಞರಂ (ಲೀಲಾವ. ೪-೭೩) ; ಧರೆಗೆಸೆದತ್ತು ತಾರಕನಾಜ್ಞೆ ತಾರಕಾಸುರನ ತೆರಳ್ಕೆ ತಾರಕನ ಠೀವೃತೆ ತಾರಕನುರ್ಬು (ಗಿರಿಕ. ೬-೧೧) ; ವಳಿಯ ತೆರಳ್ಕೆಯುಂ ವಹಣಿ ಯೊಟ್ಟಜೆಯುಂ ಪಸರಂಗಳಿಂಪನುಜ್ಜಳಿಸುವ ಡಾಳಮಂ . . . ಅಱಿವನ್ನರಾರ್ (ಅನಂಪು. ೪-೮೪). ತೆರಳಿಕೆ : ೫. ನೆರದರಬಲೆಯ ರಂಗವಟ್ಟದ ಪರಿಮಳದ ಮುತ್ತಿಗೆಯ ತುಂಬಿಯ ತೆರಳಿಕೆಯ ಕತ್ತಲೆಯ ಕೆದಱುವ ಕಣ್ಣ ಬೆಳಗುಗಳ (ಕುಮಾ್ರಾಅ. ೮-೬) : ತೇರುಗಳ ತೇಜಿಗಳ ಬಱುವುದವಾರಣಂಗಳ ತೆರಳಿಕೆಯ ರಣಚೋರಗಂಡಿಯ . . . ವೀರವಱಿಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೧೫) : ಶಿವಿರಿದಶನದ್ಯುತಿಯ ಬೆಳ್ನಗೆಯ ಸೂಸಲಿನೆ ಸಖರುಚಿಯ ತೆರಳಿಕೆಯ ಹೊರಳಿಯೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಕ್ರಿಮಿಥಾ. ೩೦-೧೧). ೮. ತೆರಳಿಸುವಿಕೆ ; ಸಾಗಿಸುವಿಕೆ : ಪುರವರವನಲ್ಲಿಂದ ಮೌಲ್ಯದ ತೆರಳಿಕೆಯ ಮಾಡಿದನು ಮೂಡಲು ಹರಿದು ಮುರಿದು ಸಮುದ್ರಸೇನನ ಸರ್ವಗವತೆಯುಲಿ ತೆರಳಿಯಲ್ಲಿಂದಿಂದ್ರಸೇನನನೊರೆಸಿ ಭಂಡಾರವನು ಹೇರಿಸಿ ಮರಳಿ ವಂಗನನಪ್ಪಳಿಸಿದನು (ಕುಮಾ್ರಸ. ೪-೯). ೯. ಆಕ್ರಮಣ ; ಮುನ್ನುಗ್ಗುವಿಕೆ ; ರಭಸ : ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು . . . ಹಂದಿ ಮರಳಿ ಕಾನನಕೆಯ್ದಿತು (ಹಡಕಾ. ೬-೩೦) ; ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಃವಂಗೆಂದನವನೀಶ (ಕುಮಾ್ರಕೃ್ರ. ೫-೧೭).

[ ತೆರಳ್ + – ಕೆ ]

**ತೆರಳ್ಕೆಯಿಡು** (ಕ್ರಿ). ಅಧಿಕಗೊಳಿಸು ; ಒತ್ತುಗೊಳಿಸು : ಇತ್ತಲಿಳ್ದು ಮಳೆಯ ರಾಜನುತ್ಸವಕ್ಕೆ ಹೆಚ್ಚುಗೊಟ್ಟು ಚಿತ್ರದೊಳ್ಸಮಸ್ತಸಂತಸಂಗಳಂ ತೆರಳ್ಕೆಯಿಟ್ಟು ರಂಗಮಂಟಪಕ್ಕೆ ಬಂದು (ಮಕರ.ಹ. ೩೩೧-೧೧).

[ ತೆರಳ್ಕೆ + ಇಡು₁ ]

**ತೆರಳ್ಕೆವೆಱು** (ಕ್ರಿ). ಪದರವಾಗು ; ನಿರಿಗೆಯಾಗು : ಕರೆವೆರಸಿದ ಪೊಸಮುಗುಲವ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರಪರಿಸ್ಫುರಿತದೊಳೆ . . . ಜನಮನೇಂ ಮನಂಗೊಳಿಸಿದುದೋ (ಆದಿಪು. ೪-೩೬).

[ ತೆರಳ್ಕೆ + ಪೆಱು₁ ]

**ತೆರಳ್ಚು, ತೆರಳಿಚು** (ಕ್ರಿ). ೧. ಚಲಿಸುವಂತೆ ಮಾಡು; ಚಲನಗೊಳಿಸು ; ಸರಿಸು ; ತಳ್ಳು: "ತೆರಳ್ಚು–ಚಲನೇ, ಚಯನೇ ಚ" (ಶಮಧಾ) ; ಅಂತೀತನ ಕಟಕಕ್ಕೆ ನಿತ್ಯಕ್ಷಯಮವ್ಯಯಪುತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೧೩-೫೮ ವ) ; ಉಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯುಂ ತೆರಳ್ಚಿ . . . ಸಾಯಂತನಸಮಯ ಸಮೀರಣಂ ಸೌಖ್ಯಸಾರ ಸರ್ವಸ್ವಮೆನಿಸಿದಾಗಳ್ (ಚಂದ್ರಪ್ರ. ೮-೪ ವ) ; ವಾಯುವು (ನನ್ನ) ಹಟ್ಟಿಯ ಬಾಗಿಲ ರಜಗಳಂ ತೆರಳ್ಚುವನು (ಶುಕಸ. ೦೯೪). ೨. ಅಲುಗಾಡಿಸು ; ಕಲಕು ; ಕ್ಷೋಭೆಗೊಳಿಸು ; ಕದಲಿಸು : ಮಿಡಿಯಂ ತೆರಳ್ಚಿ ತೆಗೆದೋವದೆ ಕಾಯದೆ ಕೂರಕರ್ಮದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು (ಆದಿಪು. ೧೧-೧೩೨) ; ಅನಂ ಕುಲಗಿರಿಗಳ ನಪ್ಪೊಡೆಂತುಂ ತೆರಳ್ಚಲಾಱಿನದಱಿಂದೆನಗಂ ನಗಂಗಳ್ ಪಿರಿಯುವೆನೆ (ಪಂಚತಂ. ೨೫೯-೬) : ಸಾಗರಮಂ ಕೂಡೆ ತೆರಳ್ಚಿದಂ ತೊಱಸಿದಂ ತುಳ್ಕಾಡಿದಂ (ಜಗನಿ. ೭-೧೪) : ತೆರಳ್ಚಿ ತರಂಗನೀವಿಯುಂ...ಭುಜಂಗನವೋಲ್ ಸುಳಿಗುಂ ಸಮೀರಣಂ (ಶಬಶಂ. ೨-೭೦). ೩. ಅಲುಗಾಡು ; ಕದಲು : ಇಡುಮೊಲನಂ ತೆರಳ್ಚದಿಸು ಪುಲ್ಲೆಗಳಂ (ಗಿರಿಕ. ೧-೮೩). ೪. ಕಳುಹಿಸು ; ಸಾಗಿಸು: ಗೋವ್ರಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ (ಪಂಪಭಾ. ೬-೩೩ ವ). ೫. ಸಂತೈಸು ; ತಿರುಗಿಸು : ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರ ಮಯ್ಯೊಳಕ್ಕ (ಆದಿಪು. ೧೧-೧೦೦ ಅಡಿಟಿ.) ; ಇರದೊಯ್ಯುದು ತನ್ನಿಚ್ಛೆಗೆ ವರಯುವ್ವನದಂದು ಪುರುಷನಂ ಪ್ರಕೃತಿರಜಂಬೊರೆದು ತಿರುಪ್ವತ್ತೆ ಸುಟ್ಟುಱಿ ತೆರಳ್ಚಿ ತಱಿಗೆಲೆಯನುಯ್ವ ತೆಱದಿಂದೆತ್ತಂ (ಕಾದಂಪೂ. ೫೩೫) ; ಕಿಂದಳದಿಂ ಸಣ್ಣಿಗೆಯಂ ತೆರಳ್ಚಿ ತಿರುಪುತ್ತುಂ (ಕುಸುಮಾ. ೨-೧೦೭). ೬. ಒಂದ

೨. ಅಳಿಸು ; ತೆಗೆದುಹಾಕು : ಅಜ ಬರೆದ ಬರೆಹವನು ತೊಳೆಯಬಲ್ಲನೆ ಬಾಣ (ಪುರಂದ. ೨-೪೪-೩). ೩. ನಿವಾರಿಸು ; ಪರಿಹರಿಸು : ಹಿಂದಿನಪ ಮಾನಗಳ ತೊಳೆಯಿರೇಳಿ (ವಿಜಗೀ. ೪೩-೬) ; ಈ ಪುರೋಹಿತನವೃತ್ತಾಂತ ದಿಂದ ಬಂದಿರುವ ಕಳಂಕವನ್ನು ತೊಳೆದುಕೊಂಡಂತಾಗುತ್ತದೆ (ವಚಭಾ. ೬೫). ೪. ಇಲ್ಲವಾಗು : ತನಗಿಂದು ತೊತ್ತಿನ ಕೆಲಸ ಕೊಂಡಿಹುದ ನಿಲಿಸುವೊಡೆ ಕದ್ರುವಿಗೆ ಕೊಟ್ಟರೆಯೊಲಿದು ಸುಧೆಯನು ದಾಸಿತನವದು ತೊಳೆದುಹೋಹುದು (ಸಂಭಪ. ೫-೩೪). ೫. ಹಾಳುಮಾಡು ; ನಾಶ ಮಾಡು: 'ನೀ ಬಂದು ಈ ಮನೆ ತೊಳೆದೆ' ಎಂದು ಅವಳು ದಿನಾ ಸೊಸೆ ಯನ್ನು ಛೇಡಿಸ ಹತ್ತಿದಳು (ಹೊಸಕ್ಷಿ. ೨೧). 'ತೊಡ₁' ಪರಾ.

ತೊಳೆದ ಕೆಂಡ = ಆರಿಸಿದ ಕೆಂಡ ; ಇದ್ದಲು : ಅವನ ಕ್ರೂರವಾದ ಕಣ್ಣು, ತೊಳೆದ ಕೆಂಡದಂಥ ವೈಬಣ್ಣ ನೋಡುವವರಿಗೆ ಹೆದರಿಕೆಯನ್ನು ಹುಟ್ಟಿಸುವಂತಿತ್ತು (ರೂಢಿ). ತೊಳೆದ ಮುತ್ತು = ಶುಭ್ರಗೊಳಿಸಿದ ಮೌಕ್ತಿಕ ; ಶುದ್ಧವಾದ ಮುತ್ತು : ಆ ಮಗು ತೊಳೆದ ಮುತ್ತಿನಂತೆ ಬಹಳ ಮುದ್ದಾಗಿದೆ (ರೂಢಿ). [ ದೇ. ‖ ತೆಲು. ತೊಲಂಚು ]

ತೊಳೆ₂, ಸೊಳೆ₂, ಸೋಳೆ (ನಾ). ಕಿತ್ತಲೆ, ಹಲಸು ಮುಂತಾದ ಹಣ್ಣು ಗಳ ಹಾಗು ಹತ್ತಿ ಮೊದಲಾದುವುಗಳ ಒಳಗಿನ ಒಂದೊಂದು ಭಾಗ,-ಖಂಡ : "ತೊಳೆ – ಪ್ರಕ್ಷಾಲನೇ, ಫಲತೂಲಾಯಾಂ ಚ" (ಶಮಧಾ) ; ಪಲಸಿನ ತೊಳೆ(ಟೆ)ಗಳನರನೇಟಿಲ ಕೊನೆ ಕರ್ಪೂರಮೆಣ್ಣೆ ಯೆಂಬಿನಿತಿವಱಿಂ ಕಲಸಿ ಕಡುವಿಸಿಲೊಳವನಿರಿಸಲೊಡಂ ದ್ರವಿಯಿಸುಗು ಮಚ್ಚರಸಮಪ್ಪಿನೆಗಂ (ಲೋಕೋಪ. ೮-೩೫) ; ಕಡಲೆಯುಂದಮೊಳು ಹಲಸಿನ ತೊಳೆಯನುತ್ತರಿಸಿ ಹುಡಿಮೆಣಸು ಶುಂಠಿ ಯಾಲಕ್ಕಿಯಂ ಮೊಸರ ಕೆನೆಯೊಡನಿಕ್ಕಿ (ಸೂಪಶಾ. ೫-೩೪) ; ನಾನೊಂದು ತರಲ ಮರುಕಾಂತಾರ ದಲ್ಲಿ ತೊಟ್ಟು ಕಳಚಿದ ಹತ್ತಿಯ ತೊಳೆಯಂತೆ ಇಳಿಯುತ್ತಿದ್ದೆ (ಬಾಣಳ. ೧೯೩) ; ತೊಗಲು ತೊಳೆ ಆದೀತೆ ? (ಗಾದೆ). ಸೊಳೆ₂ : ಆಲೂಗಡ್ಡೆ . . . ಹಲಸಿನಕಾಯಿಯ ಸೊಳೆ ಇತ್ಯಾದಿಗಳನ್ನೂ ತುಂಡುಮಾಡಿ ಈ ರೀತಿ ಕರಿಯಬಹುದು (ಅಡುಸಾ. ೯೧) ; ಬಳಿಕ ಮೂವರೂ ಸೊಳೆಗಳನು ತಿಂದರು (ಈಕಥ. ೧೧೩). ಸೋಳೆ: ರುಚಿ ನೋಡೋಣವೆಂದು ಒಂದೆರಡು ಸೋಳೆ ಬಾಯಿಗೆ ಹಾಕಿಕೊಂಡೆ (ಬಾಳಿಗಿ. ೧೯೯) ; ರಚ್ಚೆ ! ಹುಲ್ಲು ! ಯಾರಿಗದು ಸೋಳೆ ಇಲ್ಲದಿದ್ದರೆ ? (ಮೊಮಗು. ೬೪).
[ ದೇ. ‖ ತಮಿ. ಚುಳೈ; ಮಲ. ಚುಳ; ತೆಲು. ತೊಲ, ತೊನ; ಕುವಿ. ತೋಲ ]

ತೊಳೆ₃ 'ಸೊಳೆ₁' ನೋ.

ತೊಳೆ₄ (ನಾ). ದೋಣಿ ನಡೆಸುವ ಹುಟ್ಟು : ಆಗ ಸಾಲು ಸಾಲಾಗಿ ಜನರನ್ನು ಹಡಗಿನ ಬಾಣೆಗಳಲ್ಲಿ ಕುಳ್ಳಿರಿಸಿ ತೊಳೆ (oar)ಗಳಿಂದ ನೀರನ್ನು ತಳ್ಳಬೇಕಾಯಿತು (ಬಾಲಪ್ರ. II, ೬೪೩) ; ಆಗ ದೋಣಿಯ ತೊಳೆಗಳನ್ನು ಒಚ್ಚಬೇಕಾಗಿಲ್ಲ (ಒಂಟಿದ. ೧೩೬); ನೀನು ಒಂದು ತೊಳೆ ಹಿಡಿ, ನಾನೊಂದು ಹಿಡಿಯುತ್ತೇನೆ (ಜಿದಾಉ. ೦೬೧).

ತೊಳೆಹಾಕು = ಹುಟ್ಟುಹಾಕು : ರಾತ್ರಿ ಒಂದು ಹರದಾರಿ ತೊಳೆ ಹಾಕುವುದು ; ಅನಂತರ ಸ್ವಲ್ಪ ಹೊತ್ತು ತಣ್ಣಗೆ ಕುಳಿತಿರುವುದು (ಒಂಟಿದ. ೧೩೭). [ <ತೊಟಿಸು₁/ತಮಿ. ತುಟುವೈ : ಮಲ. ತುಟ ]

ತೊಳೆತ (ನಾ). ಶುದ್ಧಮಾಡುವಿಕೆ ; ತೊಳೆಯುವುದು : " ಕ್ಷಾಲನಂ = ತೊಳೆತಂ " (ಕಾಶಕ್ಕ. ೨೬೧). [ ತೊಳೆ₁ + – ತ₂ ]

ತೊಳೆಯಿಸು (ಕ್ರಿ). ಶುದ್ಧ ಮಾಡಿಸು ; ಸ್ವಚ್ಛ ಮಾಡಿಸು : ಭಕ್ತರ ಕೂಡ ಬಂದವನೀಗ ಕಾಲಂ ನೀಡಿ ತೊಳೆಯಿಸಿಕೊಂಡಹನು (ಬಸಪು. ೨೭-೪೦) ; ನಿಮಗೆ ಮುಖ ತೊಳೆಯಿಸಿ ಮಾತ್ರ ಕೊಡುವುದಕ್ಕೆ ಕಾಯ್ದು ಕೊಂಡಿದೇವೆ (ಚೆಂಗಾಳ್ವ. ೧೫೪). [ ತೊಳೆ₁ + – ಇಸು₃ ]

ತೊಳ್ಳಳ 'ತೊಟ್ಟುಟು' ನೋ.

ತೊಳ್ಳಳಂದುಳಿ 'ತೊಟ್ಟುಟುದುಟು' ನೋ.

ತೊಳ್ಳಾಳ್ 'ತೊಟ್ಟಾಳ್' ನೋ.

ತೊಳ್ಳು 'ತೊಟ್ಟು' ನೋ.

ತೊಳ್ಳುಗೆಯ್, ತೊತ್ತುಗೈ (ಕ್ರಿ). ೧. ತೊತ್ತಾಗಿ ಮಾಡಿಕೊಳ್ಳು ; ಸೇವೆಮಾಡಿಸಿಕೊಳ್ಳು : ನಿಜಮೋಕ್ಷಲಕ್ಷ್ಮಿಯಂ ತ್ವರಿತದಿಂ ತೊಳ್ಳು ಗೆಯ್ವಾಲ್ವ ಬಲ್ಗಾಡಿಯಿಂ (ಪದ್ಮರಾ. ೫-೩೪). ತೊತ್ತುಗೈ: ೨. ಸೇವೆ ಮಾಡು : ತೊತ್ತುಗೈವುದು ಲೋಕವೀತಗೆ (ಕಾಶಿಕಾ. ೨೫-೬).
[ ತೊಳ್ಳು (<ತೊಟ್ಟು) + ಕೆಯ್₁ ]

ತೊಳ್ಳುಗೆಯ್ಮೆ (ನಾ). ತೊತ್ತಿನ ಕೆಲಸ ; ಸೇವೆ ; ಊಳಿಗ : ತೊಳ್ಳು ಗೆಯ್ಮೆಯ ಪೆರ್ಮೆಗೊಳ್ಳನೆಸಗುವೆನೆಂದು ಕಜ್ಜಮಂ ಕೈಕೊಂಡೊಡೀಂ ಸ್ವಾರ್ಥದೋಷಮಂ ಕಾಣ್ಬರಾರ್ (ಶ್ರೀರಾಮಪಾ. ೧೧೫-೯೬).
[ ತೊಳ್ಳು (<ತೊಟ್ಟು) + ಗೆಯ್ಮೆ (<ಕೈಮೆ₁) ]

ತೊಳ್ಳುಗೆಲಸ 'ತೊಟ್ಟುಗೆಲಸ' ನೋ.

ತೊಳ್ಳುಗೊಡು 'ತೊಟ್ಟುಗೊಡಂ' ನೋ.

ತೊಳ್ಳುಗೊಳ್ 'ತೊಟ್ಟುಗೊಳ್' ನೋ.

ತೊಳ್ಳುಬಾಳ್ (ಕ್ರಿ). ತೊತ್ತಾಗಿ ಜೀವಿಸು ; ಗುಲಾಮನಾಗಿರು : ನಾ ತೊಳ್ಳುಬಾಳೆನು ನಿನಗೆ (ಮೂರುನಾ. ೧೧೨-೪೭೦).
[ ತೊಳ್ಳು (<ತೊಟ್ಟು) + ಬಾಳ್₁ (<ಬಾಟ್₁) ]

ತೊಳ್ಳುಪಟ್ಟ 'ತೊಟ್ಟುಪಟ್ಟ' ನೋ.

ತೊಳ್ಮಗ (ನಾ). ತೊತ್ತುಮಗ ; ಆಳುಮಗ : ಅವ [ ನಾ ] ತೊಳ್ಮಗ ಗೊಣ್ಡೊಮ್ (ಸೌಇಇ. ೧೯೩೨, ಪುಂಗನೂರು. ೧೯೭-೭ ; ೯ನೆಯ ಶತ).
'ತೊಟ್ಟುಪಟ್ಟ' ಪರಾ. [ <ತೊಟ್ಟು + ಮಗ ]

ತೊಳ್ಳು (ಕ್ರಿ). ಸ್ವಚ್ಛವಾಗು : ಮೂವರು ಮೂರು ಒನಕೆಗಳನ್ನೆತ್ತಿ ಅನುಕ್ರಮವಾಗಿ ನೆಲಕುಳಿಗೆ (ಒರಳಿಗೆ) ಗುರಿತಪ್ಪದೆ ಕುಟ್ಟುವಾಗ ಹೊರಕ್ಕೆ ಹಾರುವ ಧಾನ್ಯವನ್ನು ತಂತಮ್ಮ ಒಂದೊಂದು ಪಾದದಿಂದ ಕೂಡುವರು. ಹೀಗೆ ಕೂಡದಿದ್ದರೆ ಅಕ್ಕಿ ಸರಿಯಾಗಿ ತೊಳ್ಳದು (ಸಂಕೋಧ. ೦೪೯). 'ತಳಿಸು₁' ಪರಾ. [ ದೇ. ‖ ತುಳು. ತೊಳ್ಳು ]

ತೊಳ್ಳುಗುಂಡು (ನಾ). ಕೆಳಗೆ ತಳ್ಳುವ ಗುಂಡು (?) : ಬಹು ಜನರು ಹತರಾಗುವಂತೆ ಮಾಡಿರುವ ತೊಳ್ಳುಗುಂಡುಗಳನ್ನೂ ತುಪಾಕಿಗುಂಡು ಗಳನ್ನೂ ಇರಿಸುವುದಕ್ಕೆ . . . ಉಗ್ರಾಣಗಳನ್ನು ಮಾಡಿಸಿದರು (ಚಾಮವಂ. ೮೯). [ < ತಳ್ಳು + ಗುಂಡು ]

ತೊಳ್ಳೆ 'ತೊರಳೆ' ನೋ.

ತೊಳ್ಳೆಮಿಾನು (ನಾ). ಒಂದು ಬಗೆಯ ಮಿಾನು: ಆ ಪೊಟ್ಟಣದಲ್ಲಿ ಕೆಲವು ಬೆಳ್ಳೇಡಿ, ಸೋಸಲು, ತೊಳ್ಳೆಮಿಾನುಗಳಿದ್ದು, ಒಂದು ತೊಳ್ಳೆಮಿಾನಿಗೆ ಇನ್ನೂ ಜೀವವಿದ್ದುದರಿಂದ ಚಿಮ್ಮಿ ಹಾರಿ ಒಲೆಯ ಬೂದಿಗೇ ಬಿದ್ದಿತು (ಮಲಮ. ೫೮೮). [ ತೊಳ್ಳೆ ? + ಮಿಾನು₂ (<ಮಿಾನ್₃) ]

ತೊಱಗಲೆ, ತೊಱಗೆಲೆ (ನಾ). ಒಂದು ಊರಿನ ಹೆಸರು ; ✈ ಈಗಿನ ಬೆಳಗಾವಿಜಿಲ್ಲೆಯ ತೊರಗಲ್ಲು : ತದ್ದವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱೆಯ ಸುಬೋಧಿಪನಮೆನಿಸಿ ಬೆಳುಗಲಿದೇಶಂ (ಅಜಿಪು. ೧೨-೪೪) ; ಕಿಸುಕಾಡೆಪ್ಪತ್ತುಮಂ ಬಾಗಡಗೆ ಯಪ್ಪತ್ತುಮಂ ತೊಱಗಲೆ ××× ಮಂ ಮಾಸೆಯವಾಡಿ ನೂಱ ನಾಲ್ವತ್ತುಮಂ . . . ರಾಜ್ಯಂಗೆಯ್ಯುತ್ತಿರಲು (ಸೌಇಇ. XI-1, ೭೭-೮ ; 1050). ತೊಱಗೆಲೆ : ತೊಱಗೆಲೆ ಬಿಟ್ಟಹಳ್ಳಿ ನೆಗೆಟ್ಟೂಜಿರಗೋಳ ಮೊನಿಪ್ಪಗುರ್ವುವೆತ್ತಬಱಿಕೆಯ ಬೇಡವಟ್ಟುಗಳ . . . ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್ ಪೆಱರಳವಲ್ತು (ಕಾವ್ಯಾವ. ೨೧೨). [ ? ]

**ತೊಱಗೆಲೆ** 'ತೊಱಗಲೆ' ನೋ.

**ತೊಱಡು** (ನಾ). ಮರದಿಂದ ಹಣ್ಣನ್ನು ಕೀಳಲು ಉಪಯೋಗಿಸುವ ಕೊಕ್ಕೆ; ದೋಟಿ : (೬).

[ದೇ.॥ ತಮಿ. ತುಱಟು, ತುಱಟ್ಟಿ; ಮಲ. ತುಱಡು]

**ತೊಱಪ, ತೊಱಹ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು : ತೊಱಪರ ಬೂತಯ್ಯಂ ಪೂಲಿಯ ತುಱುವಂ ಕೊಂಡಡೆ (ಎಇ. XVIII, ೨೦೦-೩; 1107). ತೊಱಹ : ತಂಬುಲಿಗ ಸಾಸಿರ್ವ್ವರತ್ರ್ಥಂ ತೊಱಹರು ಕೊಣ್ಡಡಾಯತ್ರ್ಥಂ ಸಿಂಗಗಾವುಣ್ಡನಿಕ್ಕಿಸಿ ತಂದ[ಡೆ] (ಸೌಇಇ. XI-1, ೧೪೮-೨೩; 1099); ಆ ಗ್ರಾಮದ ತುಱುವಂ ತೊಱಹರ ಕಾಳಯು ಆ ಪುಯ್ಯಲಿಂಗೆಱಗಿ ಮೇಲಾಳಂ ನಿಱಿದು . . . ತುಱುವಂ ಮಗುಱ್ಚಿರ್ (ಎಕ. VII, ಶಿವಮೊ. ೩೭-೭; 1140); ಕಾವಗೌಡಂ ನೆಗರ್ದ ತೊಱಹರ ಕುಳಕ್ಕೆ ತಿಳಕಂ (ಕಇ. I, ೨೪-೧೫; 1148); ತೊಱಹನಂ ಬೆಂಕೊಂಡು ತೂಳ್ದಿಯ್ದು ಮುಟ್ಟಿ (ಎಇ. XIX, ೨೩೦-೩೩; 1179). 'ತೊಳಪ್ಪ₂' ಪರಾ.

. ತೊಱಹರ ಮಾರಿ = ಒಂದು ಬಿರುದು : ತೊಱಹರ ಮಾರಿ ವೈರಿ ಸಂಹಾರಿ ದುಡಿ ಮುಂನಿಱಿವಂ ಶೌರ್ಯ್ಯಮಂ ಮೆಱೆವಂ (ಎಕ. VIII, ಸಾಗರ. ೧೦೯-೫ ; 1042). [ ? ]

**ತೊಱಬು** (ನಾ). ಅಣಕ ; ಹಾಸ್ಯ : "ತೊಱಬೆಂದಣಕಂ" (ಕರ್ಣಾನಿ. ೬೮).

[ P ಇದು 'ಕೊಱಚು' ಎಂಬುದರ ಅಪಲಿಖಿತವಿರಬಹುದು ]

**ತೊಱರಗಣೆಗಿಲು** (ನಾ). ಒಂದು ಬಗೆಯ ಸಸ್ಯ : "ಕಾಂತಃ – ತೊಱರ ಗಣೆಗಿಲು, ನಂದಿವೃಕ್ಷ . . . ಸೂಜಿಕಲ್ಲು" (ಓಷಧಿ. ೨೮). 'ತೊಱೆ ಗಣೆಗಿಲು' ಪರಾ. [ ? + ಗಣಿಗಿಲು (< ಕಣಗಿಲೆ₁) ]

**ತೊಱವಿ, ತೊಱವಿ** (ನಾ). ೧. ತ್ಯಜಿಸುವಿಕೆ; ವರ್ಜಿಸುವುದು; ತ್ಯಾಗ: ಕ್ರೋಧದ ತೊಱವಿಯುಂ ಲೋಭದ ತೊಱವಿಯುಂ . . . ಎಂಬಿವಯ್ದುಂ ಪುಸಿಯರ ವ್ರತದ ಭಾವನೆಗಳು (ಶಾಸ್ತ್ರಟೀ. ೭೪-೭); ವಕಾರಕ್ಕೆ–ತೊಱವಿ, ಆಳವಿ, ಬಳವಿ (ಶಮಂದ. ಸ. ೨೨೦ ಪ್ರಯೋ). ೨. ಬಿಡುಗಡೆ; ವಿಮೋಚನೆ: ನೀವಲ್ಲಿಗೆ ಬಿಜಯಂಗೆಯ್ದು ತತ್ಫಣಗೆ ತೊಱವಿಯಂ ಕುಡುವು ದೆಂಬುದುಂ (ಧರ್ಮಾಮೃ. ೧೪-೯೩). ತೊಱವಿ: ೧. ಅತಿಕಾಂಕ್ಷೆಗಳ ತೊಱವಿ ಯುಲಿಲ್ಲವು ಪಾಪಗಳೆಂದು ಕೊಟ್ಟನು (ಕದಂಪು. ೯) ; ತೊಱವಿಯೆ ರಸ ಪರಿತ್ಯಾಗವೆಂಬುದು ತಾನರಿವುದು ಭವ್ಯರಿಂತಿದನು (ಪೂಜ್ಯಚ. ೧೨-೬೯). ೩. ತ್ಯಜಿಸಲು ಯೋಗ್ಯವಾದುದು : ಅಂತಹ ಧರ್ಮಗೊಡ್ಡಿನ ಹುಚ್ಚಾಟವು ಈ ಸನ್ದರ್ಭದವಸರಕ್ಕೆ ತೊಱವಿಯುದಹುದು (ಮಂತ್ರಶ. ೧೫೨-೨೪). [ ತೊಱೆ₁ + – ವಿ/ತಮಿ. ತುಱವಿ ]

**ತೊಱಸು** 'ತೊಱೆಯಿಸು' ನೋ.

**ತೊಱಹ** 'ತೊಱಪ' ನೋ.

**ತೊಱಿಸು** 'ತೊಱೆಯಿಸು' ನೋ.

**ತೊಱು** 'ತಂಱು' ನೋ.

**ತೊಱುಕೊಲ್** 'ತುಱುಗೋಳ್' ನೋ.

**ತೊಱುಕೊಳ** 'ತುಱುಗೋಳ್' ನೋ.

**ತೊಱುಕ್ಕೊಳ್** 'ತುಱುಗೋಳ್' ನೋ.

**ತೊಱುಗರೆ** (ನಾ). ಒಂದು ಪ್ರದೇಶದ ಹೆಸರು : ಅಕ್ಕಾದೇವಿಯರ್ಕ್ಕೆ ಸುಕಾಡೆಟ್ಟಿತ್ತುಮಂ ತೊಱುಗರೆಯುಱುವತ್ತುಮಂ . . . ಆಳುತ್ತಮಿರೆ (ಎಇ. XV, ೭೮-೭; 1050). 'ತೊಱಗಲೆ' ಪರಾ. [ ? ]

**ತೊಱುಗೊಳ್₁** 'ತುಱುಗೊಳ್₁' ನೋ.

**ತೊಱುಗೊಳ್₂** 'ತುಱುಗೋಳ್' ನೋ.

**ತೊಱುಗೊಳ** 'ತುಱುಗೋಳ್' ನೋ.

**ತೊಱುಗೊಳ್ಳ** 'ತುಱುಗೋಳ್' ನೋ.

**ತೊಱುಗೋಳ್** 'ತುಱುಗೋಳ್' ನೋ.

**ತೊಱುಮಣ್ಣು** (ನಾ). (?) : ಬೊಂಬಸಮುದ್ರದ ಹಿಂದೆ ಗದ್ದೆ ಸ ೨ ಕೊ ×××ಗಗರಿಯ ಕೆಟ್ಟದೊಳಗೆ ಗದ್ದೆ ಸ ೨ ಕೊ ೧೦ × ಮುಂದಣ ಕೆಱೆಯ ಹಿಂದೆ ಗದ್ದೆ ಕೊ ೧೦ . . . ಇವೆಲ್ಲ ತೊಱುಮಂಣು ಚಿತುಸೀಮೆಗೆ ನಟ್ಟ ಕಲ್ಲೆ ಮೇರೆ ಸಾಲು (ಎಕ. XVI, ಚಕ್ನಾ. ೫೮-೨೮ ; 1260).

[ ತೊಱು ? + ಮಣ್ಣು (< ಮಣ್) ]

**ತೊಱುವಳ್ಳ** 'ತಂರುವಾಳ' ನೋ.

**ತೊಱುವಾಳ್ಳ** 'ತುಱುವಾಳ' ನೋ.

**ತೊಱೆ₁, ತೊರೆ₁** (ಕ್ರಿ). ೧. ಬಿಟ್ಟು ಬಿಡು ; ಪರಿತ್ಯಾಗ ಮಾಡು ; ವರ್ಜಿಸು ; ತ್ಯಜಿಸು : "ತೊಱೆ –ವಿಸರ್ಜನೇ, ನದ್ಯಾಂ ಚ" (ಶಮಧಾ) ; ಪರರ ದೋಷಂಗಳುಮಂ . . . ತೊಱೆವುದು ತೊಱೆವಂತಸಾಧುಜನ ಸಂಗತಿಯಂ (ಕವಿರಾ. ೧-೬೭) ; ಉತ್ತಮಕುಲದೊಳಪ್ಪಭಿಮಾನಮು ತೊಱೆದು ಬಾಟಾಕ್ಕಾರಣವಾಗಿ ಕುಲಜರಲ್ಲದವರ್ಗಾಳಾಗಿ ಬಾೞ್ವರ್ (ವಡ್ಡಾರಾ. ೮೬-೩೦) ; ಎಲ್ಲಮಂ ತೊಱೆದು . . . ದಿಗಂಬರವಿಳಾಸಮು ಬಯಕೆ ತೀರ್ವಿನಂ ತಾಳ್ದಿದಂ (ಆದಿಪು. ೩-೫೭); ಮಹಾಶ್ರೀಯುಂ ಕೊಳದ ಪುಲ್ಲ ಕಡ್ಡಿಯಂ ತೊಱೆವಂತೆ ತೊಱೆದು (ಧರ್ಮಾಮೃ. ೯-೩೨); ಪರನಾರಿ ಯರ ಸಂಗವ ತೊಱೆಯಿಂ ಭೋ (ಬಸವ. ೬೪೨); ಪರಾಂಗನೆಗೆ ಕೊರ್ತು ಒಸೆದು ತಾಯುಂ ತೊಱೆವ ಬೆಸನಿ ಜೋ (ಸಿದ್ಧರಾ. ೧-೫೯) ; ಭೀತಿಯು ತೊಱೆದು ಕಾಂತೆಯು ಕೂಡೆ ರಮಿಸಿದಂ (ಜೈಮಿಥಾ. ೧೧-೨೧). ೨. ಪ್ರಾಪಂಚಿಕಸುಖವನ್ನು ತ್ಯಾಗ ಮಾಡು ; ವಿರಕ್ತಿಹೊಂದು : ಸಸಿಮತಿಶ್ರೀಗನ್ತಿಯರ್ . . . ಕಟ್ವಪ್ಪಿನುಳ್ ತೊಱದಾರಾಧನೆ ನೋನ್ತು ತೀರ್ತ್ಥಗಿರಿ ಮೇಲ್ಸ್ವರ್ಗಾಲಯಕ್ಕೇಱಿದಾರ್ (ಎಕ. II, ೭೬-೪ ; ಸು. 700) ; ಪರ್ವತದೊಳಿರ್ದ ಶಾರ್ದೂಲಂ ಜಾತಿಸ್ಮರನಾಗಿ ತೊಱೆದಿರ್ದು ದೆಂಬುದನಾ ಮುನಿಪನವಧಿಯಿನಱಿದು (ಚಾವುಂಪು. ೨೫) ; ನರರರೆಬರ್ ವೈರಾಗ್ಯಂ ದೊರಕೊಂಡಡೆ ತೊಱೆವೆವೆಂಬರ್ (ಅಜಿಪು. ೨-೮೫). ತೊರೆ₁ : ೧. ಮರೆಯರೊ ನೀ ಮಾಡಿದ ಅನಿಮಿತ್ತೋಪಕಾರ ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ (ಜಗದಾ. ೩೯-೧) ; ತರಿದು ಬಿಡು, ತೊರೆದು ಬಿಡು, ತೊಡೆದು ಬಿಡು ನೆನಹಿಂದ ಕರೆಕರೆಯ ಬೇರುಗಳ ಮನದ ಗಂಟುಗಳ (ಮಂಕುಕ. ೬೪೮) ; ನಂಬಿರುವ ಸುಚರಿತರ ತೊರೆಯೆಯೆಂಬಾ ಕೀರ್ತಿ ಎಂದಿನಂತೆಯೆ ನೆರೆದು ಪೂಜ್ಯವಾಗುವುದು (ವಿಸೀಗೀ. ೨೩-೧೧).

[ ದೇ.॥ ತಮಿ. ತುಱ ; ತುಳು. ತೊರೆವು ; ತೆಲು. ತೊಱಂಗು ]

**ತೊಱೆ₂, ತೊರೆ₃** (ನಾ). ೧. ನದಿ ; ಹೊಳೆ : "ಸಿಂಧುಃ, ಸ್ರವಂತಿಃ . . . ಸರಿತ್, ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೧೧೦-೪೩) ; ಮಾರಿ ಮರಳ್ಪುಣಸ ಪೆರಿ ×× ತೊಱೆಯು ಆಲರ್ ಮೇರೆ (ಎಕ. II, ೩೫-೬ ; ಸು. 800) ; ತೊಱೆಯ ಪಳ್ಳದ ನೀರ್ಗಳಂ ಕುಡಿದು (ವಡ್ಡಾರಾ. ೯೦-೨೨); ಶಿರದೊಳ್ [ ತೊ ]ಱೆ ತೊಱೆಯ ಕೆಲದೊಳಸೆದಿರೆ ಪೆಱೆ(ಪಂಪಭಾ. ೮-೨೪);ಹಾಲ ತೊಱೆಗೆ ಬೆಲ್ಲದ ಕೆಸಱು ಸಕ್ಕರೆಯ ಮಳಲು (ಬಸವ. ೨೯೦) ; ತೊಱೆಯ ಹೊನಲಲಿ ಹೋಹ ಕರಡಿಯನಱಿಯದದು ಕಂಬಳಿಯೆನುತ್ತಾಸಱದೆಯಂಬಿಗನೆಯ್ದಿ ಹಿಡಿಯಲು (ಬಸಪು. ೨೦-೨೨); ಮರೀಚಿಯ ತೊಱೆಗೆ ಹಱಗೋಲಿಡುವರುಂಟೇ (ಕುಮಾರವ್ಯಾ. ೪-೩೮). ೨. ಪ್ರವಾಹ ; ನೆರೆ ; ಹರಿವು : ಎಱೆವ ತೊಱೆಯನಿದಿರಿಸುವುದಲ್ಲಿಯ ಗಾಂಪು (ಆದಿಪು. ೧೨-೧೦೮) ; ರಸದ ತೊಱೆ ಪರಿದುದು (ಸುಕುಮಾ. ೧೦-೨೩) ; ಹೆಣ ಸಾಲಿಟ್ಟ ತೊಱೆ [ಪಾಠಾ. ಟ್ಟುದುಱೆ] ಯೆನಲರುಣಜಲ ನಗರೋಪಕಂಠದಲಿ (ಕುಮಾರವ್ಯಾಅ. ೧೨-೨೫) ; ಉದಕಪ್ರವಾಹಮಂ ತೊಱೆ ಯೆಂಬರು . . . ಉರು ಶಿಲೆಯನಱೆಯೆಂಬರಲ್ಲದಿವ ನುಡಿಯರವನಾಳ್ಕೆ

ಳಿಯೊಳು (ಜೈಮಿಫಾ. ೨-೯) ; ತೊಱೆಗೂಡಿದ ನದಿ ನದಿಯ ಕಾಲುವೆ ಗಳು . . . ರಂಜಿಸುತಿಹ ಪುರವಿಹುವಾ ದೇಶದೊಳಗೆ (ಕಂಸವಿ. ೨-೧೧).

**ತೊರೆ₃** : ೧. "ಹೊಳೆಗೆ ತೊರೆಯೆಂದಕ್ಕು" (ಕಶಶ. ೪೯) ; ಏಱ ತೊರೆ ಕಳವೃತ್ತಿ ಕಟಿವೊನ್ನಣ್ಣಮಹಾಪಾತಕನಕ್ಕುಮ್ (ಎಕ. XVI, ತುಮಕೂ. ೧೦೨-೩ ; 750) ; ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯೆ ತೊರೆಯೊಳಂಬಿಗನು (ಇಂಚಾಪ. ೨೦೦-೩೯) ; ಕುದಿವುದು ಮೋಡವು ತೊಟ್ಟಿಡದಿದೆ ಮಳೆ ಬತ್ತಿತು ಹಳ್ಳವು ಅತ್ತಿತು ತೊರೆ ಹೊಳೆ (ಉಮ್ಮಾಕೆ. ೬೪-೪) ; ಬಾಳ ಗುಬ್ಬಿಗೆ ಗುಟುಕಿವಾಗಲಿ ಬಾಳ ತೊರೆಯಲಿ ಹರಿಯಲಿ (ಕಲ್ಲೋಲ. ೧-೧೨).

ತೊಱೆತೊಱೆ, ತೊರೆತೊರೆ (ದ್ವಿರುಕ್ತಿ) : ನಡುಗಿತಿಳೆ . . . ಹೆಮ್ಮರ ನುಡಿದು ಬಿದ್ದವು ಸಲಿಲಪೂಕ್ತಿತು ಕೂಡೆ ತೊಱೆತೊಱೆ [ಪಾಠಾಂ. ಕೆಱೆ ತೊಱೆ]ಯ(ಕುವ್ಯಾಸ.೧೫-೪೩); ತೊರೆತೊರೆಯಾಗಿ ಹೊಳೆಬಸಿಯುತಿಹುದು (ಇಂಗೀತ. ೬೧-೧೧). ತೊರೆ ಬಸಿ = ಪ್ರವಾಹದಂತೆ ಉಕ್ಕಿ ಹರಿ :ಕಣ್ಣೀರು ತೊರೆಬಸಿವೆರಡು ತೋಳ್ಗಳಂ ಮುನ್‍ಚಾಚಿ (ಶ್ರೀರಾಮಾ. ೬೯೬-೪೮೯). ತೊಱೆಗಳಾಣ್ಮ = ನದಿಗಳ ಒಡೆಯ,-ಅಧಿಪತಿ ; ಸಮುದ್ರ : "ತೊಱೆಗಳಾಣ್ಮಂ ಮುನ್ನೀರ್, ನೀರೊಟ್ಟಿಲ್ (ಕಡಲ್) – ಈ ೪ ಸಮುದ್ರಂ" (ಕಶಸಾ. ೮-೧೪೧) ; "ಮುನ್ನೀರ್ ನೀರೊಟ್ಟಿಲುಮಂ ದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ ತಾಂ . . . ಸಾಗರಮೆನಿಕುಂ" (ಕವಿಕಂ. ೮೯). ತೊಱೆದಾಳ್ದ = ಗಂಗೆಯನ್ನು ಧರಿಸಿದವನಂ ; ಶಿವ; ತೊಱೆದಾಳ್ದನ ಕಾರ್ಮುಕದ ಸಿಂಜನಿಯಿಂದೆ ನೆಱ ಬಾಗಿಸಿದರೆಂಬಂತೆ (ವೋಹಚ. ೨-೩೭). [ದೇ.॥ ತಮಿ. ತುಱ್ಱೈ; ಮಲ. ತುಱ; ತುಳು. ತುದೆ]

**ತೊಱೆಕಡವ** (ನಾ). ನದಿಯ ತೀರದಲ್ಲಿ ಬೆಳೆಯುವ ಕಡವ ವೃಕ್ಷ "ನದೀಕದಂಬಃ – ತೊಱೆಕಡವ" (ಓಷಧಿ. ೮೪).

[ ತೊಱೆ₂ + ಕಡವ₁ (<ಕಡಂಬ) ]

**ತೊಱೆಕಾರಾಟ್ಟಿ** 'ತೊಱೆಕ್ಕಾರಾಟ್ಟಿ' ನೋ.

**ತೊಱೆಕ್ಕಾರಾಟ್ಟಿ, ತೊಱೆಕಾರಾಟ್ಟಿ** (ನಾ). ಒಂದು ಸ್ಥಳದ ಹೆಸರು: ತೊಱೆಕ್ಕಾರಾಟ್ಟಿಉ ಪೆಕ್ಕ ವಿಯಮುವೊಲ್ಲೊಗೆಯು ಕೂಡಲೂರು (ಎಕ. IV, ಗುಂಡ್ಲುಪೇ. ೮೮-೪; ಸು. 750). ತೊಱೆಕಾರಾಟ್ಟಿ: ಶ್ರೀಮತು ತೊಱೆಕಾರಾಟ್ಟಿಯ ಆಚಯ್ಯನ ಮಗಂ ಕೇಸವಭಟ್ಟಂ ದೇಗುಲಮಂ ಮಾಡಿಸಿ . . . ಕೊಟ್ಟ ಭೂಮಿ (ಎಕ. IV, ಗುಂಡ್ಲುಪೇ. ೯೩-೨೦; 1049).

[ ℙ ಇದು 'ತೊಱೆಕಾರರ ಹಟ್ಟಿ ಇರಬಹುದೆ' ? ]

**ತೊಱೆಗಟ್ಟು** (ಕ್ರಿ). ಪ್ರವಾಹವಾಗು ; ಪ್ರವಹಿಸು : ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟಿ ಮಂಜಿನ ನೀರು ತೊಱೆಗಟ್ಟಿ ಹಾಯ್ದು ತುಂಬಿತ್ತು (ವಚಸಂ. ೫೪೭-೧). [ ತೊಱೆ₂ + ಕಟ್ಟು₁ ]

**ತೊಱೆಗಣಗಿಲೆ, ತೊಱೆಗಣೆಗಿಲು, ತೊಱೆಗಣೆಗಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಕಣಗಿಲೆ. "ನಿಚುಲ, ಅಂಬುಜ, ಹಿಜ್ಜಲ = ತೊಱೆಗಣಗಿಲೆ" (ನಾಚಿರಾ. ೬) ; "ತೊಱೆಗಣ [ಪಾಠಾಂ. ಣೆ]ಗಿಲಾ ಲೋಮಕಂ ಪಿಚುಳಮದು" (ಮಂಗರಾ. ೩೪-೧೧). ತೊಱೆಗಣೆಗಿಲು : "ರಕ್ತಕಾರ್ಮುಕಃ– ತೊಱೆಗಣೆಗಿಲು" (ಓಷಧಿ. ೧೩೫); ತೊಱೆಗಣೆಗಿಲ ಕತ್ತರಿಯೆಸೆವ ಮೂಲಮುಂ ಕಕಕಕುಜಾವಳಿಯ ಪರಿಪಕ್ವ ಫಲರಸ ಜಳದಿಂದರೆದು (ಖಮದ. ೭-೨೦). ತೊಱೆಗಣೆಗಿಲೆ: "ನಿಚುಲಃ, ಹಿಜ್ಜಲಃ, ಅಂಬುಜಃ ಈ ೩ ತೊಱೆಗಣೆಗಿಲೆ ಹೆಸರು" (ನಾಚಿರಾ. ೧೦೮).

[ ತೊಱೆ₂ + ಕಣಗಿಲೆ₁ ]

**ತೊಱೆಗಣಜಿಲು, ತೊಱೆಗಣೆಜಿಲಂ, ತೊಱೆಗಣೆಜಿಲೆ** (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಸಸ್ಯ : "ದೀರ್ಘಪತ್ರಃ– ಕಮ್ಮತ್ತಿ, ತೊಱೆಗಣಜಿಲು, ನೀರಿಪ್ಪೆ, ಹಬ್ಬೆಯ ಭೇದ" (ಓಷಧಿ. ೭೭).

ತೊಱೆಗಣೆಜಿಲು: ನೆಱ ಕು(ದಿ)ಸಿ ಕಟ್ಟುಗಿಂ ತೊಱೆಗಣೆಜಿ[ಪಾಠಾಂ. ಗಿ]ಲ ದಳಮನಾದೊಡಂ ಬಾತ ವಿಪಕ್ಕುಱಸಲ್ಕುಪಸಾಹದೆ ತೊಱೆಯಿಟಿಗುಂ (ಖಮದ. ೧೬-೬೨). ತೊಱೆಗಣೆಜಿಲೆ: ನಜುವಲ್ ಮಗ್ಗಾರೆಯ ಕಾಯ್ ತೊಱೆಗಣ(ಜಿ)ಗಿಲೆ ದೇವದಾಳಿ . . . ಇವನರೆಯಲ್ ಜಲದಿಂದೆ ಫಣಿಯ ವಿಷನಿರ್ಹರಣಂ (ಖಮದ. ೫-೧೦೪).

[ ತೊಱೆ₂ + ಗಣಜಿಲು (< ಗಣಜಿಲೆ₁) ]

**ತೊಱೆಗಣೆಗಿಲು** 'ತೊಱೆಗಣಗಿಲೆ' ನೋ.

**ತೊಱೆಗಣೆಗಿಲೆ** 'ತೊಱೆಗಣಗಿಲೆ' ನೋ.

**ತೊಱೆಗಣೆಜಿಲಂ** 'ತೊಱೆಗಣಜಿಲು' ನೋ.

**ತೊಱೆಗಣೆಜಿಲೆ** 'ತೊಱೆಗಣಜಿಲು' ನೋ.

**ತೊಱೆಗರೆ₁, ತೊರೆಕರೆ** (ನಾ). ಹೊಳೆಯಂ ತಡಿ ; ನದೀತೀರ : ಕಡಲ ಕಡೆಯಲ್ಲಿ ಸಾರ್ಚಿರ್ಪುದೋ ಆತರ್ ಮೋಡನದ ತೊಱೆಗರೆಯ ತೆಮಿಸಿರದೆ ಎಂದಾನುಮೊರ್ಮೆ ಮನೆ ಮಾಬ್ಬರನ್ (ಬದ್ಮಪ್ರ. ೩೯-೮೩೨). ತೊರೆಕರೆ : ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟ ಸೆಜ್ಜೆಸಾಲೆ (ಸೂರ್ಯಪಾ. ೩೫-೧). [ ತೊಱೆ₂ + ಕರೆ₄ ]

**ತೊಱೆಗರೆ₂** (ನಾ). ಒಂದು ಸ್ಥಳದ ಹೆಸರು : ಲೋಕಾಪುರಂ ಪನ್ನೆರಡು ತೊಱೆಗರೆಯುಜುವತ್ತು ಇನ್ನು ಮೂವತ್ತೊಚ್ಚರ್ಸಿರದ ನೂಱರಡು ಬಾಡಮಂ ಲೋಕಟಿಯರಾಳೆ (ಎಕ. VII, (S), ಶಿಕಾರಿ. ೩೭೮-೭ ; 902). 'ತೊಱಗಲೆ ಪರಾ'. [ ? ]

**ತೊಱೆದಡಿ** (ನಾ). = ತೊಱೆಗರೆ₁ : ಬಿಲ್ಲಪಳ್ಳಿಗಳೆಲ್ಲಂ ತೊಱೆದುವು ತೊಱೆದಡಿಗಳನಾರ್ ತೊಱೆಯದರನುಕೂಲವೃತ್ತಿಗೆಟ್ಟೆಸಗುವರು (ಆದಿಪು. ೪-೧೧) ; ಅಂದು ನಮ್ಮನು ರಜತವಾಳುಕಿಯೆಂದೆನಿಪ ತೊಱೆದಡಿ ಯೊಳೀತನು ಬಂದು ಬಂಧುವೆಯಾಗಿ ರಕ್ಷಿಸಿದನು (ಸಾಳ್ವಭಾ. ೧೭-೯೦).

[ ತೊಱೆ₂ + ತಡಿ₂ ]

**ತೊಱೆದಲೆಯ** (ನಾ). ತಲೆಯಲ್ಲಿ ನದಿಯನ್ನು ಧರಿಸಿದವನಂ ; ಗಂಗಾ ಧರ ; ಶಿವ : ತೊಱೆದಲೆಯನ ಮುಂದಲೆಗೆ ಸೀಸಕವನಳವಡಿಸಿ ಫಣಿ ಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು (ರಾಮಾಶ್ವ. ೧೩೧-೯೦).

[ ತೊಱೆ₂ + ತಲೆ₁ + – ಅ₇ ]

**ತೊಱೆದವನ, ತೊರೆದವನ** (ನಾ). ನೀರಿರುವ ಜಾಗದಲ್ಲಿ ಬೆಳೆಯುವ ಒಂದು ಬಗೆಯ ದವನ : "ತಪೋಧನಃ – ಚೋಟತಜ. ತೊಱೆದವನ" (ಓಷಧಿ. ೬೭) ; ಗಿಣಮೂಗನ ಬೇರ್ ತೊಱೆದವನ ತೊಟ್ಟಿ ಮುಸ್ತೆಯ ನುಱ ಚೂರ್ಣಿಪುದು (ಖಮದ. ೫-೯೪). ತೊರೆದವನ : "ವನಾದೀ – ದವನ, ತೊರೆದವನ" (ಓಷಧಿ. ೧೪೯). [ ತೊಱೆ₂ + ದವನ ]

**ತೊಱೆನಾಡು** (ನಾ). ಒಂದು ಪ್ರದೇಶದ ಹೆಸರು : ಮಿದಿಯರಸರ್ ತೊಱೆನಾಡಯ್‍ನೂಱುಂ . . . ಆಳೆ (ಎಕ. IV, ಹಗ್ಗಡ. ೯೩-೩ ; ಸು. 740) ; ಎಱೆಗಜ್ಜ ನಾಮಧೇಯಃ ತೊಱೆನಾಡು ಅಯನೂಱು[೦] . . . ಆಳೆ (ಇಅ. XIV, ೨೩೨-೪೯ ; ಸು. ೯ನೆಯ ಶತ).

[ ತೊಱೆ ? + ನಾಡು ]

**ತೊಱೆನಾಯ್** (ನಾ). ನೀರುನಾಯಿ: ತೊಱೆನಾಯ್ ಸತ್ತೆಡೆಯ ಮಾಚ್ ಶುಕಾಸ್ಯಂ ಮದ್ಯಂ ಮುಱದೊಂಡೆಯೆಬಿವಂ ಪೆಸರಱಯದ ಬಾಹು ಗಳೊಳೊರಸೆ ಪೊಱಸಿ(ಸು)ಗೆ ಪೋಕುಂ (ಲೋಕೋಪ. ೯-೨೦೨).

[ ತೊಱೆ₂ + ನಾಯ್ ]

**ತೊಱೆಮತ್ತಿ** (ನಾ). ೧. ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮತ್ತಿಗಿಡ : "ನದೀಸರ್ಜಃ, ವೀರತರುಃ ಈ ೨ ತೊಱೆಮತ್ತಿ" (ನಾಚಿರಾ. ೧೦೭) ; "ತೊಱೆಮತ್ತಿ ನೀತಿ ಕಕುಭಾಖ್ಯಾನಂ" (ಷಾಸಾರ. ೧೨೯) ; "ನದೀಸರ್ಜಃ – ಮತ್ತಿ. ತೊಱೆಮತ್ತಿ" (ಓಷಧಿ. ೯೩).

೨. ಒಂದಂ ಬಗೆಯ ಸಸ್ಯ : "ಮುರುಕಿಲಾ ತೊಱೆಮತ್ತಿ ಸಿಂಧುಕಿಯೆನಿಕ್ಕು" (ಮಂಗರಾ. ೩೭-೧೪). [ ತೊಱೆ$_2$ + ಮತ್ತಿ$_2$ ]

**ತೊಱೆಮಲ್ಲಿಗೆ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಲ್ಲಿಗೆ: ತೊಱೆಮಲ್ಲಿಗೆಯಂ ಪ್ರವಿಲೇಪನವಮಂ ಮಾಡುತ್ತವಿರಲ್ಕಚ್ಚರಿಯಿದೆಂಬಿನಂ ಕ್ರಿಮಿ ಕಿಡುಗುಂ (ಲೋಕೋಪ. ೯-೧೧೫) ; ತೊಱೆಮಲ್ಲಿಗೆ ಪುನ್ನಾಗಂ... ತೊಟ್ಟ ಮುಸ್ತೆಯನುಱೆ ಚೂರ್ಣಿಪುದು (ಖಮುದ. ೫-೯೪).
[ ತೊಱೆ$_2$ + ಮಲ್ಲಿಗೆ ]

**ತೊಱೆಮಾವು, ತೊರೆಮಾವು** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಾವಿನ ಮರ: ತೊಱೆಯ ಮಾವು = ತೊಱೆಮಾವು (ಶಮುದ. ೧೬೩ ಪ್ರಯೋ) ; ಹಲಸು ಕೊಡಸಿಗೆ ಮಾವು ಕೊ[ಪಾಠಾಂ. ತೋ]ಱೆಮಾವುಲಿಯ ಕಣಗಿಲು ... ಹಾದರಿಯುಮರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ತೊರೆಮಾವು** : "ಆಮ್ರುಪತಾಕಾ – ತೊರೆಮಾವು" (ಓಷಧಿ. ೧೩). [ ತೊಱೆ$_2$ + ಮಾವು ]

**ತೊಱೆಯ, ತೊರೆಯ** (ನಾ). ೧. ಮೀನಂ ಹಿಡಿಯುವವನಂ; ಮೀನುಗಾರ ; ಬೆಸ್ತ : ಅರ್ಥವುಂಟೆಂದಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ ತೊಱೆಯನ ಮೇಳದಂತೆ [ಪಾಠಾಂ. ತೊತ್ತಿನ ಕೂಟದ ತೂರ್ಯ ಮೇಳದಂತೆ](ದೇದಾವಚ೩೦-೫೩).ಕಾಡತುಱುಕಾಱನೋ ಮೀನ್‌ಬಿಡಿವ ತೊಱೆಯನೊ(ಅಶ್ವಶಾ. ೩೭-೩೮೮). **ತೊರೆಯ**:೧."ಬಿಸ್ರ್ಯ=ತೊರೆಯಂ"(ಕಾಶಕ್ಕ. ೨೭೦) ; ಇಲ್ಲಿಯ ಬೆಸಮಕ್ಕಳಾಲೆನ್ದೊಡೆ ಕಾಟಗೊಡೆಯನುಂ . . . ತೊರೆಯರಾಳ ಪಡಿಯನುಂ (ಎಕ. III, ನಂಜನ. ೧೩೯-೯ ; 915 ?) ; ಸ್ವಸ್ತಿ ಶ್ರೀಮತ್ ಪಱಮೆಯರ ಕುಲದ ತೊರೆಯರ ಮಾರಣ್ಣಗಂ ಅಣ್ಣಪ್ಪಯಕ್ಕಂಗಂ ಪುಟ್ಟಿದ ವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪-೨ ; 1000 ?) ; ೨. ದೋಣಿ ನಡೆಸುವವನು ; ಅಂಬಿಗ : ಪಡುವ ದಿಬ್ಬದ ಗೌಡನೊಬ್ಬನು ಬಿಡದೆ ತೊರೆಯನ ಕೂಗಿಕೊಂಡನು (ಇಂಗೀತ. ೬೬-೩); ತೊರೆಯರೆರೆಯಾ ಏಕೆ ನಿನ್ನಹೊತ್ತಿಗಲ್ಲದೆ ಬಾರೆ ಮುನ್ನ? (ಗೀವಿಂ. ೫೫-೩೩). [ ತೊಱೆ$_2$ + – ಅ$_7$. /ತಮಿ. ತುಱೈಯ ]

**ತೊಱೆಯಣುಗ** (ನಾ). ನದಿಯ ಮಗ ; ಗಾಂಗೇಯಂ ; ಭೀಷ್ಮ : ತೊಱೆಯಣುಗನು ಪರಿತಂದು ಅಱಗುಲಿ ಕೌರವನಾಡುವ ಜೂಜಿನ ತೆಱನನು ಧೃತರಾಷ್ಟ್ರಗುಸುರೆ (ನೇಮಿಸಂ. ೨೪-೩೬).
[ ತೊಱೆ$_2$ + ಅಣುಗ (<ಅಣುಂಗ) ]

**ತೊಱೆಯಿಂಗುಳ, ತೊರೆಇಂಗುಳ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಇಂಗುಳದ ಗಿಡ : "ತೊಱೆಯಿಂಗುಳಂ ದುರಾಲಂಬ ಮೆನಿಸಿಕ್ಕು" (ಮಂಗರಾ. ೩೭-೧೭). **ತೊರೆಇಂಗುಳ** : ನೆಲಗುಳ್ಳ ತೊರೆ ಇಂಗ[ಗು]ಳ . . . ಕಷಾಯ ಕಾಯಿಸಿ, ಹಿಪ್ಪಲಿ ಪ್ರತಿಪಾಕವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವ್ಯ. ೪೯). [ ತೊಱೆ$_3$ + ಇಂಗುಳ ]

**ತೊಱೆಯಿಸು, ತೊರಸು, ತೊಱಸು, ತೊಱಿಸು** (ಕ್ರಿ). ೧. ತ್ಯಜಿಸುವಂತೆ ಮಾಡು : ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳ ನಱೆಯಿಸಿ . . . ಸುಖದೊಳೋಲಾಡಿಸುವವಗಡ ಯಾತಱಿಂದಾಯ್ತು (ಭರತೇ. ೬-೩೯). ೨. ವೈರಾಗ್ಯವನ್ನು ಹೊಂದುವಂತೆ ಮಾಡು ; ವೈರಾಗ್ಯದೀಕ್ಷೆಯನ್ನು ಕೊಡು : ಪರಮಾಯುಷ್ಯಾಂತಂಬರಂ ನಿರಾಕುಳ ಮಾಗಿರ್ಪಾ ಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊಱೆಯಿಸಿದಂ (ಆದಿಪು. ೨-೩೩). **ತೊರಸು** : ೧. ಶರೀರದಭಿಲಾಷೆಯಂ ಕಿಡಿಸಿಃ ವರ ನೆರೆ ಸ್ವಬಂಧುವನೆಲ್ಲ ಮರಸುವಡೆ ತೊರಸುವಡೆ ತಿರುತಿರುಗಿ (ತಿರುಶ. ೧-೭೮). **ತೊಱಸು** : ೧. ತೊತ್ತುವೇಟಕೆ ಹಡದ ತಾಯನು ತೊಱಸಿದರೋ[ಪಾಠಾಂ. ತೋಱದರು] (ತೊರರಾ. ೪-೫_೧೧). **ತೊಱಿಸು**: ೧. ಅವನ ಮಾತಾಪಿತರ ತೊಱಿಸಿ[ಪಾಠಾಂ. ತೊಲಗಿಸಿ] ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ (ಪುರಂದ. ೨-೧೭-೨). ೩. ಕುಗ್ಗಿಸು; ಕಡಿಮೆಮಾಡು : ಕರ್ಪುರಕಣ್ಕಳ್ಗೆ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ ಸಮನಾಗಿ ಕೋರ್ಪ ನೀರುಳ್ಳಿಯ ಗಡ್ಡೆಯಂ . . . ಮೆಲ್ಲದ ಮಾನವನೇನ ಬಲ್ಲವಂ (ಸೂಕ್ತಿಸು. ೧೧-೯೩). [ ತೊಱೆ$_1$ + – ಇಸು$_3$ ]

**ತೊಱೆಯೆಱೆಯ** (ನಾ). ನದಿಯ ಒಡೆಯಂ,– ಪ್ರಭು ; ಸಮುದ್ರ : "ಪಾರಾವಾರ ಶಬ್ದಂ ತೊಱೆಯೆಱೆಯನೆನಲ್" (ಕರ್ಣಾನಿ. ೪೦); ಎಟಗಿದ ನಿಜಮುಗಿಲೊಳ್ಮಿಱೆ ಮಿಱುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ ತೊಱೆಯೆಱೆಯಂ ತೆರೆಗೈಗಳಿನುಱದೆನೆ ಕೆವಿಮ್ಮಿಸ್ಗಳೇಂ ಮನು ಗೊಳಿಸಿದವೋ (ರಾಜಶೇ. ೧-೯೯). [ ತೊಱೆ$_2$ + ಎಱೆಯ ]

**ತೊಱೆವನಿ** (ನಾ). ಪ್ರವಾಹವಾಗಿ ಹರಿಯುವ ಹನಿ: ಒಱೆವನಿಗಳಿದಿರ್ವನಿ ಮಸ್ತಕವನಿ ತೊಱೆವನಿಗಳನಾಂತು ಬಿಡದೆ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯಿಳೆಯೊಳಗೆ (ವೋಹತ. ೪-೩೯).
[ ತೊಱೆ$_2$ + ಪನಿ$_2$ ]

**ತೊಱೆವರಿ** (ಕ್ರಿ). ತೊರೆಯಾಗಿ ಹರಿ; ನದಿಯಾಗಿ ಪ್ರವಹಿಸು: ಕಱೆಯು ಬಱುಗೆಱೆಯಾಗಲೀಕ್ಷಿಸಿ . . . ನೀರಿದೆ ಕೊಳ್ಳಿಯೆಂದು ಕಮಂಡಲವ ಮರುಗೆ ತೊಱೆವರಿದುದು (ಸಾಳ್ವಭಾ. ೩೦-೩೭). [ ತೊಱೆ$_2$ + ಪರಿ$_2$ ]

**ತೊಱೆವಳಿ, ತೊರೆವಳ್ಳಿ** (ನಾ). ಒಂದು ಊರಿನ ಹೆಸರು: ತೊಱೆವಳಿದು × × × ಗಟ್ಟಿದ್ದಿ (ಎಕ. VI, ಚಿಕ್ಕಮ. ೬೦-೨೦ ; 1058 ?). **ತೊರೆವಳ್ಳಿ**: ಪಡುವಣ ತೊರೆವಳ್ಳಿಯ ಬಾಸಂಬಾಳ್ಳಿಯೂರ ಮುಂದಣ ಕೆಱೆಯೊಳ್ (ಎಕ. IV,ಮೈಸೂರು. ೩೭-೧೫; ಸು. 990?); (ಮೈಆರಿ. ೧೯೧೭, ೨-೧೫ ನೋ).
[ ? ]

**ತೊಱೆವಾಯ್** (ಕ್ರಿ). ನದಿಯನ್ನು ದಾಟು: ನಗುತ ತೊಱೆವಾಯ್ದಂಬಿಗರ ಗಂಡನೆಂಬ ಕೀಳ್ಪಗೆ ನಿಮಗೆ ನೈಜ (ಸಿಂಗಿರಾ. ೪೪-೧೧).
[ ತೊಱೆ$_2$ + ಪಾಯ್$_1$ ]

**ತೊಱೆವು** (ನಾ). ಇಲ್ಲವಾಗುವಿಕೆ; ಬಿಟ್ಟುಹೋಗುವಿಕೆ : ವೀರನೆನಿಪಗ್ಗದ ಮಾತದು ದೂರಮಾಯ್ತು ನಿಷ್ಠುರನೆಂಬ ಮಾತು ತೊಱೆವಾದುದು ಪೆಂಪಿನ ಮಾತು ಕೆಟ್ಟುದು (ಧರ್ಮಾಮೃ. ೧೩-೧೧೦).
[ ತೊಱೆ$_1$ + – ವು. /ತಮಿ. ತುಱವು ]

**ತೊಱೆವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ; ಮೀನು ಹಿಡಿಯುವಿಕೆ: ಇಂತು ಪನ್ನತಿಕೆಯಿಂ ಪಲವೇಂಟೆಯಾಡಿ ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲು . . . ಪೆರ್ದೊಱೆಗೆಯ್ದಿ ಸಾರ್ದು (ರಾಜಶೇ. ೫-೧೦೪ ವ). [ ತೊಱೆ$_2$ + ಬೇಂಟೆ ]

**ತೊಱೆಹ, ತೊರೆಹ** (ನಾ). ತ್ಯಜಿಸುವುದು; ಬಿಡುವಿಕೆ; ತ್ಯಾಗ: ಸಂಸಾ ಕಿಗಳಂ ಪುಲ್ಲೆಯೊಳ್ ತೊಱೆ[ಪಾಠಾಂ. ಱ]ಹಂ ಕ್ಷೀಣವಪುದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ . . . ಅಲ್ಲದಿಲ್ಲ ಪೆಱತೇನಾರಯ್ವಡಾ ದೇಶದೊಳ್ (ಪುಣ್ಯಾಸ್ರ. ೦-೧೧೪). **ತೊರೆಹ** : ತೊರೆಹ ; (ಅಧಿಕಾರ, ಹಕ್ಕು, ಬಾಧ್ಯತೆ, ವೊ.ಗಳ) ವಿಧಿಗನುಸಾರವಾದ ಪರಿತ್ಯಾಗ (Abdication. ಇಂಕನಿ). [ ತೊಱೆ$_1$ + – ಹ$_3$ ]

**ತೊಱೊಗಂಗ** (ನಾ). (?) : ಸರಿಸೆ ತೊಱೊಗಂಗಗೆ ಕಟ್ಟಿದ × ಡಿಯ . . . [ಯ]ದು (ಸಾಇಇ. XX, ೨೯-೨೨ ; 1044). [ ? ]

**ತೊಱ್ತುಱಿದುಱಿ** 'ತೊಟ್ಟುಱಿದುಂಟಿ' ನೋ.

**ತೊಟಕಲ್** (ನಾ). ತಿರುಗುವಿಕೆ; ಸುತ್ತುವಿಕೆ: "ತೊಟಕಲ್ ತೊಟಲ್ವುದು" (ಶಮುದ. ಪರಿ. ೧). [<ತೊಟಲ್$_1$ + – ಕಲ್$_4$ ]

**ತೊಟಲ್$_1$, ತೊಳಲ್$_1$, ತೊಳಲು$_1$, ತೊಟಲು** (ಕ್ರಿ). ೧. ತಿರುಗಾಡು; ಸಂಚರಿಸು ; ಅಲೆದಾಡು : ಚಂಗೆವೊಕ್ಕಡವಿಯಂ ತೊಟಲ್ವಲ್ಲಿಯೊಂದು ಮರದ ಪೊಟಲೊಳಿರ್ದು (ವಡ್ಡಾರಾ. ೪೯-೬) ; ಅಂತು ಭರತೇಶ್ವರಂ

ಸಕಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾಭ್ಯಂತರಮಂ ತೊಟಲೆ (ಆದಿಪು. ೧೧-೮೩); ಒಂದು ದಿವಸಂ ಯುವರಾಜನಿಂದ್ರಾಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತುಮಿರೆಯಿರೆ (ಕಾದಂಪೂ. ೬೧೭); ಈ ಕಾಂತಾರದೊಳ್ ವ್ಯಾಧರಾಗಡೆಯತ್ಯಾಗ್ರಹದಿಂ ತೊಟಲ್ವರ್ (ಪಂಚತಂ. ೯೭-೧೮); ಶಾಸ್ತ್ರದಪೇಕ್ಷೆಯಿಂದೆ ತೊಟಲುತಿರ್ದಂ ಧರಾಮಧ್ಯದೊಳ್ (ನೇಮಿಪು. ೩-೧೭೨); ನೀಂ ತೊಟಲದ ಪಟ್ಟಣಂ ಪುಗದ ನಂದನಂ . . . ಆವುದು (ಜಗವಿ. ೧೭-೧೨೩); ಗಗನದೊಳೊರ್ಮೆಯುಂ ತೊಟಲುತಿರ್ಪ ವಿಯಚ್ಚರಸಂಕುಲಕ್ಕೆ . . . ಫಲಸಾರಮನಿತ್ತು (ಕುಸುಮಾ. ೯-೨೭). ೨. (ಸಂಸಾರಚಕ್ರದಲ್ಲಿ) ತಿರುಗು; ಸುತ್ತಿ ಬರು; ಭ್ರಮಣೆ ಹೊಂದು: "ತೊಟಲ್–ಭ್ರಮಣೇ" (ಶಮಧಾ); ಬಗೆದೀಡಾಡೆ ದುರಂತ ದುಃಖತತಿಗಳ್ . . . ಇನ್ನೆಗಮೋರಂತೆ ತೊಟಲ್ದೆನಿಂ ತಿರಿಯಲಾಱೆಂ ಭವಾಂಭೋಧಿಯೊಳ್ (ಆದಿಪು. ೯-೬೦); ಅರ್ಧಚಕ್ರವರ್ತಿಯಾಗಿ ಭೋಗಂಗಳನುಂಡು ಮತ್ತಂ ಸಂಸಾರಚಕ್ರದೊಳ್ ತೊಟಲ್ದು ಕಡೆಯ ತೀರ್ಥಕರನಕ್ಕುಂ (ಚಾವುಂಪು. ೫೧); ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯). ೩. ಸುಳಿದಾಡು; ಸಂಚಲಿಸು; ಹೊಳೆ: ಸುಭದ್ರೆಯ ರೂಪು ಕಣ್ಣ ಪಾಪೆಯಂತೆ ಕಣ್ಣೊಳೆ ತೊಟಲೆ (ಪಂಪಭಾ. ೪-೬೯ ವ); ಕಣ್ಣೊಳ್ ತೊಟಲ್ವಂದದಿಂದಾ ನಿದ್ರಾಂಗನೆ ಸೂಟಿಗ್ಗಿವಂದಳಿರುಳೊಳ್ ತತ್ಫೇಚರಾಧೀಶನಾ (ಶಾಂತಿಪು. ೫-೮೧); ಪ್ರಿಯೆಯ ಭಂಗಿ ತೊಟಲ್ದಪುದೆನ್ನ ಚಿತ್ತದೊಳ್ (ಶೃಂಗಾರ. ೩-೩೮); ಎನ್ನ ಚಿತ್ತಮಂ ನೋಯಿಸೆ ಕಣ್ಗಳೊಳ್ ತೊಟಲು ತಿರ್ದಪನಂಗಜಂ (ಬಂಹರಿ. ೮-೫೫); ೭ಲಸುವ ಮೆಯ್ಯುಮಾಗುಳಿಸು ವಾನಸಮುಂ ನಯದಿಂ ತೊಟಲ್ವ ಕಣ್ಮಲರುಂ (ಪುಷ್ಪಪು. ೪-೧೫). ಪೆಣ್ಣು ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ವಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೪೨ ವ); ೪. ಗಸ್ತು ತಿರುಗು; ಪಹರೆ ಮಾಡು: "ಗರವಟಿಗೆವಂದಂಗೆ ಮತಿಗೆಟ್ಟವಂಗಂ ತೊಟಲ್ದುದೆಂದೆಂಬ ನಾಮಂ" (ಸಂಜೀವ. ೧೪); ರವಿಕಿರಣನಿಕರದ ತೆಱದಿಂ ತೊಟಲುತ್ತುಮಿರ್ಪ ದಂಡಕನೆಂಬಾ ತಳಾಱಂ ಕಂಡು (ಧರ್ಮಾಮೃ. ೨-೧೨೭). ೫. ಹೋಗು; ಗಮಿಸು; ನಡೆ: ಇಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದವಾನೆಗಳ್ (ಬಾಧಪು. ೪-೮೨). ೬. ಸುತ್ತಾಡಿ ಪ್ರಚಾರ ಮಾಡು: ಆತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊಟಲ್ವ ಗೋಸಣೆಯುಂ . . . ಅರಸಂ ಕೇಳ್ದು (ವಡ್ಡಾರಾ. ೫೦-೨೨). ೭. ಹುಡುಕು; ಶೋಧಿಸು: ಕುರುಡರ್ಕುರುಡರ ಬಟೆಯಂ ಪರಿಪರಿದುಂ ತೊಟಲ್ವತೆಱದೆ (ಸಮುಪ.೧೦-೧೮೪); ಎಣ್ಬಟ್ಟೆಗಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ... ಒಂದೊಂದು ದೆಸೆಗೆ ಪೊಱಮಟ್ಟಾಗಳ್ (ದಶಕು. ೪-೧೯). ೮. ಕಷ್ಟಪಡು; ಹಿಂಸೆಪಡು; ಸಂಕಟಗೊಳ್ಳು: ಮನದೊಳ್ ತೊಟಲುತ್ತಂ ತಾಂ ಮನವೊಲ್ಲದೆ ತನಗೆ ಸೇವಮೊಂದೆನು ತೊರೆದಳ್ (ಕಾದಂಉ. ೫೦); ಮೂಱುಂ ಭುವನದೊಳಂ ತೊಟಲುತಿರ್ಪ ಜೀವಾವಳಿಯಂ ಭುವನಾಗ್ರಕ್ಕೆಯ್ದಿಸುವರ್ತವತವಗೆ ಪಿರಿಯರಾ ಮಹಾತ್ಮರೆ ಜೈನರ್ (ಸಮುಪ. ೪-೯೫); ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦); ಮೃಗಾವಳಿ ತೃಷೆಯಿಂ ತೊಟಲ್ದು ಪರಿತಾಪಮನೈದೆ ವನಾಂತರಾಳಮಂ ಬಳಸಿ ದವಾನಳಂ ಬಳಸಿತುಷ ಮರೀಚಿಮರೀಚಿಸಂಚಯಂ (ಉದ್ಭಟ. ೯-೮೪); ಎರೆವರ್ ತಮ್ಮಯ ಬಡತನದಿರವಿಂಗೆ ತೊಟಲ್ವರ್ (ದಶಕು. ೬-೧೧೫); ಈ ಪರಿಯ ತೊಟಲುತ್ತುಮವಸರದೊಳಾನ್ ತಳ್ವಿ ಬಿಡುವಾಗಿ ಪರಿದೆನ್ (ಅಂತಿಗೊ. ೧೧-೨೧೩). ತೊಳಲ್$_1$: ೧. ಅಱಿಸಿ ತೊಳಲಿದರಿಲ್ಲ . . . ತಪಸ್ಸು ಮಾಡಿದರಿಲ್ಲ ಅದು ತನ್ನ ತಾನಹ ಕಾಲಕ್ಕಲ್ಲದೆ ಸಾಧ್ಯವಾಗದು (ಮಹಾದೇ. ಬ. ೬೪-೧೫೭); ಕೂಡ ಹಡೆಯದೆ ತೊಳಲ್ವ ನವಿಲ ತಂಡಂಗಳಂ . . . ನೋಡುತುಂ ಕೊಂಡಾಡುತಿರ್ದನಾ ವನದೊಳಗೆ (ನಂಬಿರ. ೫-೧೦೫). ಸತತಮುಂ ಕಾಲು ನಿಲ್ಲದೆ ತೊಳಲ್ವ ಸೂರ್ಯನು ದೈವವೆಂತಹನು (ಬಸಪು. ೫೪-೧೨); ಬನದೊಳು ಬೇರು ಬಿಕ್ಕೆಯನಱಸಿ ತೊಳಲ್ದುದು ಸಾಲದೇ (ಕುಮ್ಯಾವಿ. ೯-೪೦); ಅಱಸಿ ಕಾಲ್ಗೆಱಗುವೆನೆನುತೆದ್ದು ತನು ತರಹರಿಸುತೆ ತೊಳಲ್ದಳಾಲಯವ (ಮೋಹತ. ೨೭-೪೯). ೨. ತ್ರೇತೆಯಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದಱಸುತಿರನೇ (ಬಸಪು. ೫೪-೩೯); ಶಿವಪದವನಱಿಯದ ತೊರ್ಳಲ್ವರಿಂತು ಭವಾರ್ಣವದೊಳ್ (ಪದ್ಮರಾ. ೧೧-೧೭೭). ೫. ನೆಳಲ ನುಂಗಿದ ಮಾತ್ರದಿಂದ ಬಾನೆಡೆಯೊಳಂ ತೊಳಲಲಾದುದು ಪದಂ (ವಂಕಾರಾ. ೫-೧-೫೭). ತೊಳಲ್ಲು$_1$: ೧. ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮಹಾದೇ. ಬ. ೪೩-೧೦೦); ಆಗಮಂಗಳ ಹಿಂದೆ ತೊಳಲದಿರು ತೊಳಲದಿರು (ಆದವ. ೨೧-೫೫); ತೊಳಲಿದನು ಮಧ್ಯಾಹ್ನ ಮೊದಲಾಗಿ ಕಡೆಹಗಲ ತನಕ (ಹಚಕಾ. ೧೧-೧೪); ವನಿತೆ ನಿಮ್ಮೊಡನೆಂತು ತೊಳಲುವಳನವರತ (ಕುಮ್ಯಾಸ. ೧೭-೬೨); ನಿಮ್ಮಾಜ್ಞೆಯೊಳು ಲೋಕಂಗಳ ತೊಳಲಿದೆಂ (ಚಬಪು. ೩-೭); ಬಹುದೇಶಂಗಳ ತೊಳಲಿ . . . ಮಣಿಪುರಕೆ ನಡೆತಂದನು (ಜೈಮಿಭಾ. ೧೭ ಸೂಚನೆ). ೨. ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು (ಕಾವ್ಯಸ. ೬೩); ಆ ಮಿಾನ ನುಂಗಿದುದು ಬಳಿಕೊಂದು ಮಿಾನದಂ ಮತ್ತೊಂದು ಮಿಾನನ್ನುಂಗಿತಾ ಮಿಾನ ನುಂಗಿತೊಂದು ತೊಳಲುತೊಂದೊಂದನೊಂದಿಂತು ನುಂಗಲ್ (ಜೈಮಿಭಾ. ೬-೮); ಯುಪಮುಖಸರಸಿಜದೊಳ್ ನೃಪನ ಕಣ್ಗಳೀಂ ತೊಳಲೆ [ಪಾಠಾಂ. ಗಿ]ದವೋ (ರಾಜಶೇ. ೪-೧೧೫). ೭. ಅವನನಱಸಿದ ನಿರುತ ಮಾರುತತನಯ ಕಾಣದೆ ಹಳ್ಳವನು ತೊಳಲಿ (ಸಂಭಪ. ೨೩-೭೭); ಮದುಮಗಂ ಕಾಣದಿರಲು . . . ಕೆರೆ ಕುಂಟೆಗಳನೆಲ್ಲ ತೊಳಲಿ ಪೊನ್ನಂಗೆ ದೊರಕಿದುದಳಲ ಪಾಲು(ಕಾಲೂರ. ೧೭೯-೪೦೫). ೮. ಹಿರಿದಾಗಿ ಮನದಲಿ ತೊಳಲಿದಿರಿ (ನಳಚ. ೨-೪೭); ಕಾಲುಗಂಜಿಗಳಲಿ ತೊಳಲಿ ಕೂಲಿ ಮಾಡಿ ಉಂಬ ಹೆಣ್ಣು . . . ಬಂದಳು (ಕವಿಸೂ. ೪೧-೯); ಹಲವು ಯೋಜನೆಗಳ ಸುಳಿಯಲ್ಲಿ ಸಿಕ್ಕಿ ಅವಳು ತೊಳಲುತ್ತಿದ್ದಳು (ತ್ಯಾಗಮ. ೧೬೪); ಹೇಗಾದರೂ ಆಸೆ ಫಲಿಸೀತೋ ಏನೋ ಎಂಬ ಕನಸಿನಲ್ಲೇ ತೊಳಲುವರು (ಶಿಕ್ಷದ. ೬೬೭). ತೊಟಲು: ೨. ತ್ರಿಪಿಷ್ಟನರೇಂದ್ರಂ ಭವಮಾಲೆಯೊಳ್ ತೊಟಲಿಯುಂ ತಾನಂತ್ಯತೀರ್ಥೇಶನಪ್ಪನುಮೆಂದಾ ಭರತಂಗೆ ಪೇಟ್ದನೊಲವಿಂ (ಶಾಂತೀಶ್ವ. ೨-೬೫).

[ದೇ. ॥ ತಮಿ. ಚುಟಲ್; ಮಲ. ಚುಟಲು; ತುಳು. ತುಲಿಪು, ತುಲಿಯು, ಸುಲಿಪು; ತೆಲು. ಸುಡಿಯು]

**ತೊಟಲ್$_2$, ತೊಳಲ್$_2$** (ನಾ). ೧. ಸುತ್ತಾಟ; ತಿರುಗುವಿಕೆ: (+). ೨. ದಿಗ್ಭ್ರಮೆಗೊಳ್ಳುವಿಕೆ; ತಬ್ಬಿಬ್ಬಾಗುವುದು: (+). ತೊಳಲ್$_2$: ೨. 'ಕಣ್ದೊಳಲ್$_3$' ಪರಾ. ೩. ಬವಣೆ; ದುಃಖ; ಚಿಂತೆ: ಕಣ್ಣನೆನ್ನ ಕಣ್ಣಲಿ ನೆಟ್ಟು . . . ತೋಡಿದಳು ತೊಳಲ (ಹೊಂಗಳು. ೧೭-೧೭). [< ತೊಟಲ್$_1$]

**ತೊಟಲಿ** (ನಾ). ೧. ಸುತ್ತಲೂ ತಿರುಗುವಿಕೆ. 'ಕಣ್ಣಂದೊಟಲಿ' ಪರಾ. ೨. = ತೊಟಲಿಕಲ್ ೧.: ಕಾಯ್ದ ಶೃಂಖಲೆಗಳಿಂದಾಳಿಸಿಯುಂ ತೊಟಲಿಯೊಳ್ಪೀಸಿಯುಂ ಎಣ್ಣೆಯೊಳ್ಕಾಸಿಯುಂ . . . ಇಂತನೇಕ ಪ್ರಕಾರಂಗಳಿಂ ಪೀಡಿಸಿ (ಪಸಾರ. ೧೪೯). [ತೊಟಲ್$_1$ + – ಇ$_3$]

**ತೊಟಲಿಕಲ್, ತೊಳಲಿಕಲ್ಲು, ತೊಟಲಿಕಲ್ಲು** (ನಾ). ೧. ಮರ ಅಥವಾ ಕಲ್ಲಿನಿಂದ ಮಾಡಿದ ಬತ್ತ ಒಡೆಯುವ ಕಲ್ಲು; ಬತ್ತ ಬೀಸುವ ಕಲ್ಲು;

ಒಡೆಗಲ್ಲು : "ತೊಟಲಿಕಲ್ಲೆನಲ್ ಸಂಘಟಿಗೆ ನಾವುಮಕ್ಕುಂ" (ಸಂಜೀವ. ೫) ; ಪಟಿಯಿಗೆ, ತೊಟಲಿಕಲ್ [ಪಾಠಾಂ. ತೊಟರಿಕಲ್] (ಶಬ್ದಾನು. ೧೪೦ ವ್ಯಾಖ್ಯಾ). ೨. "ತಿರುವುವ ಗುಂಡು" (ಪ್ರಭಣ್ಣ). ತೊಳಲಿಕಲ್ಲು : "ತೊಳಲಿಕಲ್ಲು = ಭತ್ತ ಒಡೆಯುವ ಕಟ್ಟಿಗೆ ಕಲ್ಲು" (ಜ್ಞಾನಕೋ. ೬೮).

**ತೊಟಲಿಕಲ್ಲು :** ೧. ಕೊಡಲಿ ಕತ್ತಿ . . . ತೊಟಲಿಕಲ್ಲ ಅಸುವೆಕಲ್ಲು ಕಲ್ಲೊರಳು ಕಲ್ಲೊನಕೆಯೆಂದಿವು ಮೊದಲಾಗೊಡೆಯುವಂ ಮೊದಲನೆಯ ಅನರ್ಥದಂಡವಕ್ಕುಂ (ಪಸಾರ. ೬೧೩). [ ತೊಟಲಿ$_1$ + ಕಲ್$_3$ ]

**ತೊಟಲಿಕಲ್ಲು** 'ತೊಟಲಿಕಲ್' ನೋ.

**ತೊಟಲು** 'ತೊಟಲ್$_1$' ನೋ.

**ತೊಟಲ್ಕೆ, ತೊಳಲಿಕೆ, ತೊಳಲ್ಕೆ** (ನಾ). ೧. ಅಲೆದಾಡುವಿಕೆ : ಸುತ್ತಾಟ : ಚತುರ್ಗತಿಭ್ರಮಣರೂಪದಿನನೇಕಕ್ಲೇಶಂಬಡುವ ಜೀವರಾಶಿಯ ತೊಳ[ಟ]ಲ್ಕೆಯುಂ ಸಂಸಾರಮೆಂಬುದು (ಪಸಾರ. ೫೩೬). ತೊಳಲಿಕೆ : ೧. ತಿಳಿಗೊಳನ ತಂಪಗಿವ ತೆಕ್ಕೆಯ ತೊಳಲಿಕೆಯ ತಾವರೆಯ ತನಿಪರಿಮಳದ ಎಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೭-೩). ೨. ಗಸ್ತು ತಿರುಗುವಿಕೆ ; ಪಹರೆ : ಗರವೊಟ್ಟಿಗೆಯ ತೊಳಲಿಕೆ ತೆರಳಿಚಿತು ತೆತ್ತೀಸು ಕೋಟಿಗಳ (ಕುವ್ಯಾಆ. ೨೦-೫೬) : ಪಾಳಯವು ಗಜಬಜಿಸೆ ತೊಳಲಿಕೆಯಾಳು ನೆರೆದುದು (ಕುವ್ಯಾದ್ರೋ. ೮-೪೪). ೩. ತೊಳಲಾಟ; ಬವಣೆ: ಮಱುಗಿದನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ (ತೊರರಾ. ೬-೨೯-೩). ತೊಳಲ್ಕೆ: ಹುರಿ ಮಣಲೆ ಭರವಸಮುಂ ತೊಳಲ್ಕೆಯುಂ ಬಳಲ್ಕೆಯುಂ ಕಾಳೆಗದೊಳಿಗಮುಂ ಕನಿಸಿನೊಳಮಿಲ್ಲೆನಿಸಿ (ಎಕ. XI, ಮೊಳಕಾ. ೨೦-೪೨; 1278 ?). [ತೊಟಲ್$_1$ + – ಕೆ]

**ತೊಟಲ್ಚು, ತೊಳಲಿಚು** (ಕ್ರಿ). ೧. ತಿರುಗುವಂತೆ ಮಾಡು ; ಸುತ್ತಾಡಿಸು ; ಅಂಗನೆ . . . ಎಟ್ಟಿರುತ್ತಿರೆ ಜನಂ ಕಂಡೆಯ್ದೆ ವಿಭ್ರಾಂತಿಗೊಂಡಿರಲಂತಂತೆ ತೊಟಲ್ಚಿ ವಿದ್ಯೆಗಳನಂಗಾಗಾರದತ್ತೊಯ್ಯೆ (ನೇಮಿಪು. ೮-೫೮) ; ವೇದೋದಯಮುಖೀಕೃತಮಂದೇದೊರೆಯನುಮಂ ತೊಟಲ್ಚುಗುಂ ಸಂಸೃತಿಯೊಳ್(ವರ್ಧಪು. ೧೩-೨೦); ಅಮಿತಶ್ರಮದಲ್ಲಿಯಳ್ಕಾಡೆ ತೊಟಲ್ಚಿ ತೂಳ್ದು ಕಡುಪಿಂ ಕೆದಱಿಟ್ಟ ಮಹಾಂಧಕಾರಮಂ ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ (ಕುಸುಮಾ. ೧೦-೧೩). ೨. ಪ್ರಕಟಿಸು ; ಸಾರು : ಪೊಟಲೊಳಗೆಲ್ಲಂ ಗೋಸನೆಯಂ ತೊಟಲ್ಚಿ [ಪಾಠಾಂ. ತಗುಳ್ಚಿ]ದೊಡೆ (ವಡ್ಡಾರಾ. ೭೮-೪). ತೊಳಲಿಚು : ೧. ಅಳಿಯನನು ಕಾಣದೆ ವಿದರ್ಭನು ತೊಳಲಿಚಿದನನುಚರರ ನಾನಾ ಹಳುವದಲಿ ಹಳ್ಳಿಯಲಿ (ತೊರರಾ. ೩-೨-೧೬). [ ತೊಟಲ್$_1$ + – ಚು$_1$ ]

**ತೊಟಲ್ತರ್** (ಕ್ರಿ). ಸುತ್ತಾಡಿ ಬರು ; ಅಡ್ಡಾಡು : ಮೃಗಯಾವ್ಯಾಜದಿನೊರ್ಮೆ ಶಂತನು ತೊಟಲ್ತರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ಕುಂದದ ಮುಗುಳ್ಗಳುಮಸುಗೆಯ ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟಲ್ತಂದಪುವು ತಮಾಳಲತೆಗಳೆಂದಮರರ್ ನೋಡೆ ಚರಿಯಿಪರ್ ವನಚರಿಯರ್ (ವರ್ಧಪು. ೧೦-೧೯). [ ತೊಟಲ್$_1$ + ತರ್ ]

**ತೊಟಿಸು$_1$, ತೊಳಸು$_2$** (ಕ್ರಿ). ೧. (ನೀರನ್ನು) ಕದಡು ; ಅಲ್ಲಾಡಿಸು ; ಕಲಕು : ಆಟೋಪದಿಂ ಪೊಕ್ಕು ಸಾಗರಮಂ ಕೂಡೆ ತೆರಳ್ಚಿದಂ ತೊಟಿಸಿದಂ ತುಳ್ಕಾಡಿದಂ (ಜಗವಿ. ೭-೧೮). ೨. (ಸೌಟಿನಿಂದ ಸಾರು ಮೊದಲಾದುವುಗಳನ್ನು) ತಿರುಗಿಸು ; ತಿರುವು ; ಗೊಟಾಯಿಸು : ಬ್ರಹ್ಮಾಂಡವೆಂಬ ಕೊಪ್ಪರಿಕೆಯ ಮಧ್ಯದಲ್ಲಿ . . . ಮಾಸಋತುಗಳೆಂಬ ಸಟ್ಟುಗದಿಂ ತೊಟಿಸುತ್ತುಂ ಭೂತಂಗಳಂ ಜವನಡುತಿರ್ದನಿಂತೆಂಬುದೆ ವಾರ್ತೆ (ಪಂಚತಂ. ೬೫-೫) ; ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಹೆಂಡತಿ ತಾಂ ತೊಟಿಸುತ್ತ ಮೂಳೆಯೊಳ್ (ಧರ್ಮಾಮೃ. ೧೧-೧೮೨) ; ಅಂತಕ್ಕಿಯಂ ಪೊಯ್ದು ತೊಟಿಸಿ ಕುದಿ ಬರಲೊಯ್ಯನೆ ಮೇಲುರ್ಬಿದ ನೊರೆಯಂ ತೆಗೆದು ಬಿಸುಟು (ದಶಕು. ೧೨-೧೨೧ ವ). ೩. ಹೊಟ್ಟೆ ಕಲಕು; ಓಕರಿಕೆ ಬರುವಂತಾಗು : (+). ೪. ಕ್ಷೋಭೆಗೊಳ್ಳು ; ಕ್ಷೋಭೆಯುಂಟಾಗು : ಅಂಗನೆಯಂ ಪಿಡಿದೊಯ್ದರೆಂದು . . . ಪುಯ್ಯಲ ಗಾವಳಿ ಕೆಯ್ಯನಿಟ್ಟುದೀ ತೊಟಸಿದ ಪಾಂಗೆ ಕಿಟ್ರಿಲೆ ಕಿಟಿಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೬೩). ೫. ಹುಟ್ಟುಹಾಕು; ದೋಣಿ ನಡೆಸು: ನೆತ್ತರ ತೊಱೆಯಂ ಮರುಳ್ತೊಟಸಿ ಪಾಯಿಸುತಿರ್ದುವು (ಪಂರಾವಿಜ. ೧೩-೬೬). ತೊಳಸು$_2$ : ೨. ಎಲ್ಲರ ಹೆಂಡಿರೂ ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸುವುದಿಲ್ಲ (ಸರ್ವವ. ೬೪-೩೪೨) : ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುವ್ಯಾದ್ರೋ. ಓರಿಇ. ಪರಿ. ೨೮೨) ; ಕುದಿ ಬಂದಾಗ ಒಮ್ಮಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಪಶಾ. ೧-೪೦) ; ೩. ವಾಂತಿ ಬರೋ ಹಾಗೆ ಆಗುಲ್ಲ. ಹೊಟ್ಟೆ ತೊಳಸುಲ್ಲ (ಮನೋಸಂ. ೫೮); ಅವನಿಗೆ ಹೊಟ್ಟೆ ತೊಳಸಿ ಬಂತು (ದಾದಾನ. ೭೨). ೬. ಸುತ್ತಾಡು; ಅಲೆ : ತೊಳಸದಿರು ಬ್ರಾಹ್ಮ್ಯವನು ಭಕ್ತಿಸ್ಥಳವು ಬೇಱೆಯೆ ಮಾರ್ಗವಹುದಿದು ತಿಳಿದು ನೋಡಾ ದರ್ಶನಂಗಳೆನಲ್ಕೆ (ಬಸಪು. ೩-೭೧); ಆ ನೃಪತಿಳಕನ ವಾಗ್ವೈಭವಕ್ಕೆ ಮೂಱುಂ ಜಗಮಂ ತೊಳಸಿದೊಡೊರ್ವನೆ ಸಮನಾಗುಳಿದುದಱಿಂ ಶೇಷನೆನಿಪನಿನ್ನುಂ ಶೇಷಂ (ಧರ್ಮನಾ. ೩-೨೮). ೭. ಬಳಸು ಮಾತಾಡು; ಸುತ್ತು ಮಾತಾಡು : ತೊಳಸಲೇನೂರ್ವಸಿಗೆ ಜನಿಸಿದ ಅಲಘುಮುನಿ ಮಾತಂಗನೆಂಬಗ್ಗಳೆಯನುದ್ಭವಿಸಿದನಲಾ ಮಾತಂಗಿಯುದರದಲಿ (ಬಸಪು. ೫೭-೭೨). ೮. ಕಾದಾಡು; ಎದುರಿಸು: ಅಱಿದೆನಱಿದೆನೆಂದು ಮಱವೆಯ ತೋಟಿಯ ತೊಳಸುತ್ತ (ಮೋಳಿವಾ. ೧೭೫-೬೬೦). ೯. ಕೀಳು ; ಕಳಚು (?) : ಕಾಳುಗೆಡೆದರೆಯಗ್ನಿಯಾದರು ಕೀಳುವರು ನಾಲಿಗೆಯ ಕೃತಕವ ಮೇಳಯಿಸಿದರೆ ಸುರಪನಾದರು ಕಣ್ಣ ತೊಳಸುವರು (ಶಂಕದಾ. ೯-೬೪) : "ಕುಟ್ಟು" (ಶಂಕದಾ. ಕೋಶ).

[ ದೇ.॥ ತಮಿ. ತುಟಿ, ತುಟಿ$^3$, ತುಟಾವು. ಚುಲವು ;
ಮಲ. ತುಟಿಯು ; ತುಳು. ತುಳಾವು, ಸುಲಾವು ]

**ತೊಟಿಸು$_2$, ತೊಳಸು$_4$** (ನಾ). ೧. ಸುತ್ತಲೂ ತಿರುಗುವಿಕೆ ; ಪರಿಭ್ರಮಣ : (+). ೨. (ಮನಸ್ಸಿನ) ಅಲೆದಾಟ ; ಚಂಚಲತೆ : (+). ತೊಳಸು$_4$ : ೩. (ಕಣ್ಣು) ಹೊರಳುವುದು : ಮುಚ್ಚಿರ್ಪ ಕಣ್ಗಳಂ ತೆರೆದು ತೊಳಸಿನ ಬೆಳ್ಪು ಚುಚ್ಚಿ (ಕಾಲೂರ. ೧೭೩-೩೮೮). ೪. ಘರ್ಷಣೆ; ತಿಕ್ಕಾಟ : ಅಱಿಯದುದನಱಿದಲ್ಲಿ ಮಱೆದು ಮಱೆದುದನಱಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗದ ಅಂಗ ಕರತಳಾಮಳಕವಾಯಿತ್ತು (ಮೋಳಿಮಾ. ೯೩-೩೬೯) ; ಬಳಿಕೆಮಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುವ್ಯಾಸ. ೨-೧೮). ೫. ತೊಡಕು ; ಸಿಲುಕಿಕೊಳ್ಳುವಿಕೆ ; 'ತೊಳಸುಗೊಳ್ಳು' ಪರಾ.

ತೊಳಸಾಗು = ಗೊಂದಲಗೊಳ್ಳು ; ಕೆಡು : ಯಮನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣೆನವನಿಯ ಹೊರೆಗೆ ಹರಿವುಗಳ ಮನದೊಳನುಸಂಧಾನವಂತಕತನುಜನಲಿ ತೊಳಸಾಯ್ತು ತೋಟಿಯ ನೆನಹು (ಕುವ್ಯಾಉ. ೬-೭). ತೊಳಸುಮೆಳಸು = ಗೋಜು ; ಸಿಕ್ಕು : ತಿಳಿಯ ಬಾರದು ಖಳರ ಕುಟಿಲದ ತೊಳಸುಮೆಳಸು (ಅಂಬಿಕಾ. ೩೦-೧೭).

[ <ತೊಟಿಸು$_1$ ]

**ತೊಟ್ಟುಕುತ್ತು** (ನಾ). (?) : ಒಕ್ಕಲುಳಿದುಣ್ಣು ಕಾದುವೊಂಗಿದು ಕಣ್ಗಟ್ಟು ತೊಟ್ಟುಕುತ್ತುವೆ [ಕ್ಕೆ] (ಮೈಆರಿ. ೧೯೩೦, ೩೬-೧೦ ; ಸು. 800).
[ ಇದು 'ತೋಳ್ಕುತ್ತು' ಎಂಬುದರ ಅಪಲಿಖಿತವಿರ ಹುದೆ ? ]

**ತೊಟ್ಟಾಳ್, ತೊಳ್ತಾಳ್ (ಕ್ರಿ).** ತೊತ್ತು ಮಾಡಿ ಆಳು ; ಪ್ರಭುತ್ವ ನಡೆಸಂ : ಸಿರಿಯಂ ನೀನುಯ್ದು ತೊಟ್ಟಾಳ್ದು [ಪಾಠಾಂ. ಳು] ರಾಗದಿನೆನ್ನೊಳ್ ಸುಕವಿರ್ಪುದು (ಪಂಪಭಾ. ೮-೬೬). **ತೊಳ್ತಾಳ್ :** ನೀನೆ ಆಳ್ಮಾಡಿಕೊಳಲಲ್ಲೆನಲ್ ಬಪ್ಪುದೇ ನೀನೆ ತೊಳ್ತಾಳ್ವ [ಪಾಠಾಂ. ತ್ತಾಳ್ವ, ತ್ತಾಳ್ದ]ಡಿನ್ನಲ್ಲೆನಲ್ ಬಪ್ಪುದೇ (ನಂಬಿರ. ೭-೧೫೦).

[ ತೊಟ್ಟು + ಆಳ್$_1$ ]

**ತೊಟ್ಟು, ತೊತ್ತು, ತೊರ್ತು, ತೊಳ್ತು (ನಾ).** ೧. ದಾಸಿ ; ಸೇವಕಿ : "ಪೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಟ್ಟು" (ಹಲಾಯು. ೮೧-೩೩೫); ತೊಟ್ಟಿನುಟಿದಂತುಟಿದ ಮಹಾಪುರುಷರಜಿಯ ಮುಟಿದರೆ ಸಿರಿಯಂ (ಕವಿರಾ. ೩-೧೭೫) : ಧರೆಯಂ ಪಟಿಕೆಯ್ದು ತೊಟ್ಟಿನುಟಿವಂತುಟಿದಿಂ ಸಾಮ್ರಾಜ್ಯಲಕ್ಷ್ಮಿಯಂ ಚಕ್ರಧರಂ (ಆದಿಪು. ೯-೮೭) ; ನಿನ್ನ ತೊಟ್ಟಿರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದೆ (ಶಾದಂಪೂ. ೯೨೪) ; ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ ತೊಟ್ಟಿನ ಪೆಸರ್ ಸಿರಿಯ ದೇವಿಯೆಂಬಂತೆ (ಧರ್ಮಾಮೃ. ೮-೧೭೬). ೨. ದಾಸ ; ಸೇವಕ : ತೊಟ್ಟೆಂದು ದಾಸನುಂ ದಾಸಿಯುಮಕ್ಕುಂ (ಶಮದ. ನ. ೩೩ ಪ್ರಯೋ). ೩. ಹಾದರಗಿತ್ತಿ ; ಜಾರೆ: ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು ತನ್ನಾಳ್ದಿಚ್ಚೆಯ ರಪ್ಪ ಬಧಿರೆಯರ್ಗಂ ಮೆಲ್ಲನೆ ಪೇಟ್ದುದು (ಧರ್ಮಾಮೃ. ೨-೪೯). **ತೊತ್ತು :** ೧. "ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪); ಎಲೆ ತೊತ್ತೆ ನಿನಗಿನಿತು ಸಾಮರ್ಥ್ಯವನಾರ್ಮಾಡಿದರ್ (ಪಂಚತಂ. ೧೫೫-೩) ; ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳು (ಮಹಾದೇ. ಬ. ೭೯-೧೯೪) ; ಹೆತ್ತ ತಾಯುಂ ಮಾಱಿ ತೊತ್ತ ಕೊಂಬರೆ (ಹಚಕಾ. ೮-೭೬). ೩. ತೊತ್ತೇರಿಗುಂಟು ತಾಟಕಿಗುಂಟು ಹೆತ್ತ ತಾಯಿ ಗಿಲ್ಲವೀ ಕಾಲ (ಪುರಂದ. ೧-೧೨೦-೨). 'ತೊತ್ತುಬಡಿಕ', 'ತೊತ್ತುಬುದ್ಧಿ' ಪರಾ. **ತೊರ್ತು :** ೧. ಆ ದೇವರ ತೊರ್ತ್ತು (ಎಪಿ. XIII, ೩೨೦-೩೦ ; 1126). **ತೊಳ್ತು :** ೧. ಮೃಡ ತಾಂ ಭಿಕ್ಷವ ಬೇಡನೇ ಮಱಜೆ ತಾಂ ತೊಳ್ತಾಗಳೆ . . . ನರರ್ ಪೂರ್ವದೊಳ್ ಪಡೆದಪ್ಪುಣ್ಣದೆ ಪೋಪರೇ (ಸೋಮೇಶ. ೩೨) ; ತೊಳ್ತಿಗೆ ಚಮ್ಮವಟ್ಟಿಗೆವಿಡಿದಂತೊಡ್ಡಿದೊಡ್ಡಣದ ಕಡುಗಲಿಗಳನು ಕೈದೆತ್ತದಂದದಿ ಹುಯ್ಯದೊಡೆ ಪಂಥವಲ್ಲಿಯದೆಮಗೆ (ನೇಮಿಸಂ. ೨೯-೬) ; ವರವಿಳ್ದು ನಿಮಗೆ ತೊಳ್ತುವೆ ಬಿಡಿ ಮರುಳ್ತನಂ (ಮಹಾವಿ. ೬-೩೬). ೨. 'ಗಂಡುದೊಳ್ತು' ಪರಾ.

ತೊತ್ತಿನ ಕೂಸು = ದಾಸಿಯ ಪುತ್ರ; ಸೂಳೆಯ ಮಗ : ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೭) ತೊತ್ತಿನ ತೊತ್ತು = ಸೇವಕನ ಸೇವಕ : ನಿಮ್ಮ ತೊತ್ತಿನ ತೊತ್ತು ನಾನು (ಜನ್ನವ. ೫. ೨೭-೬೦). ತೊತ್ತಿನ ಮಗಳು = ದಾಸಿಯ ಪುತ್ರಿ ; ಕೀಳು ಸೇವಕಿ : ಮನೆಯ ತೊತ್ತಿನ ಮಗಳ ಮಕ್ಕಳಿಗಿನಿತು ವುಂ ಸರಿಯಾಗದೆನ್ನವನಿಯೊಳುತ್ತಮ ಭಕ್ತೆ ನಾನೆಂದಾತ್ಮದೊಳು ನೆನೆದು (ಬಸಪು. ೪೮-೨೭) ; ತೊಲಗು ತೊತ್ತಿನ ಮಗಳೆ ಮುಟ್ಟದಿರಿಳೆಯ (ತೂರರಾ. ೧-೧೧-೧೩). ತೊತ್ತು ತೊಡಿಕೆ = ಸೇವಕಿಯಂತೆ ಹೊಂದಿಕೊಂಡಿರುವವಳು : ಹೆತ್ತಯ್ಯನ ಮನೆಯಾ ತೆತ್ತಿಗಳು ನಾನಲ್ಲ ತುತ್ತಿನಾಸೆಗೆ ಬಂದಾ ತೊತ್ತು ತೊಡಿಕೆಯಲ್ಲಾ (ಶ್ರೀಕೃಪಾ. ೩೫). ತೊಟ್ಟಿನ ಮಗ, ತೊತ್ತಿನ ಮಗ = ದಾಸಿಯ ಮಗ : "ಗೋಪ್ಯಃ, ದಾಸೀಸುತಃ–ಈ ೨ ತೊಟ್ಟಿನ ಮಗಂ" (ಹಲಾಯು. ೩೨-೩೪೭) ; ತೊಟ್ಟಿನ ಮಗನಧ್ಯಯನಮ ಬಾಟಿತ್ತೆ ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ ಬಾಟಿತ್ತೆ ನಿನಗೆಂದಟಲ್ದಳ್ (ಶಾಂತಿಪು. ೬-೬೪); ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ (ಪುರಂದ. ೨-೧೧-೧). **ತೊಟ್ಟಿರ್, ತೊತ್ತಿರು (ಬಹುವ) :** ಎನ್ನ ಪರಿವಾರಮನ್ನ ತೊಟ್ಟಿರೆನ್ನ ಮಾಣಿಕಭಂಡಾರಂ . . . ಎಂದಿವ ಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ವಡ್ಡಾರಾ. ೧೪೦-೨೧) ; ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವೆನೇ (ಪಂಪಭಾ. ೧೦-೪೫) ; ಕಾದಿದ್ದರಯ್ಯ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅವಚಂ. ೨೭೭-೧೨೧೦) ; ನಾವಿನ್ನು ನಿಮ್ಮ ಶ್ರೀಪದಾಂಬುಜನಿತ್ಯಸೇವೆಯೊಳೋಪ ತೊತ್ತಿರ ತೊತ್ತಿರಾಗಿರಲು (ಬಸಪು. ೩೨-೪೬) ; ರಂಭೆಯೂರ್ವಶಿ . . . ಮೊದಲಾದ ಸುರಸತಿಯರೆನ್ನರಮನೆಯ ತೊತ್ತಿರುಗಳಾದರು (ಕುಮ್ಮಾಳ. ೧೩-೬೫).

**ತೊಟ್ಟುಮಾಡು** = ಸೇವಕನನ್ನಾಗಿಸು : ಎನ್ನಾನೆಯಿಂದೆ ಪಗೆಗಳ ಬೆನ್ನೆಲ್ವಂ ಮೆಟ್ಟಿ ಮುಱಿಸಿ ಸಪ್ತಾಂಗದ ಸೊಂಪನ್ನನಗೆ ತಂದು ಕುಡದೊಡೆ ನಿನ್ನಹಿತನ ಮನೆಗೆ ತೊಟ್ಟುಮಾಡುವುದೆನ್ನಂ (ದಶಕು. ೭-೫೦).

[ ದೇ.II ತಮಿ. ತೊಟುತ್ತ್ಯಿ, ತೊತ್ತು; ಮಲ. ತೊಟಿಲ್ = ಕೆಲಸ ; ತುಳು. ತೋಳಿಲ್ = ಕೆಲಸ, ಉದ್ಯೋಗ ; ತೆಲು. ತೊತ್ತು ]

**ತೊಟ್ಟುಗೆಲಸ, ತೊತ್ತುಗೆಲಸ, ತೊಳ್ತುಗೆಲಸ (ನಾ).** ಸೇವೆ ; ಊಳಿಗ : ಓರ್ವ ಸೊರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೊೞಮಡುವ ಸೂಟಿಳ್ (ಪಂಚತಂ. ೦೭೯-೪). **ತೊತ್ತುಗೆಲಸ :** ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ (ಬಸವ. ೪೧೧) ; ಎಂಬತ್ತು ವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸಪು. ೨೭-೬೨) ; ಅರಸುಮಗಳನಾ ತೊತ್ತುಗೆಲಸಕ್ಕೆ ಪರುಠವಿಸಿದಿರೆ (ಕುಮ್ಮಾಳ. ೧೯-೩೩) ; ಹೊತ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ (ಸಮ್ಯಕ್ತ್ವ. ೫-೨೨). **ತೊಳ್ತುಗೆಲಸ :** ಲೋಕವನಗಿವ ಕಾಲನೆಂಬ ದರ್ವೀಕರನ ದಾಡೆಯುಂ ಕಿಳ್ತವಧಿವಿಧಿಗಳಿ ವರ್ಗೆ ತೊಳ್ತು [ಪಾಠಾಂ. ತ್ತು] ಗೆಲಸವನಿತ್ತು (ಪದ್ಮರಾ. ೨-೧೭ .)

[ ತೊಟ್ಟು + ಕೆಲಸ ]

**ತೊಟ್ಟುಗೊಡು, ತೊತ್ತುಗೊಡು, ತೊಳ್ತುಗೊಡು (ಕ್ರಿ).** ಪರಿಚಾರಕನನ್ನಾಗಿಸು; ಸೇವೆಗೆ ತೊಡಗಿಸು,–ಇಡು: ರಾಗೋದಯಮನ್ನನೋವ ದೆಟಿದೊಯ್ದೆಂ ತೊಟ್ಟುಗೊಟ್ಟಪ್ಪೆ (ಕಾದಂಬ. ೮೧). **ತೊತ್ತುಗೊಡು :** ತನುವನೀಶ್ವರಂಗೆ ಹಿಂಗದೊಪ್ಪಿಸುತ್ತ ತೊತ್ತುಗೊಟ್ಟು (ನಮರ. ದೇ. ೧೯೬-೧೨). **ತೊಳ್ತುಗೊಡು :** ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ (ರಕ್ಷಾಶ. ೭೪). [ ತೊಟ್ಟು + ಕೊಡು$_1$ ]

**ತೊಟ್ಟುಗೊಳ್, ತೊತ್ತುಗೊಳ್, ತೊಳ್ತುಗೊಳ್ (ಕ್ರಿ).** ಊಳಿಗಕ್ಕೆ ಇಟ್ಟುಕೊಳ್ಳು ; ಸೇವಕನನ್ನಾಗಿ ಮಾಡಿಕೊಳ್ಳು : ದೆಸೆವೆಂಡಿರ್ಗೆ ಪಸದನಂಗೈದು ಬರ್ದಿಲವೆಣ್ಗಳಂ ತೊಟ್ಟುಗೊಂಡರ್ (ರಾಮಾಶ್ವ. ೧೪-೩೭). **ತೊತ್ತುಗೊಳ್ :** ನಿನ್ನ ಕರುಣದ ಬಲವುಂಟೆನಗೆಂದು ಸಾಯಿದೇವನ್ನಂ ಬಲು ಸಲೆ ತೊತ್ತುಗೊಣ್ಡ ದಯಕೇಂ ಸಲೆವುಂಟೆ (ಸೌಇಇ.IX-1, ೨೪೭-೬೦; 1177) ; ದೇವ ಸಂಸಾರಂ ನೆಱೆ ಪುಗದ ಮುನ್ನ ನೀನೆಂದು ಬಂದೆನ್ನಂ ತೊತ್ತು[ಪಾಠಾಂ.ಳ್ತು]ಗೊಂಬೆಯೆಂಬುಮ್ಮಳಿಕೆಯಿಂದಳುವಂದದಿಂ (ನಂಬಿರ. ೨-೧೦). **ತೊಳ್ತುಗೊಳ್ :** ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ . . . ಕಂಡೆಂ ವಿರೂಪಾಕ್ಷನಂ (ಪಂಪಾಶ. ೩೬). [ ತೊಟ್ಟು + ಕೊಳ್$_1$ ]

**ತೊಟ್ಟುತನ, ತೊತ್ತುತನ (ನಾ).** ಸೇವೆ ; ಊಳಿಗ ; ಪರಿಚರ್ಯೆ : ನಿಜಜೀವಿತಮುಮಂ ತನ್ನುಮನಿರದಿತ್ತು ತೊಟ್ಟುತನಮಂ ತಾಂ ಕೊಂಡುಂ (ಕಾದಂಬ. ೧೧೪). **ತೊತ್ತುತನ:** ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು ತನ್ನನೀವ ಕೂಡಲಸಂಗಮದೇವ (ಬಸವ. ೦೪೪) ; ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು (ಸಂಭಪ. ೫-೪೬). [ ತೊಟ್ಟು + – ತನ ]

**ತೊಟ್ಟುತೊಡರ್** (ನಾ). ಗುಲಾಮಗಿರಿಯ ಬಂಧನ; ದಾಸ್ಯಶೃಂಖಲೆ : ತೊಟ್ಟುತೊಡರಿನಿಱುಕಿಯನ್ನನಿಱಿಯುತಿರ್ಪವನ್ (ಬದ್ಮಪ್ರ. ೧೧-೨೦೭).
[ ತೊಟ್ಟು + ತೊಡರ್$_2$ ]

**ತೊಟ್ಟುವೆಸ, ತೊತ್ತುವೆಸ, ತೊರ್ತುವೆಸ** (ನಾ). ಊಳಿಗ ಸೇವೆ : ನೀಮನಗೆಡೆಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ (ಪಂಪಭಾ. ೯-೮೧); ಲವಣಾರ್ಣವದ ನಿಖಿಳ ವಸ್ತುಗಳಂ ಕಸ್ತೂರಿ(ಸಿ) ವಿಸ್ತಾರಿಸಿ ಪೆಸರ್ವೆ ಸರೆೊಳೆ ಪೇಟ್ಟಿವಟಯ್ಸೆ ವರತನು ತೊಟ್ಟುವೆಸನಂ ಪೂಣ್ದಾಳಾದಂ (ಶಾಂತಿಪು. ೧೧-೧೦ವ) ; ಇನ್ನನ ಸುಸತ್ವಗುಣಸಂಪನ್ನನ ಸತಿಗೆನಗೆ ತಗದು ತೊಟ್ಟುವೆಸಂ (ನೇಮಿಪು. ೧೩-೩೮) ; ನನ್ನ ಈ ಕಡುಕಷ್ಟಂಗಳನ್ ನಿನ್ನ ಈ ತೊಟ್ಟುವೆಸಕಾಗಿ ಮಾಱಿಾಡೆ ನಾನ್ (ಬದ್ಮಪ್ರ. ೫೧-೧೧೧೩). **ತೊತ್ತುವೆಸ:** ಆಂ ತೊತ್ತುವೆಸದೊಳಿಪ್ಪೆಂ (ಬಂಪರಿ. ೯-೨). **ತೊರ್ತುವೆಸ.** 'ತೊರ್ತುವೆಸಗೆಯ್' ಪರಾ. [ ತೊಟ್ಟು + ಬೆಸ$_1$ ]

**ತೊಟ್ಟುವೆಸಗೆಯ್, ತೊರ್ತುವೆಸಗೆಯ್** (ಕ್ರಿ). ತೊತ್ತಿನ ಕೆಲಸವನ್ನು ಮಾಡು : ಊಳಿಗಮಾಡು : ತೊಟಿತ್ತಿ ತೊಟ್ಟುವೆಸಗೆ[ಪಾಠಾಂ. ಕೆ]ಯ್ ಪೋ ಪೋಗು ನೀನೆಂದು ಬಯ್ದು (ಪಂಪಭಾ. ೭-೫). **ತೊರ್ತುವೆಸಗೆಯ್:** ತೊರ್ತುವೆಸಗೆಯ್ಕದ ಮಂಡಲನಾಥರಿಲ್ಲ (ಎಇ. XIII, ೪೪-೩೦; 1112).
[ ತೊಟ್ಟುವೆಸ + ಕೆಯ್$_1$ ]

**ತೊಟ್ಟುಟಿ, ತೊತ್ತಳ, ತೊತ್ತಳಿ, ತೊತ್ತಟಿ, ತೊತ್ತುಟಿ, ತೊಳ್ತಳ** (ನಾ). ೧. ನುಗ್ಗುನುರಿ ; ಆಜಿಗಿಜಿ ; ಅಸ್ತವ್ಯಸ್ತವಾದ ಸ್ಥಿತಿ : "ತೊಟ್ಟುಟಿ (ತೊಟ್ಟುಟಿ) = ಸೊಪ್ಪಾದುದು" (ಶಮದ. ಪರಿ. ೧) ; "ಸೊಪ್ಪಾದುದು ತೊಟ್ಟುಟಿ" (ಕರ್ಣಾನಿ. ೭೮). ೨. ತುಳಿತ; ತುಳಿಯುವಿಕೆ : ಆದಟರ ಚೆನ್ನಪೊಂಗರ ಸಬಂಗಳ ತೊಟ್ಟು[ಪಾಠಾಂ. ತ್ತು]ಟಿಯೊಳ್ ತೊಡಂಕಿ ನಿಲ್ಲದೆ (ಪಂಪಭಾ. ೮-೧೦೪); ಪರ್ವಿದಾ ಪಡೆಯ ತೊಟ್ಟುಟಿಯಿಂ ಗಿಡು ಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪೆರ್ವಯಲಾಯ್ತು (ಪುಷ್ಪಪು. ೫-೪೬). ೩. (ಆಲಂ) ಸ್ವಾಧೀನಪಡಿಸಿಕೊಳ್ಳುವಿಕೆ ; ಆಕರ್ಷಿಸುವಿಕೆ : ತೊಟ್ಟುಟಿಯುಮುಗಿಯುಂ ಬಗಿಯುಂ ಮಾಡಿ ಮನಮನಱಿ ಸೆಱಿವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುೞುಗಾಡುತ್ತುಂ (ಶಾಂತಿಪು ೨-೨೨ ವ). **ತೊತ್ತಳ :** ೧. 'ತೊತ್ತಳತಂಳಿ' ಪರಾ. ೪. ರಭಸ; ವೇಗ : ಬಿರುಗಾಳಿಯ ತೊತ್ತಳದೊಳು ಬಂಡೆ ಬಂಡೆ ಬಡಿ ಬಡಿಯಲು (ನಡಬಂ. ೬೮-೭). **ತೊತ್ತಳಿ :** ೧. 'ತೊತ್ತಳಿಗೊಳ್' ಪರಾ. **ತೊತ್ತಟಿ:** ೧. 'ತೊತ್ತಟಿದುಟಿ' ಪರಾ. **ತೊತ್ತುಟಿ :** ೨. ನೋಡಿರೆ ಕರ್ಣನಿತ್ತ ಕನಕೋತ್ತರರಾಶಿಯನಂದು ವಂದಿಗಳ್ ನಾಡೆಯುಮೆಯ್ದೆ ಪೊತ್ತಡಕಲಾಱದೆ ಮಿಕ್ಕೊಡೆ ರಾಶಿಗೆಯ್ದಿರಲ್ ಕೂಡೆ ಮದೇಭರಾಜಿಘಟಕೋಟಿಯ ತೊತ್ತುಟಿವೊಲ್ಲದಲ್ಲಿ ಬಿಟ್ಟೋಡೆ ನೆಲಂ ಸುವರ್ಣಮಯುಮಾದುದು ತಚ್ಛಿಬಿರಾಂತರಾಳದೊಳ್ (ನೇಮಿಪು. ೧೦-೧೧೫). ೫. ಬಿಗಿತ : ಸವಿ ತಲೆಗಾದುದೀಯಧರದಿಂ ಪುಳಕಾಂಕುರ ಮಾಯ್ತುಮಾಯ್ತು ಮೆಯ್ಗುವಳ ಕುಚಕ್ಕೆ ಕರ್ಕಶತೆ ಜೀವನಮಾಯ್ತುಟಿ ದಂತಿರೆನ್ನ ಬಾಯ್ಸ್ವವರದೊಳೆನ್ನ ತೋಳ್ವೊಣರ ತೊತ್ತುಟಿಯೊಳ್ ಕಡಿಕೆಯ್ದುವಿಂತು ಬಟ್ಟುವೆ ಪೊಣರ್ವೆನ್ನುರೋಹಶಿಯೊಳೆಂಬವೊಲೀಕ್ಷಿಸು ತಿರ್ದ ನಲ್ಲನಾ (ಲೀಲಾವ. ೧೩-೩೧). **ತೊಳ್ತಳ :** ೧. 'ತೊಳ್ತಳಂದುಳಿ' ಪರಾ.

**ತೊಟ್ಟುಟಿಮಾಡು** = ನುಗ್ಗುನುರಿ ಮಾಡು ; ಅಸ್ತವ್ಯಸ್ತಗೊಳ್ಳುವಂತೆ ಮಾಡು : ರಿಪುಸೇನೆಯಂ ತುಱಿದು ತೊಟ್ಟುಟಿಮಾಡುವೆಂ (ಪಂಪಭಾ. ೧೩-೪೪) ; ಜಿನರಾಜಂ ವನವಾರಿಕೇಳಿ ವಿಭವಂ . . . ಶ್ರೀಯುಂ ಮದೀಯ ಪ್ರಿಯಾಬ್ಜಿನಿಯುಂ ತೊಟ್ಟುಟಿ ಮಾಡಿ ಕೀಲ್ಪಡಿಸಿದಂ (ಅನಂಪು. ೭-೫೬). [ <ತುಱಿ$_1$ ]

**ತೊಟ್ಟುಟಿದುಟಿ, ತತ್ತಟಿದುಟಿ, ತೊತ್ತಳಂತುಳಿ, ತೊತ್ತಳಂದುಳಿ, ತೊತ್ತಳತುಳಿ, ತೊತ್ತಳದುಳಿ, ತೊತ್ತಟಿಂದುಟಿ, ತೊತ್ತಟಿದುಟಿ, ತೊಳ್ತಳಂದುಳಿ, ತೊಱ್ತುಳಿದುಳಿ, ತೋರ್ತಳದುಳಿ** (ಕ್ರಿ). ಪುಡಿಯಾಗುವಂತೆ ತುಳಿ ; ನುಗ್ಗುನುರಿಯಾಗುವಂತೆ ತುಳಿ ; ಸೊಪ್ಪಾಗುವಂತೆ ಮಾಡು; ಮುದ್ದೆಯಾಗುವಂತೆ ಮಾಡು: ಸುಪ್ರತೀಕ[ಂ]ಕೆಯ್ಕ ಕಾಲ ಕೋಡೇಱಿನೊಳ್ ಬಲಮನೆಲ್ಲಂ ಜವನೆ ಜಿವುಟಿದುಟಿವಂತೆ ತೊಟ್ಟುಟಿದುಟಿದು (ಪಂಪಭಾ. ೧೧-೭೨ ವ) ; ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ಟುಟಿದುಟಿದು ಬಂದಳೆನಿಸಿ (ವರ್ಧಕ್ಷ. ೭-೯ ವ). **ತತ್ತಟಿದುಟಿ :** ನಾಡಂ ದಾಟಿಟ್ಟು, ಒಳ್ಳಿದರಂ ಪೊರೆದು, ಕೂಟರಂ ತತ್ತಟಿದುಟಿದುಂ, ಬರ್ಕಮಾತನಡಿಯಾಣತಿಯೊಳೆ ಸೇನೆ (ರಾಮಾಶ್ವ. ೧೨೦-೭). **ತೊತ್ತಳಂತುಳಿ:** ಒತ್ತಿದ ಜಗಳಕ್ಕೆ ಸುತ್ತ ಮುತ್ತಿಗೆಯಾಗಿ ತೊತ್ತಳಂತುಳಿದು ಕೊಲುವಾಗ ಉಳುವೆಯ ಕರ್ತ ಬಾದಾನು (ಸರ್ವಜ್ಞ. ೧೦೫೨). **ತೊತ್ತಳಂದುಳಿ :** ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳಂದುಳಿದು ತಾಂಡವರೂಪಮಂ ಧರಿಸಿ ಕುಣಿವುತಿರೆ (ಚಬಪು. ೨೦-೩೨) ; ಧರೆಯೊಳಗುಳ್ಳ ಬಲ್ದೊರೆಗಳೆಲ್ಲ . . . ಪರಿತರೆ ತೊತ್ತಳಂದುಳಿದನಪ್ರತಿಮಂ (ಅಪ್ರತಿ. ೨೭-೨೧). **ತೊತ್ತಳತುಳಿ:** ಬುಧಜನಾಧಾರಂ ತೊತ್ತಳತುಳಿವಂ (ಬೊಂಕಶಾ. ೧೯೩೪, ಬಂಕಾಪುರ. ೩-೧೨ ; 934) : ಅಧೈರ್ಯ, ಭಯ, ಹೆದರಿಕೆ ತೊತ್ತಳತುಳಿದವು (ಕೆಕೆಂಡ. ೧೩೮). **ತೊತ್ತಳದುಳಿ :** ಮಲೆವತ್ಯುದ್ವಿರೌತ್ತರಂ ತೊತ್ತಳದುಳಿದು ನಿಜ ಪ್ರಾಜ್ಯಸಾಮ್ರಾಜ್ಯಮಂ ತೋಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ (ಎಕ. II, ೧೩೨-೨೨ ; 1123) ; ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ (ಶೂನ್ಯಸಂ. ೧೫೦-೨೧); ತೊತ್ತಳದುಳಿದನರಿನಳಿನವನಮಂ ಬಸವ ಕುಂಜರನು (ಬಸಪು. ೫೯-೫೪) ; ಕದಳಿಯನು ಮದಕರಿಯು ತೊತ್ತಳದುಳಿದವೊಲು (ಕುವ್ಯಾಭೀ. ೪-೬೩) ; ವರ ಜಿತೇಂದ್ರಿಯರ ತೊತ್ತಳದುಳಿದ ಧೀರೋದಾತ್ತ ಜಯಯೆಂದು ಚಿತ್ತಜನನು ಹೊಗಳಿದರು (ಮೋಹತ. ೧೬-೮). **ತೊತ್ತಟಿಂದುಟಿ :** ಕೋಪಾಟೋಪದಿಂ ತೊತ್ತಟಿಂದುಟಿಯಲ್ಕೆಟ್ಟಿರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತಂ (ಮಹಾನಿ ೬-೧೯) ; ಪಾರ್ವನಂ ತೊತ್ತಟಿಂದುಟಿದರ್ (ಚಿಕವಿ. ೬-೧೦೯) : ತುಱುಗೆಱಿಯುವನಂ ತೊತ್ತಟಿಂದುಟಿದು ಬೆಂಗಳೂರವನಂ ಭಂಗಂಬಡಿಸಿ (ಚಿಕವಂ. ೫೭-೧೨). **ತೊತ್ತಟಿದುಟಿ :** ಹೀನಬಲನನಧಿಕಬಲಂ ತೊತ್ತಟಿದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨) ; ಕೊತ್ತಾಗಾಲಮಂ ತೊತ್ತಟದುಟಿದು (ಚಿಕವಿ. ೨-೨೯); ದುಱುದುಂಬಿಗುದುರೆ . . . ಪೊಕ್ಕು ಪೊಱದೋಂಟಮಂ ತೊತ್ತಟಿದುಟಿದು ಪಾಟಿಗ್ಗಿಡಿಕುಂ (ರಾಮಾಶ್ವ. ೧೫೨-೧೩). **ತೊಳ್ತಳಂದುಳಿ:** ಅಖಿಳ ಜೀವರಂ ತೊಳ್ತಳಂದುಳಿದುಬ್ಬುತ ವಾರಾಹನಿಂತು ಕೋಲಾಹಲಂ ಮಾಡಿ (ವೀಶೈಪು. ೩-೧೧-೧೭). **ತೊಱ್ತುಳಿದುಳಿ:** ಕಲಿ ತೊಱ್ತುಳಿದುಳಿದಿಕ್ಕೆ ಪರೆಯ ಭಾನೂದಯದೊಳ್ಕತ್ತರ್ಲೆಯುನ್ತಿರೆ ರಿಪುಗಳ್ಕತ್ತರ್ಲೆವೆಸರಾದು ದಾತನೊಕ್ಕಲ್ವೆಸರುಂ (ಸೌಇಇ. XI-i, ೪೫-೫; 980). **ತೋರ್ತಳದುಳಿ:** ಕಾಲ್ದುಳಿಯೊಳಳಿಱಿಾಗೆ ತ್ರೋತ್ರ್ತಳದುಳಿವಂ ರಣರಂಗಭೈರವಂ ಗೋವಿನ್ದ (ಸೌಇಇ. XX, ೮೭-೨೮; ?). [ ತೊಟ್ಟುಟಿ + ತುಟಿ$_1$]

**ತೊಟ್ಟುಪಟ್ಟಿ, ತೊಳ್ಪುಟ್ಟಿ** (ನಾ). ದಾಸಿಯ ಪುತ್ರ ; ತೊತ್ತಿನ ಮಗ : ಎಱಿಪೋಗು ದೂತನಪ್ಪನ ಬೆಟ್ಟಿನ ನುಡಿಗೇಳ್ದು ಮುಳಿಯಲಾಗದು ನೀನುಂ ಮೆಟ್ಟಿಟ್ಟು ವಿದುರನೆಂಬೀ ತೊಟ್ಟುಪಟ್ಟಿಯ ಮನೆಯ ಕೂಟಿ ನುಡಿಯಿಸೆ ನುಡಿದೈ (ಪಂಪಭಾ. ೯-೫೮). **ತೊಳ್ಪುಟ್ಟಿ :** ಮೂರು ತಲೆ ತೊಳ್ಪುಟ್ಟಿ ತಾಯ ಮಗನೆಂದು (ಮೂರುನಾ. ೧೩೩-೧೧೧೬).
[ <ತೊಟ್ಟು + ಪುಟ್ಟು$_1$ + – ಇ$_3$ ]

**ತೊಟ್ಟುಪಟ್ಟು** (ನಾ). = ತೊಟ್ಟುಪಟ್ಟಿ: ನಾಲ್ಕುಂ ಗ್ರುಹಂ ನೀಚ ಶತ್ರು ನಿವಾಸಂಗಳೊಳಕ್ಕೆ ನವಾಂಶಕದೊಳೊಂದಿರ್ದಂದು ತೊಟ್ಟು[ಪಾಠಾಂ. ಪ್ಪು]ಟ್ಟು (ಜಾತತಿ. ೨೦-೨೦). [ <ತೊಟ್ಟು + ಪುಟ್ಟು$_2$ ]

**ತೋ, ತೊಯ್, ತೊಯ್ಯು, ತೋಯು** (ಕ್ರಿ). ತೋದ$_1$ (ಭೂತಕೃ) ತೊಯ್ದು, ತೋದು, ತೋಯ್ದು (ಭೂತಸ್ಯೂ). ೧. ತೇವವಾಗು; ನೆನೆ; ಹಸಿಯಾಗು: ಏನೆಂಬೆಂ ಬಾಲ್ಯದೊಳ್ ಮೇಲಲಟಿಯಿದ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋದಾ [ಪಾಠಾಂ. ತೊಯ್ದಾ] ನಾರೆಂದೇನುಮಂ ಭಾವಿಸದೆ(ರಕ್ಷಾಶ. ೪); ತೋದುದು ತೇರು ರಕ್ತದಲಿ (ಕುಮಾ್ಯದ್ರೋ. ೫-೫೫); ತೋದುದಂಬರತಳಂ ವಿಷದ ಲೋಳೆಗಳಿಂದೆ ತೀದುದಮರರ ಹರುಷವು (ಜೆಬಪು. ೪೩-೫೩); ಮಳೆಗಟಿದುದಿದೇತರ್ಕೆವೆಳ್ ತೋದೊಡೇ ಕುದ್ಯವಿಸಿತ್ತೋ ಪ್ರೀತಿ (ದಿವ್ಯಚ. ೭-೪೯); ಪಾದಪಗಳಡಿಗೆರೆಯೆ ಸಲಿಲವು ತೋದು ಕೊಂಬೆಗಳುಬ್ಬಿ ಪುಷ್ಪ ಸ್ವಾದುಫಲವೀವಂದದಲಿ (ಹಸಾರ. ೩-೧೩). ೨. ನೆನೆಯಿಸು; ಒದ್ದೆಮಾಡು: "ತೋ–ಆರ್ದ್ರೀಕರಣೇ (ನೆನೆಯಿಸು)" (ಶಮಧಾ); ಅರಗಿನರಮನೆಗುರಿಯಬಿಟ್ಟಂತರಚಿ ದಾನವ ವನಚರಂಗಳ ಸರಳ ಮಳೆಯಲಿ ತೋದನಸ್ದಿದನಮಮ ಮುಳುಗಿಸಿದ (ಕಾಶಿರಾ. ೩೨-೩೭). **ತೊಯ್**: ೧. "ತೊಯ್ (ತುಯ್)=ಸಾರ್ದ್ರತ್ವೇ" (ಶಮಧಾ); ಹಾಯ್ದು ಕರುಳಿನ ಮಿದುಳ ಜೋರಿನ ತೊಯ್ದ ರಕ್ತಾಂಬರದಿ ತಾನಿರಲ್ಕೆದಿ (ಕುಮಾ್ಯಕ. ೮-೪೦). ೨. ಹಳಮುಖನುಂ ಬೆಟಿಯನೆಣ್ಣೆ ಯೊಳ್ ತೊಯ್ದು [ಪಾಠಾಂ. ತೋದು]ನವಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ . . . ಕಿಚ್ಚಂ ತಗುಲ್ಚಿ (ಪದ್ಮರಾ. ೧೩೪-೬); ಕನಲ್ದ ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಪಂಪಭಾ. ೩-೭೧ ವ); ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದಟ್ಟಿ ಮಸಿಯೊಳದಟಿಳ್ ಪುದಿದತ್ತೀ ಲೋಕವಮಕ್ಕುಮೆನಿಸಿತ್ತಾ . . . ತಮಸಂ (ಕಾವ್ಯಾವ. ೭೩೫); ಪೊಸ ಮುತ್ತನಾಯ್ದುಮರ್ದಿನೊಳ್ತೊ ಯ್ದಂತೆ ನೇರ್ಪಟ್ಟ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪುವು (ಅನಂಪು. ೨-೧೪). **ತೊಯ್ಯು**: ೧. "ನೆನೆ = ತೊಯ್ಯು" (ಗಂಗಾಮ. ೧೯೦). **ತೋಯು**: ೧. ಬಿಸಜಾಕ್ಷಿಯರು ತೋಯ್ದು ಪೊಟಿಮಟ್ಟು ಬಂದಾಗ . . . ದೇಹಲಾವಣ್ಯಪರಿಪೂರ್ಣರಸ ಸುರಿವಂತಾದುದು (ಮೋಹತ. ೧೪-೫೭); ನೀನು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ (ಮಾನಸ. ೧೪-೧೫); ನೆಲವೆಲ್ಲಾ ಕಣ್ಣೀರಿನಿಂದ ತೋಯ್ದು ಹೋಗಿದೆ (ಮಹಾಲ. ೧೦೪).

[ ದೇ. ‖ ತಮಿ. ತೋಯ್; ಮಲ. ತೋಯು; ತೆಲು. ತೋಗು ]

**ತೋಂಟ, ತೋಟ$_1$** (ನಾ). ಹೂವು, ಹಣ್ಣು, ಕಾಯಿಪಲ್ಯೆಗಳು ಅಥವಾ ತೆಂಗು, ಅಡಿಕೆ ಮಾವು ಮೊದಲಾದುವುಗಳು ಬೆಳೆಯುವ ಭೂಮಿ; ಬಾಗಾಯತ ಭೂಮಿ: ಶ್ರೀವುರದಾ ದಣ್ಣಾಗಾಮುಣ್ಣರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೭೭; 776); ಕಟನಿ ಮತ್ತಂ ಮಣ್ಣೆಯೆಲರ ಕಟಿಯ ಕಟಗಣ ತೋಣ್ಟಮುಂ (ಎಕ. IX, ನೆಲಮಂ. ೬೦-೧೨೫; 797); ಕಳ್ಳಿಯುಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧); ಕುಟಿವಿಂಡು ಕಬ್ಬಿನ ಉಲಿವ ತೋಂಟ [ಪಾಠಾಂ. ಹೊಲ]ವ ಹೊಕ್ಕು ತಿಟಿನನಟಿಯದೆ . . . ಮೇದುವು (ಬಸವ. ೫೯೮); ಎಲರ್ಪೊಯ್ಲಿಂದೆಸೆವಿಕ್ಷುಕಾಂಡರಸದಿಂ ತೋಂಟ [ಪಾಠಾಂ. ನಾಂದಿ]ಕ್ಕೆ ತವ್ಮೊಳ್ ಪಳಂಚಲೆವೊಳ್ಗೊಂಚಲ ಕಾಯೊಳುಕರ್ಮವೆಳನೀರಿಂದಂ ಬನಂಗಳ್ಗಗುಂದಲೆ ನೀರೂಟಮಿದೇಕೆ (ವರ್ಧಪು. ೧-೪೩); ಕಂಡವರ್ ಕಾವಿಸೆ ಮಾಲೆಗಾಟಿರೊಸೆದೋವಿದ ಪೂವಿನ ತೋಂಟವೊಪ್ಪುಗುಂ (ಗಿರಿಕ. ೨-೬೦). **ತೋಟ$_1$**: ಗಳೆಯ ಮತ್ತರ್ ೩ ಬೆದ್ದಲೆ ಮತ್ತರ್ ೫ ಅಡಕೆಯ ತೋಟದಲು ವರ್ಷಕ್ಕೆ ಮರದಲೊಂದಡಕೆ ಎಲೆಯ ಸುಂಕ (ಎಕ. VII; ಶಿಕಾರಿ. ೨೦-೧೫; 1032); ನಾಡಿಲ್ಲದರಸುಂ ಫಲವಿಲ್ಲದ ತೋಟಮುಂ . . . ಒಪ್ಪಲಾರ್ಕುಮೆ (ಧರ್ಮಾಮೃ. ೧-೭೫); ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು(ಅಮಚಂ.೧೮೦-೮೦೨);ಮುಳಿದು ಕಬ್ಬಿನ ತೋಟದಲಿ ನರಿ ಹುಲಿಯಪೋಲ್ ಗರ್ಜಿಸಿತು (ಕುಮಾ್ಯಕ. ೦೩-೪೪); ಬನ್ನಿ ಓ ಬಾನಲೆವರೆ, ನಮ್ಮ ತೋಟಕೆ (ಅನಿಕೇ. ೨೦-೧); ತೋಟ ಮೂರು ಮೊಳ ಕಾಯಿ ಆರು ಮೊಳ (ಗಾದೆ).

[ ದೇ. ‖ ತಮಿ. ಮಲ. ತೋಟ್ಟ; ತುಳು. ತೋಟ, ತೋಟೊ; ಕೊಡ. ತೆಲು. ತೋಟ; ಗಡಬ. ತೋಂಟ ]

**ತೋಂಟಕಂಡ** (ನಾ). ತೋಟದ ಭಾಗ,–ತುಣುಕು: ಪೊಳೆವಡೆ ಪದಿಕೆರ್ಯಾಳಂ ಅರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ ಮಾರಿ ಬೆಟಿತಿಯಿಂ ಬಡಗಣ ಮಣ್ಣು (ಎಕ. IV, ಎಳಂದೂ. ೨೫-೭; ಸು. 925 ?).

[ ತೋಂಟ + ಕಂಡ$_1$ ]

**ತೋಂಟಖಂಡ** (ನಾ). = ತೋಂಟಕಂಡ: ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ ತೋಂಟಖಂಡಮುಮಂ (ಎಕ. IV, ಹೆಗ್ಗಡ. ೧೮-೩೩; 1057). [ ತೋಂಟ + ಖಂಡ ]

**ತೋಂಟವಾಳ, ತೋಟವಳ, ತೋಟವಾಳ** (ನಾ). ತೋಟದಲ್ಲಿ ಕೆಲಸ ಮಾಡುವವನು; ತೋಟಗಾರ. 'ತೋಂಟವಾಳತಿ' ಪರಾ. **ತೋಟವಳ**: ಬಿನ್ನಪಂಗೆಯ್ದ ತೋಟವ [ಪಾಠಾಂ. ವಾ]ಳಂಗೆ ಪಸಾಯನ ಮನಿತ್ತು (ರಾಜಶೇ. ೧೦-೫ ವ). **ತೋಟವಾಳ**: ಮೇಲಿನ 'ರಾಜಶೇ' ಪ್ರಯೋಗದ ಪಾಠಾಂತರವನ್ನು ನೋಡಿ. [ ತೋಂಟ + – ವಾಳ$_1$ ]

**ತೋಂಟವಾಳತಿ** (ನಾ). ತೋಟದಲ್ಲಿ ಕೆಲಸ ಮಾಡುವವಳು; ತೋಟಗಾರ್ತಿ: ಇತ್ತಲರಸಗೊರ್ವ ತೋಂಟವಾಳತಿ ಹೊಂಗೇದಗೆ ಹೂವ (ಸೊಬಸೋ. ೩-೪೬). [ ತೋಂಟವಾಳ + – ತಿ$_1$ (<– ಇತ್ತಿ) ]

**ತೋಂಟವಾಳಿಗ, ತೋಟವಾಳಿಗ** (ನಾ). = ತೋಂಟವಾಳ: ಪುರವ ಪೊಗದ ಮುನ್ನ ತೋಂಟವಾಳಿಗನದನೊರೆಯಲು ಯುವರಾಜ ಮುಳಿದು (ವರ್ಧಚ. ೩-೭೩). **ತೋಟವಾಳಿಗ**: ತೋಟವಾಳಿಗ ಪೇಳಲಂದಾ ಬಿಸವಂದ ವನೇ ನೋಳ್ಪೆನೆಂದು . . . ಪೊಟಿಮಟ್ಟ (ಶ್ರೀಪಾಲ. ೩-೦೭).

[ ತೋಂಟವಾಳ + – ಇಗ ]

**ತೋಂಟವೆಸ** (ನಾ). ತೋಟದ ಕೆಲಸ,–ಕಾರ್ಯ. 'ತೋಂಟವೆಸಂ ಗೆಯ್' ಪರಾ. [ ತೋಂಟ + ಬೆಸ$_1$ ]

**ತೋಂಟವೆಸಂಗೆಯ್** (ಕ್ರಿ). ತೋಟದ ಗಿಡ, ಮರಗಳಿಗೆ ಆರೈಕೆ ಮಾಡು; ತೋಟವನ್ನು ಕೃಷಿಮಾಡು: ಮಂದಾನಿಲಂ ತೋಂಟ ವೆ ಸ ಂ ಗೆ ಯ್ದ ಟ್ಟ ಟ ಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಲ್ಲಿಗಲ್ಲಂ (ಚಂದ್ರಪು. ೧-೮೭). [ ತೋಂಟವೆಸ + ಕೆಯ್$_1$ ]

**ತೋಂಟ$_1$** 'ತೋಟ$_1$' ನೋ.

**ತೋಂಟ$_2$** 'ತೋಟ$_2$' ನೋ.

**ತೋಂಟಿಗ, ತೋಟಿಗ** (ನಾ). ತೋಟದ ಕೆಲಸ ಮಾಡುವವನು: ಅಂತಃಪುರಕಾಂತಾಸಂತತಿಲತಾಪ್ರತಾನಮಂ ಜಲಧರ ಧಾರಾಂತಾಭಿಷೇಕದಿಂ ತಳಿದಂ ತೋಂಟಿಗನಂತೆ ಸಂತತಂ ಯುವರಾಜಂ (ಶಾಂತಿಪು. ೮-೩೭); ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿಪು. ೨-೩೦); ಕಳ್ಳಿಯುಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧); ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತದಾಳಿಂಬಗಳನೊಲವಿನಿಂ ತೋಂಟಗಂ ಕೊಟ್ಟನೋರ್ವಂ (ಕಬ್ಬಿಗಕಾ. ೮೮); ಲೋಗರ ಕಣ್ಣಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡ ರ್ಚಿದ ತೋಂಟಿಗನೊಂದಾಯತಿಯಂ ಕಂಡನಕ್ಕುಂ (ರಾಮಾಶ್ವ. ೮೫-೨೮).

**ತೋಟಿಗ :** ಸಮಸ್ತ ತೋಟಿಗರುಂ ಕೊನೆಕಾಱರು ವುಳಿಯ ಮೂನೂ ಱ್ವರುಮಿರ್ದ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX-1, ೧೪೧-೩೩; 1130) ; ಬಾಳೆವಣ್ಗೊನೆಯು ಕಾಣಿಕೆಯಿತ್ತು ಭೂವರಗೊರ್ವ ತೋಟಿಗ ನೆಂದ (ಸೊಬಸೋ. ೩-೧೦) ; ಬಳಿಕಲಾ ತೋಟಿಗನ ಬುದ್ಧಿಗೆ ತಿಳಿವ ತೀಡುವೆನೆನುತ ಮಿಗೆ ಕಂಗಳಿಗೆ ಕಟ್ಟಿದಿರಾಗುತಲಿ ಶರಣಾರ್ಥಿಯೆಂದೆನಲು (ಪ್ರಭುಲೀ. ೧೧-೭) ; ತೋಟ ತೋಟಿಗಗಾಸೆ ಕೋಟಿ ಮನ್ನೆಯಗಾಸೆ (ಸರ್ವಜ್ಞ. ೧೯೦೭) ; ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರೆನಿಮಿಷ (ಮಂಕುಕ. ೪೭೮). [ ತೋಂಟ + – ಇಗ ]

**ತೋಂಟಿಗವೆಸ (ನಾ).** ತೋಟಗಾರನ ಕೆಲಸ,–ಕಾರ್ಯ. 'ತೋಂಟಿಗ ವೆಸಂಗೆಯ್' ಪರಾ. [ ತೋಂಟಿಗ + ಬೆಸ$_1$ ]

**ತೋಂಟಿಗವೆಸಂಗೆಯ್ (ಕ್ರಿ).** ತೋಟಗಾರನ ಕೆಲಸ ಮಾಡು : ನನೆಯುಂಬಂ ನನೆಮಾಡಿ ಚಾಪಲತೆಯಂ ನೀಳ್ಕೇಕ್ಷುಗಳ್ಗಿತ್ತು ಕೇತನವಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದೆ (ಅನಂಪು. ೧೦-೨೨).
[ ತೋಂಟಿಗವೆಸ + ಕೆಯ್$_1$ ]

**ತೋಂಟಿಗಸಮಯ (ನಾ).** ತೋಟ ಮಾಡುವವನನ್ನು ನೇಮಿಸು ವುದಂ,–ಕರಾರು ಮಾಡಿಕೊಳ್ಳುವುದು : ಮೂಱು ಮತ್ತರ ತೋಂಟ ಮೊಂದದಂ ಜೈನಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯ ಮಿಲ್ಲದನಾರೋರ್ವ್ವರ್ಮ್ಮಾರ್ಪ್ಪರವರ್ಬ್ಬಸದಿಗೆ ಸಮಭಾಗಮಿಕ್ಕಿಯುಣ್ಬರ್ (ಸೌಇಇ. XI-1, ೫೨-೭೩ ; 1007).
[ ತೋಂಟಿಗ + ಸಮಯ ]

**ತೋಂಟಿಗೊಳ್ (ಕ್ರಿ).** ಯುದ್ಧಕ್ಕೆ ತೊಡಗು : ರಾಜನೃಪನೊಳ್ ತೋಂಟಿ ಗೊಳಲೆಂದು ಎಡದೊಱೆಯೆಂಬ ಗಡಿಗೋಂಟೆಯೊಳ್ ಕಟ್ಟಿರ್ದ ಮೋಘ ಪುಷ್ಪಮೆಂಬ ತೇಜಿಯಂ ಕಳವಿನಿಂದೆ ಕೊಂಡೊಯ್ವುದುಂ (ಚಿಕವಂ. ೫೦).
[ ತೋಂಟಿ$_1$ (<ತೋಟಿ$_1$) + ಕೊಳ್$_1$ ]

[ೞಿ] (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾನ್ತ ಭಾಗ ತತಃ ತೋಣ್ಡಗೆಱೆ ದಕ್ಷಿಣಾನ್ತ ಭಾಗಃ (ಮೈಆರಿ. ೧೯೪೨, ೭೫-೧೧೫ ; 812). [ ತೋಂಡಿ ? + ಕೆಱೆ ]

**ತೋಂಡಿ ಪರೀಕ್ಷೆ (ನಾ).** ಮೌಖಿಕ ಪರೀಕ್ಷೆ : ಮೌಖಿಕ ಪರೀಕ್ಷೆಗೆ ತೋಂಡಿ ಪರೀಕ್ಷೆ ಎಂದೂ ಹೆಸರಿದೆ (ರೂಢಿ).
[ ತೋಂಡಿ$_0$ ( ℙ ←ಮರಾ. ತೋಂಡೀ) + ಪರೀಕ್ಷೆ ]

**ತೋಕ (ನಾ).** ಮಗ ಅಥವಾ ಮಗಳು; ಸಂತಾನ : "ಸೂನುಃ, ಸಂತತಿಃ . . . ತೋಕಂ, ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೮೨-೩೪೩) ; ಬಿಜ್ಜಲೋರ್ವ್ವೀಶನ ತೋಕಂ ಸೋವಿದೇವಂ (ಸೌಇಇ. XV, ೧೪೨-೯ ; ?) ; ಘನಸಂಸಾರಸುಖಕ್ಕೆ ಸಾರಮಿದು . . . ಸುತಶಿರೋಜಾಘ್ರಾಣನಂ ಸೂನುಲೋಚನರೋಚಿಷ್ಪರಿಚರ್ಚೆ ತೋಕ ತನುಲಿಪ್ತಕ್ಷೋದ ಸಂದರ್ಶನಂ (ಕುಸುಮಾ. ೩-೫೮) ; 'ಜೀವತ್ತೋಕೆ' ಪರಾ. [ ಸಂ. ]

**ತೋಕಿಸು (ಕ್ರಿ).** ೧. ಹೊಡೆ ; ಪ್ರಯೋಗಿಸು ; ಬಿಡು : ಸಂಗರಕೆ ಬಿಲ್ಗೊಂಡು ಸರಳುಗಳ್ತೋಕಿಸುತಮತಿರಥರು ಪೊಕ್ಕು ಸೇನಾಜಲಧಿ ಯನ್ನೊರಸಿ (ತುರಂಗ. ೪೯-೪೧). ೨. ಬಾರಿಸು ; ಮೊಳಗು ; ಶಬ್ದ ವಾಗು : ಏಕಶಂಖಧ್ವನಿ ಥಡಾಳಿಸಲ್ಬರುತವಣೆಯಿಾ ಕ್ರತುವು ಮುಗಿದ ಪರಿಯುಂತರಮ್ಮೇಳುದಿನ ತೋಕಿಸಿತು ಪಗಲಿರುಳು (ತುರಂಗ. ೨೨-೪೭).
[ ತೋಕು$_1$ + – ಇಸು$_3$ ]

**ತೋಕು$_1$ (ಕ್ರಿ).** ೧. ಹೊಡೆ ; ಪ್ರಹಾರ ಮಾಡು ; ಪ್ರಯೋಗಿಸು : ತೋಕುವಂಬಿನ ಜೋದರೊಗ್ಗಿನೊಳೌಕಿದುವು ಸಾವಿರಮದೇಭಾನೀಕ ಬೊಬ್ಬೆಯ ಲಳಿಯು ತಾಕಿತು ಲಕ್ಕ ಪಾಯದಳ (ಕುವ್ಯಾಗ. ೧-೨೮) ; ಒಡನೆ ನೂಕಿತು ತೋಕುವಂಬಿನ ತಡೆವ ಶೂಲದ ಹೊಯ್ವ ಖಡ್ಗದ ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ (ತೊರರಾ. ೫-೬-೧೧); ತೋಕುತಂಬನು ರಥದಿ ಕಲಿಬಲನಾಕರಸಿ ಮುಂದುಬ್ಬಿ ಬೊಬ್ಬಿಡೆ (ಅಂಬಿಕಾ. ೧೪-೪೨) ; ಷಡ್ರಥರು ಸೊಕ್ಕಿ ಕೋಪಾಗ್ನಿಯಿಂ ತೋಕಿದರು ತನಿಸರಳ (ತುರಂಗ. ೫೨-೨೭). ೨. ಸುರಿಸು ; ವರ್ಷಿಸು : ತೋಕಿದವು ನಾರಾಚ ದೆಸೆದೆಸೆಯೊಕರಿಸಿದವೊ ಸರಳನೆನೆ (ಕುವ್ಯಾಅ. ೧೯-೧೩) ; ಮಾನವಸೂರ್ಯ ಛಾಪೆನುತ ತೋಕಿ ಪುಷ್ಪಾಂಜಲಿಯಲಮರಾನೀಕ ಕೈವಾರಿಸಲು (ನಿಭಾಗ. ೪-೧೦-೩೯) ; ಮರದ ಬುಡಕ್ಕೆ ನೀರು ತೋಕು ತ್ತಿದ್ದ ರಾಮನಾಥನನ್ನು ಕರೆದು . . . ಗುಡುಗಿದನು (ಮೂರುದಾ. ೩೩). ೩. ಹೊರಹಾಕು ; ಚೆಲ್ಲು ; ತುಳುಕು : ನೆಱೆ ತೋಕಿದನು ಗಂಧರ್ವ ಜಲಧಿಯನೊಂದು ನಿಮಿಷದಲಿ (ಕುವ್ಯಾಅ. ೧೯-೧೭) ; ಹೊದಱ ಹರೆಗಡಿ ದೌಕಿದನು ತೋಕಿದನು ಸುಭಟರ ಜೀವವನು (ಕುವ್ಯಾದ್ರೋ. ೧೭-೨೩) ; ಕುಹಕದಲಿ ಮಲೆತರೆ ತೋಕುವೆನು ತನಿಗರುಳ ರುಧಿರವ ಶಾಕಿನಿಯರಿಗೆ (ನಿಭಾಗ. ೩-೭-೪೧). ೪. ಅಲ್ಲಾಡು ; ಬೀಸು : ತೋಕಿದವು ಸೀಗುರಿ ಗಳೆಡಬಲದಾಕೆಯಲಿ (ಕುವ್ಯಾಸ. ೧೫-೬೬). ೫. ಓಡು ; ಚೆದುರು : ಬಲಜಲಧಿ ತೋಕಿದುದು ದೆಸೆದೆಸೆಗೆ ರಿಪುಬಲದ ಸುಭಟರಂ ನಾಕಮಂ ಕಾಣಿಸಿತು (ತುರಂಗ. ೪೯-೩೮).
[ ದೇ.॥ ತಮಿ. ತುಕ್ಕೈ, ತುವ್ವೈ ; ತುಳು. ತೊಯಿಪ್ಪು ; ಕುಯಿ. ತೋಗ ; ಕುರುಖ್. ತೋಕ್ನಾ ]

**ತೋಕು$_2$ (ನಾ).** ಕೋವಿ ; ಬಂದೂಕು : ಮಾದಪ್ಪ ಹೆಗಲ ಮೇಲೆ ತೋಕನ್ನು ಏರಿಸಿ ಸೊಂಟಕ್ಕೆ ವಡಿಕತ್ತಿಯನ್ನು ಸೆಕ್ಕಿಸಿ . . . ನರಿಬೇಟೆಗೆ ಹೊರಟ (ಹುಲಿಹಾ. ೧೭). 'ತುಪಾಕಿ' ಪರಾ.
[ದೇ.॥ ತಮಿ. ಮಲ. ತೋಕ್ಕು ]

**ತೋಕು$_3$ (ನಾ).** ಉತ್ಸಾಹ (?) : ಜಂಝಾನಿಲ ಸುಳಿದೇಳ್ವ ರಭಸಮೋ ಯೆನೆ ಕಾದಿದರ್ಕಲಿಗಳಿಗೆ ಪೊಸತೆನಲು ಹಾಣಾಹಣಿಯಿಂದಲುಚ್ಚಳಿಸಿದರ್ . . . ಗಜಗಳಿಂ ತುಳಿಸಿದರ್ ತೋಕಿನಿಂದ (ಲಕ್ಷ್ಮಛಾ. ೬-೩-೩೨).
[ ←ಮರಾ. ತೋಕ್, ತೋಖ್ ; ಹಿಂ. ತೋಖ್ ; ಅರ. ತೌಕ್./ಸಂ. ತೋಷ ]

**ತೋಕುಳಿ (ನಾ).** ೧. ನೆನೆಸುವಿಕೆ ; ಅದ್ದುವಿಕೆ : (*). ೨. ತೊಗಲು ಹದ ಮಾಡುವುದಕ್ಕಾಗಿ ನೆನೆಯಿಡುವ ಗುಳಿ : ಹರಳಯ್ಯಗಳ ತೋಕುಳಿಯ ನೀರ ತಂದು . . . ತಂಬುಗೆಗಳೊಳು ಮೊಗೆದು ಹರುಷದಿ ಮಧುವರಸಗೆಱೆಯಲು (ಪ್ರಭುಪು. ೯-೧೦೩) ; ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀನಲಸದೆ ಪುಟ್ಟಿಸಿದಂತೆ (ವೃಷವಿ. ೩೪-೧೧೮).
[ ತೋ + ಕುಳಿ$_2$ (<ಕುೞಿ$_2$) ]

**ತೋಕೆ** 'ಸೋಗೆ' ನೋ.

**ತೋಕೆಗೋಧಿ (ನಾ).** ಉದ್ದವಾಗಿರುವ ಒಂದು ಬಗೆಯ ಗೋಧಿ : ಓಟ್ಸ್, ತೋಕೆಗೋಧಿ (ಮೈಜಿಗಿ. ೧೦-೧೮೧) ; ತೋಕೆಗೋಧಿ, ಜವೆ ಗೋಧಿ, ರೈ ಎಂಬ ಚಿಕ್ಕ ಗೋಧಿ . . . ಇವು ಸಮಶೀತೋಷ್ಣ ವಲಯದ ಇತರ ಮುಖ್ಯ ಬೆಳೆಗಳು (ಭೂವಿವ. ೧೮೭).
[ ತೋಕೆ (<ಸೋಗೆ) + ಗೋಧಿ$_1$ (<ಗೋದುವೆ) ]

**ತೋಚಿಕೆ (ನಾ).** ತೋರುವಿಕೆ ; ಗೋಚರವಾಗುವಿಕೆ; ಹೊಳೆಯುವಿಕೆ; ಭಾಸವಾಗುವಿಕೆ : ಆ ಕತೆ . . . ರಂಜನೀಯವಾಗಬಹುದೆಂದು ಮನಸ್ಸಿಗೆ ತೋಚಿತು, ಆ ತೋಚಿಕೆಯ ಫಲವೇ 'ಕಡುಗಲಿ ಕುಮಾರ ರಾಮ' ಗ್ರಂಥದ ಪ್ರಕಟಣೆ (ನಂಜುಂಡ. iii, ಪ್ರಸ್ತಾವನೆ).
[ ತೋಚು + – ಇಕೆ ]

**ತೋಚು**(ಕ್ರಿ). ೧. ಗೋಚರವಾಗು ; ಕಾಣು ; ತೋರು : ನವೋನವದ ಜಾಗೃತಿಯಲಿದ್ದ ಜೀವಾಗ್ನಿ ತೋಚುತಿಹುದು (ಚೈತ್ಯಾಲ. ೭-೧೩). ೨. (ಮನಸ್ಸಿಗೆ) ಹೊಳೆ ; ಭಾಸವಾಗು : ಕೀಚಕನಾಡಿದ ನೀಚನುಡಿ ಕೇಳಿ . . . ಮುಂದೆ ತೋಚದೆ ಖಳನ ವಿಚಾರಿಸಿಕೊಳ್ಳೊ ಶ್ರೀ ಚಕ್ರಪಾಣೀ . . . ಎಂದು ನುಡಿದಳು (ವಾದಿಕೀ. ೬೫-೯) ; ಏನಗೇನು ತೋಚುವ ಪರಿಯ ಕಾಣೆನು (ಜಿನಭಾ. ೬೩-೩೭).

**ತೋಚಿಕೊಳ್ಳು** = ಭಾವಿಸಂ ; ಯೋಚನೆ ಮಾಡಂ : ವಶಃ- ಕಾಂತಿಃ ೨ ಮನಸ್ಸಿನಲ್ಲಿ ನೆನವುಂಟಾಗುವಿಕೆ : ತನ್ನೊಳಗೆ ತೋಚಿಕೊಳ್ಳುವಿಕೆ, ಬುದ್ಧಿಯಲ್ಲಿ ಸ್ಫುರಿಸುವಿಕೆ (ಸಿದ್ಧಾಂತಿ. ೩೦೭): ವೀರರಾಜ ಅದೇನು ತೋಚಿ ಕೊಂಡನೊ ಯಾವ ಪ್ರತಿಯನ್ನೂ ಹೇಳದೆ . . . ಸಾಗಿದನು (ಚಿಕರಾ. ೧೩೬).

[ <ತೋಟು + – ಚು$_1$./ತುಳು. ತೋಜು, ಸೋಜು; ತೆಲು. ತೋಚು ]

**ತೋಟ$_1$** 'ತೋಂಟ' ನೋ.

**ತೋಟ$_2$** 'ತೋಟಾ$_1$' ನೋ.

**ತೋಟಕ** (ನಾ). [ಛಂದ] ಪ್ರತಿ ಪಾದದಲ್ಲಿ ಹನ್ನೆರಡು ಅಕ್ಷರಗಳುಳ್ಳ ವೃತ್ತ ; : ಪವಮಾನ ಚತುಷ್ಕಯುತಂ ಯತಿಯುಂ ದಿವಸಾಧಿಪರೊಳ್ ನಿಲೆ ವಸ್ತು ಕವಿಪ್ರವರಸ್ತುತಮಪ್ಪುದು ತೋಟಕಮೆಂದವಧಾರಿಸು (ಛಂದೋಂಬು. ೨-೨೬). [ ಸಂ. ]

**ತೋಟಗಟ್ಟು** (ನಾ). ತೋಟದ ಪ್ರವೇಶ ಅಥವಾ ಸ್ಥಳ: ಬಿಟ್ಟ ಮೇಲು ಮಕ್ಕಿಯ ಗಡಿಯ ತೋಟಗಟ್ಟು ಕಮ್ಮ ೪೦೦ (ಸೌಇಇ. IX-1, ೯೫-೫೦; 1041); ಮನ್ನೆಯಗೇಜಿಯ ಕೋಡಿಯಿಂ ತೆಂಕ ತೋಟಗಟ್ಟು ಮತ್ತರೊಂದು ಆ ಕೆಜಿಯ ಕೆಳಗೆ ಗದ್ದೆ ಮತ್ತರೆರಡು (ಸೌಇಇ. IX-1; ೩೨೯-೫೩; 1200); ಮಂನೆಯಗೆಜಿಯ ಕೆಳಗೆ ಹಿರಿಯೂರಡೆಯರ ತೋಟಗಟ್ಟು ಮತ್ತರೆರಡು (ಸೌಇಇ. IX-1, ೩೩೩-೪೬ ; 1215).

[ ತೋಟ$_1$ (<ತೋಂಟ) + ಕಟ್ಟು$_2$ ]

**ತೋಟಗಾರ** (ನಾ). ೧. ತೋಟಮಾಡುವವನು ; ತೋಟಿಗ : ಆಶೆಗೆ ತಕ್ಕ ಹಾಗೆ ಮುತುವರ್ಜಿಯಿಂದ ಕೆಲಸ ಮಾಡುವ ತೋಟಗಾರರಿರಬೇಕು (ತರಬಿ. ೧). ೨. ತೋಟದ ಮಾಲೀಕ,–ಒಡೆಯ.

[ ತೋಟ$_1$ (<ತೋಂಟ) + – ಕಾರ$_1$ (<– ಕಾಱ ]

**ತೋಟಗಾರಿಕೆ** (ನಾ). ತೋಟವನ್ನು ಬೆಳೆಸುವುದಂ ; ತೋಟ ಮಾಡು ವುದಂ ; ತೋಟದ ಬೇಸಾಯಂ : ಮೈಸೂರುಸಂಸ್ಥಾನದಲ್ಲಿ ತೋಟ ಗಾರಿಕೆಯನ್ನು ಕುಲಕಸಬನ್ನಾಗಿ ಪಡೆದಿರುವ ಅಲ್ಪಸಂಖ್ಯಾತ ಪಂಗಡ ವೊಂದಿದೆ (ತರಬಿ. ೨). [ ತೋಟಗಾರ + – ಇಕೆ ]

**ತೋಟಗಾವಲ್** (ನಾ). ತೋಟವನ್ನು ಕಾಯುಂವುದಂ ; ತೋಟಕ್ಕೆ ಕಾವಲಾಗಿರುವಿಕೆ : ಪುಲ್ಗಳ ಪಸುರ್ಗೆಳಿಸಿ ಪೊಕ್ಕಡಾ ತೋಟಗಾವಲ್ಗೆ ತನ್ನೊಡನಾಡಿಗಳ ಕೂಡೆ ಲೀಲೆ ಮಿಗೆ ಬಿಲ್ಗೊಂಡು ನಡೆತಂದವಂ ಕಂಡ ನರ್ಚಿತ ಸುವಾಜಿಯಂ (ಜೈಮಿಭಾ. ೨೦-೫).

[ ತೋಟ$_1$ (<ತೋಂಟ) + ಕಾವಲ್$_1$ ]

**ತೋಟತುಡಿಕೆ** (ನಾ). ತೋಟ ಮತ್ತು ಅದಕ್ಕೆ ಸಂಬಂಧಿಸಿದ ಭಾಗ : ಯಿಂತೀ ಚತುಸ್ಸೀಮೆಯೊಳಗುಳ್ಳ ಗಡಿಗ್ರಾಮ . . . ಹಟ್ಟಿಹಕ್ಕಲು ತೋಟತುಡಿಕೆ (ಮೈಆರಿ. ೧೯೩೪, ೫೩-೧೮ ; 1405) ; ಆ ದಂಣ್ಣಾಯಕ ಪುರಕ್ಕೆ ಸಲುವ ಚತುಸೀಮೆಯೊಳಗುಳ್ಳ ತೋಟತುಡಿಕೆ ಗದ್ದೆ ಬೆದ್ದಲು (ಎಕ. VII, ಶಿವಮೊ. ೭೦-೨೭ ; 1431).

[ ತೋಟ$_1$ (<ತೋಂಟ) + ತುಡಿಕೆ ]

**ತೋಟಪಟ್ಟಿ** (ನಾ). ತೋಟದ ಭೂಮಿಂ,–ಪ್ರದೇಶ : ತೋಟಪಟ್ಟಿಗಳ ಮೇಲೆ ಪ್ರಾತಃಕಾಲೀನ ಪ್ರಕಾಶ ಬೀರುವ ಹೇ ಪರಮಾತ್ಮಾ . . . ನಿನ್ನ ಕೃಪೆಯನ್ನು ಸುರಿಸು (ಆಶ್ರಮ. ೨೩) ; ಬೆಲ್ಲದ ನಾಡವರು. ತೋಟಪಟ್ಟಿ ಇದ್ದವರು (ಅಶೋಕ. ೭) ; ಆನುವಂಶಿಕ ಹಕ್ಕುದಾರಿಯ ಕಾಲರಾ ತನ್ನ ತೋಟಪಟ್ಟಿಯ ಕೃಷಿಮಾಡಲು ಬಂದಿತು (ಸ್ಮೃತಿಚಿ. ೨೦೭). 'ತೋಟ್ಟ ಪಟ್ಟು' ಪರಾ. [ ತೋಟ$_1$ (<ತೋಂಟ) + ಪಟ್ಟಿ$_2$ ]

**ತೋಟಮಲ್ಲಿಗೆ** (ನಾ). ತೋಟದಲ್ಲಿ ಬೆಳೆಯುಂವ ಮಲ್ಲಿಗೆ : ನಾಟಿರಾಗವು ಲೇಸು ತೋಟಮಲ್ಲಿಗೆ ಲೇಸು ಕೂಟವದು ಲೇಸು ಹಿರಿಯರೊಳು (ಸರ್ವಜ್ಞ. ೩೨೨). [ ತೋಟ$_1$ (<ತೋಂಟ) + ಮಲ್ಲಿಗೆ ]

**ತೋಟಮಾದಳ** (ನಾ). ತೋಟದಲ್ಲಿ ಬೆಳೆಯುಂವ ಮಾದಳ : ತೋಟ ಮಾದಳದ ಹಣ್ಣಿನ ರಸದಲ್ಲಿಯಾದರೂ ಹಸಿಶುಂಠಿರಸದಲ್ಲಿಯಾದರೂ ಕೊಡಿಸಲು . . . ಸಕಲ ರೋಗಂಗಳೂ ಪರಿಹರ (ವೃದ್ಧಸಾ. I, ೩೯೮).

[ ತೋಟ$_1$ (<ತೋಂಟ) + ಮಾದಳ ]

**ತೋಟವಳ** 'ತೋಂಟವಾಳ' ನೋ.

**ತೋಟವಾಳ** 'ತೋಂಟವಾಳ' ನೋ.

**ತೋಟವಾಳಿಗ** 'ತೋಂಟವಾಳಿಗ' ನೋ.

**ತೋಟಾ$_1$, ತೋಟ್ಟ$_2$, ತೋಟ್ಟೆ$_2$** (ನಾ). ಬಂದೂಕಿನಲ್ಲಿಟ್ಟು ಹಾರಿಸುವ ಕೊಳವೆಯಾಕಾರದ ಗುಂಡಂ ; ಕಾಡತೂಸಂ : ಮೊದಲನೆ ಈಡು ಕಡಕಿನ ತೋಟಾದ್ದಾದ್ದರಿಂದ ಒದೆರಡು ಕಡಕುಗಳು ಗಿಡಗಳಿಗೆ ತಗುಲಿದ್ದುದು ಕಂಡು ಬಂದಿತು (ಕಾನೂರು. ೧೪೩). **ತೋಟ್ಟ$_2$** : ಸುಲ್ತಾನಿ ತೋಟ ತುಂಬಿದಂಥಾ ತೋಸ್ತಾನಿ ಒಂದು . . . ಈ ಮೇರೆ ಎರಡು ಜನಕ್ಕೂ ಜಂಗಿ ಸಾಮಾನು ಕೊಟ್ಟು (ರಾಜೇಂದ್ರ. ೦೦೫). **ತೋಟ್ಟೆ$_2$**: ಆದರೆ ಪಿಸ್ತೂಲುಗಳನ್ನು ಇಟ್ಟುಕೊಳ್ಳುವುದು ಹೇಗೆ ? ಅದಕ್ಕೆ ಹತ್ತಾರು ರೂಪಾಯಿಗಳನ್ನು ಖರ್ಚುಮಾಡಿ ಮೇಲೆ ಮೇಲೆ ತೋಟೆಗಳನ್ನು ಕೊಳ್ಳುತ್ತಲೇ ಇರಬೇಕು (ಪಂಯಾತ್ರ. ೪೬).

[ ←ಮರಾ. ತೋಟಾ ; ಹಿಂ. ಟೋಟಾ ]

**ತೋಟಾ$_2$** 'ತೋಡಾ' ನೋ.

**ತೋಟಾವಳಿ** (ನಾ). ತೋಟಗಳ ಸಾಲು : ಹತ್ತಿರದಲ್ಲಿಯೇ ಕೆರೆ, ಅದರ ಕೆಳಗೆ ಅಂದವಾದ ತೋಟಾವಳಿಗಳು (ಬೆಂಗಾಳ್ಯ. ೩೦೯).

[ ತೋಟ$_1$ (<ತೋಂಟ) + ಆವಳಿ$_1$ (= ಆವಲಿ) ]

**ತೋಟಿ$_1$, ತೋಂಟಿ$_1$** (ನಾ). ೧. ಕಲಹ ; ಜಗಳ ; ಕದನ : "ತೋಟ ಯೆಂದು ಜಗಳಂ" (ಕರ್ಣಾನಿ. ೧೪) ; ಎರಡು ರಥವೊಳವು ನೋಟಕ್ಕೆ ರಡಚಿಳವನೊಂದು ರಥವೆ ತೋ[ಪಾಠಂ ಕೋ]ಟಿಗೆ ಪಲವಾಗಿರೆ ಪರಿದು (ಪಂಪಭಾ. ೩-೯೫) ; ಸುರಕೋಟಿ ವಿನೋದದ ತೋಟ ಯೊಳ್ ಚರಾಚರಗುರುವಿಂಗೆ ಪೊಟ್ಟುಗಳೆಯುತ್ತಿರೆ (ಶಾಂತಿಪು. ೧೦-೯೦); ತೊಡಗಿದರು ತೋಟಿಯನು ತಮತಮಗೆ (ಪ್ರಭುಲೀ. ೦೩-೭) ; ತೋಳನ ತೋಟಿ ಸದರವೆ ಕುಜಿಯ ಜಂಗುಳಿಗೆ (ತೊರರಾ. ೬-೩೬-೫೫) ; ಭರತೇಶ ನೊಳು ತೋಟಿ ಬೇಡೆಂದು ಮೊದಲೆ ಪೇಳ್ದರೆ ಕೇಳದುಕ್ಕಿ ಕಾದಿದರು (ಭರಚ. ೩೪-೪೯) ; ತೊಡರ್ಚಿ ತೋಟಿಯಂ ಪಡಿದಬವಾಂತು ಬಂದ ಮಲೆನಾಡಿನ ಸಿಂಗಳರಾಯನಂ ಮೊಗಂಗಿಡಿಸಿ (ಚಿಕವಿ. ೨-೬೮). ೨. ಹೊಯ್ದಾಟ; ತೊಳಲಾಟ ; ಭಾವನೆಗಳ ತಾಕಲಾಟ : ಕಣ್ಬೇಟದ ತೋಟಿಯೊಳ್ಕೂಡದುರ್ದು ದುಸ್ಸಹ ವಿರಹತಾಪಕ್ಕಳ್ಕಿ ವನದುರ್ಗಮಂ ಪುಗು ವಂತೆ ಲತಾಗೃಹವನಂಗಳಂ ಪೊಕ್ಕು (ಮಲ್ಲಿಪು.೩-೩೨): ಅಱದಿನಱದಿನೆಂದು ಮಱವೆಯ ತೋಟಿಯ ತೊಳಸುತ್ತ (ಪ್ರೋಳಮಾ. ೦೭೫-೬೬೦). ೩. ಹಾವಳಿ ; ತೊಂದರೆ : ಮತ್ತಮೊಂದೆಡೆಯೊಳೊರ್ವರ ತೊಟ್ಟು ಲಲಿತಾಂಗಂ ಬಂದನಿನ್ನಾವಾತನ ತೋಟ ಪಿಂಗುವಿನಂ ನೆರವನೆಯೊಳಿರ್ದು ಬರ್ಪಮೇಟಿಮೆಂದು . . . ಪೇಟ್ಟುದುಂ (ಧರ್ಮಾಮೃ. ೨-೪೯) ; ಬಿರುದ ಬಿಸುಟರೆ ತೋಟಿಯೇನೆಂದ (ತೊರರಾ. ೧-೯-೩೨). ೪. ತಂಟೆ; ಗೊಡವೆ; ಗೋಜು : ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ ಕಂಡು

ದಿಂದಂ (ಚಂದ್ರಪು. ೪-೪೭) ; ಭಾವದೊಳ್ ಕ ಪ್ರತ್ಯಯಮುಂಟು–ಉಡುಕಂ, ನಡುಕಂ – ಎಂಬಂತೆ (ಶಮದ. ೨೧೨ ಪ್ರಯೋ) ; ಶಿರದ ಗಂಗೆಯ ತೂಜಿ ತುಹಿನಾಕರನನಂಬರಕಿಟ್ಟು ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರರಾ. ೩-೨-೩) ; ನಡುಪಂ ಕೈವಿಗಾಜಿ ದಂತಚ್ಛದವೊಡೆ ದುಹುಹುಧ್ವಾನವುಂ ಪೊಣ್ಮೆ . . . ಪಾಂಥತೊರ್ಡೆ ತೋಳ್ಗಳ್ಗೂಡೆ ಜಾನು ಪ್ರಹಿತಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಅಂಜಿಕೆ ; ಭಯ ತಲ್ಲಣ : ಭೀತಿ : ಮೆಲ್ಲೆರ್ದೆಯ ನಡುಕವುಂ ವಾಣಿ ಸಲ್ಸಂಭ್ರಮಿಸುವಂತಿರಾ ಕಂಪಿಪವಯವಂಗಳುಂ (ವರ್ಧಪು. ೬-೧೨ ವ) ; ತುರಗಾಕಾರದ ಶೈಳಮನಿರದಡರ್ದೇಱಿದೊಡೆ ಬೆಚ್ಚಿ ನಡುಕದಿನಾಗಳ್ ತುರಗಾಶ್ರಮುಸುಚ್ಚಿ ಶ್ರುವತುರಗೋಪಮನಿತ್ತು [ತ್ತ] ದೊಂದು ತುರಗಮ ನಿತ್ತಂ (ಬಂಹರಿ. ೮-೩೮) ; ಸೌಂದರನುಂ ತುಂಬುರನುಂ ಬೆಗಡುಗೊಂಡು ಬೆಬ್ಬಳವೋಗಿ ನಡುಕದ ಮಳೆ ಕಱಿದು . . . ಕೌತುಕರಸದೊಳವಗಾಹವಿರ್ದು (ನಂಬಿರ. ೧೮-೪೩) ; ಶ್ರೀಮಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ (ಪತಿ. ೪) ; ಈ ಮಾದರಿಯ ಬೈಗುಳಗಳನ್ನು ಎಂದೂ ಕೇಳದ ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೆ ಧಕ್ಕೆ ಬರುವಂತಾಗಿ ಬಿಟ್ಟಿತು (ಪ್ರತಾಪ. ೪೧). ೩. (ಆಲಂ) ಚಂಚಲವಾದುದಂ ; ಸ್ಥಿರವಲ್ಲದುದು : ಪೊಲಸಿನಂತಶುಚಿಯಪ್ಪ ವಾತದಂತೆ ನಡುಕಮಪ್ಪ . . . ಕೊಡದ ನೀರಂತೆ ಪೆರ್ಚಿಸಲರಿದಪ್ಪ ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆ (ಧರ್ಮಾಮೃ. ೩-೧೮೭). ೨, ೩ : ನಡುಕಮುಮಾಱಿಡಿಯುಂ ಚೂತ ಮಂಜರಿಯೊಳ್ (ಎಪ. XIII, ೩೩೨-೪೩ ; 929).

[ < ನಡುಗು$_1$./ತಮಿ. ನಟುಕ್ಕ ]

**ನಡುಕಂಗಿಡು** (ಕ್ರಿ). ಕಂಪನ ನಿಲ್ಲು ; ನಡಂಗುವಿಕೆ ಇಲ್ಲದಾಗು : ಪದುಳಿಸ ದುಗವೆಟ್ಟಿಱಿದ ಕಣ್ಮಲರ್ . . . ನಡುಕಂಗಿಡದೂರು ಗಂದೆಯೇಟಿದ ಕರಘಾತವೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ (ಲೀಲಾವ. ೩-೧೫). [ ನಡುಕ + ಕಿಡು ( < ಕೆಡು$_1$ ) ]

**ನಡುಕಂಗೊಳ್** (ಕ್ರಿ). ೧. ಕಂಪಿಸು ; ನಡುಗು. ೨. ಭಯವನ್ನು ಹೊಂದು ; ಹೆದರು : "ಸೆಡೆದನೆಂದುಂ. ನಡುಕಂಗೊಂಡನೆಂದುಂ . . . ತೆಮರ್ತನೆಂದುಂ–ಈ ೮ ಭಯಂಗೊಂಡವಂ" (ಕಶಸಾ. ೫೬-೨೨೫) ; ಇಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವನಗಿವನುಳ್ಳಳ್ಕುವಂ ಬಳ್ಕುವಂ ಪಾವಡರ್ದಂತಿರ್ಪಂ ಬೆಮರ್ವಂ ಜಯೆವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦).

[ ನಡುಕ + ಕೊಳ್$_1$ ]

**ನಡುಕಂಬೆರು, ನಡುಕವೆರು** (ಕ್ರಿ). ೧. ನಡಂಕವನ್ನು ಹೊಂದು ; ಕಂಪಿಸು : ನಡಂಗು. ೨. ಭೀತಿಯನ್ನು ಹೊಂದು ; ಹೆದರು ; ಭಯಂಗೊಳ್ಳು : ನಡುಕಂಬೆತ್ತಿರ್ಪಳ್ ಸೋಂಕುವೆಯಡಿಗಡಿಗಂ (ಶಾಕುಂತ. ೧೧-೨೪). **ನಡುಕವೆರು** :೧. ನಡುಕವೆತ್ತಿದ ಅವಳ ಕೈಬೆರಳುಗಳು . . . ಬಳೆಗಳನ್ನು ತೆಗೆಯಲೊಲ್ಲದೆ ಹೋದುವು (ಭಾರವೀ. ೬).

[ ನಡುಕ + ಪೆರು$_1$ ( < ಪೆಱು$_1$ ) ]

**ನಡುಕಟ್ಟು$_1$** 'ನಡಂಗಟ್ಟು$_1$' ನೋ.

**ನಡುಕಟ್ಟು$_2$** 'ನಡುಗಟ್ಟು$_2$' ನೋ.

**ನಡುಕಡಲು** 'ನಡಂಗಡಲ್' ನೋ.

**ನಡುಕವೆರು** 'ನಡುಕಂಬೆರು' ನೋ.

**ನಡುಕಾನನ** (ನಾ). ಅರಣ್ಯದ ಮಧ್ಯಭಾಗ ; ನಟ್ಟಡವಿ : ನಡೆದರು ಪುಣ್ಯದ ನಿಜಪುತ್ತಳಿಯಂತೆ . . ನಡುಕಾನನವ ಹೊಕ್ಕರು ಉಗ್ರದಡವಿಯ ಮೃಡ ಬಲ್ಲನವರ ದುಃಖಿಗಳ (ಹರಿಸಾಂ. ೩-೩೮). [ ನಡು$_2$ + ಕಾನನ ]

**ನಡುಕೇರಿ** 'ನಡಂಗೇರಿ' ನೋ.

**ನಡುಕೋಣೆ** (ನಾ). ಮನೆಯ ನಡುವಿನಲ್ಲಿರುವ ಕೋಣೆ ; ನಡುಮನೆ : ನರ್ಸಿಗೆ ಹೊರಗಿನಿಂದ ಉತ್ತರ ಬಾರದಿರಲು, ಅವಳಾಗಿಯೇ ನಡುಕೋಣೆಗೆ ಬಂದು ನೋಡಿದಳು (ಒಡ್ಡಉ. ೪೯). [ ನಡು$_2$ + ಕೋಣೆ$_2$ ( < ಕೋಣ್ ) ]

**ನಡುಕೋಲ್** 'ನಡಂಗೋಲ್' ನೋ.

**ನಡುಗಂತಿ** (ನಾ). ಎಳಗಂದಿಯಾಗಿರುವ ಸ್ಥಿತಿಯನ್ನು ದಾಟಿದ ಹಸು ; ಕರಾವಿನ ಮಧ್ಯಕಾಲದಲ್ಲಿರುವ ಹಸು : ನಡುಗಂತಿಯಾದ ಹಸಿಗೆಯ ಹಸುವಿನ ಮೊಸರು ಕಡೆದ ಹೊಸ ಬೆಣ್ಣೆಯಂ ಸೋದಿಸಿಯೊಲೆಯೊಳೆತ್ತಿ... ತುಪ್ಪಮಂ ಹಸಮಾಳ್ಪುದು (ಸೂಪಶಾ. ೨-೧೭). 'ಎಳೆಗಂತಿ' ಪರಾ.

[ ನಡು$_2$ + ಕಂತಿ$_1$ ( < ಕಂದಿ$_1$ ) ]

**ನಡುಗಂಬ** 'ನಡುಗಂಭ' ನೋ.

**ನಡುಗಂಭ, ನಡುಗಂಬ** (ನಾ). ಮಧ್ಯಭಾಗದಲ್ಲಿರುವ ಕಂಭ,–ಸ್ತಂಭ : ಅವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭದೊಳಡಸಿ ಕಟ್ಟಿ ಕಳ್ಳಸೊರ್ಕಿನೊಳಮವಳ ಪೊರ್ಕುಳಿಯೊಳಂ ಬಟಲ್ದು ನಿದ್ರಿತನಪ್ಪುದುಂ (ಪಂಚತಂ. ೭೪-೩೧). **ನಡುಗಂಬ** : ಸುತ್ತುಮೆಟ್ಟಿಲು ಹಂತದ ನಡುಗಂಬ (Newel. ಇಂಕನಿ).

[ ನಡು$_2$ + ಕಂಭ ]

**ನಡುಗಟ್ಟು$_1$, ನಡುಕಟ್ಟು$_1$** (ಕ್ರಿ). ೧. ಸೊಂಟಕ್ಕೆ ಬಟ್ಟೆ ಮುಂತಾದುವನ್ನು ಸುತ್ತು,–ಕಟ್ಟು : ಎಲೆ ಮರುಳೆ. ನಡುಗಟ್ಟಿ ವೀರಮುಂಡಿಯನಿಕ್ಕಿ ಬಲಗೆಯ್ಯಿನೆಳೆದು ಕಿವಿಗಾನಿಸುವೆ ಸರಳಂ ! (೧೪ವಿಂ. ೨೮-೦೭). ೨. (ಆಲಂ) ಟೊಂಕಕಟ್ಟು ; ಸಿದ್ಧವಾಗು ; ಸಜ್ಜಾಗು : ರಣದಲ್ಲಿ ನಡುಗಟ್ಟಿ ಹಿಮ್ಮೆಟ್ಟಿದೊಡಲೊಡ್ಡಿ ಯತ್ನದಲಿ ಬಲುಬಳಲಿ (ವಿಶೀಗೀ. ೫೩-೦೭). **ನಡುಕಟ್ಟು** : ೨. ಹೆಜ್ಜೆಹೆಜ್ಜೆಗೆ ನಿಧಿಯ ಕೊಪ್ಪರಿಗೆ ಕಾದಿಹುದು ... ಎಡವಿಬೀಳುವದೊಂದೆ, ಹಿಡಿದು ಅಗೆದವರಿಲ್ಲ ನಡುಕಟ್ಟಿ ನಿಂತವರು ಪಡೆಯಬಹುದು (ನೆಲಮು. ೨೧-೨೦).

ನಡುಗಟ್ಟಿ ನಿಲ್ಲು, ನಡುಕಟ್ಟಿ ನಿಲ್ಲು = ಟೊಂಕ ಕಟ್ಟಿ ನಿಲ್ಲು ; ಸಿದ್ಧವಾಗಿ ನಿಲ್ಲು ; ಸಜ್ಜಾಗು : ನಾವೀಗ ನಡುಗಟ್ಟಿ ನಿಲ್ಲಬೇಕಾದುದು ನಮ್ಮ ಧರ್ಮ (ನವತಿ. ೬೩) ; ಅವುಗಳ ಪಕ್ಕದಲ್ಲಿ ನಂಜರಾಜಯ್ಯನ ನಚ್ಚಿನ ಜ್ಯೋತಿಷಿ ಉಪಾಧ್ಯಾಯ ನಡುಕಟ್ಟಿ ನಿಂತಿದ್ದ (ಚಿದೇವ. ೦೩೨).

[ ನಡು$_2$ + ಕಟ್ಟು$_1$ ]

**ನಡುಗಟ್ಟು$_2$, ನಡುಕಟ್ಟು$_2$** (ನಾ). ಸೊಂಟಕ್ಕೆ ಕಟ್ಟುವ ಬಟ್ಟೆ ಮುಂತಾದ ಪಟ್ಟಿ ; ಸೊಂಟಪಟ್ಟಿ : ತೊಟ್ಟಸೆವಾ ಕರಿಯ. ನಡುಗ[ಪಾಠಾಂ. ಕ]ಟ್ಟನಂಗಿಗೆವೆರಸಿದ ತಲ್ಲೇಖವಾಹನುನ್ನತದೇಹಂ (ವರ್ಧಪು.೩-೦೩). **ನಡುಕಟ್ಟು$_2$** : ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ (ಆರ್ಹಶ. ೦) ; ಪ್ರತಿಯೊಬ್ಬನೂ ತನ್ನ ನಡುಕಟ್ಟನಲ್ಲಿ ಆವಾಗಲೂ ಒಂದು ಚೂರಿಯನ್ನೋ, ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು (ರಾಜಾಮು. ೨೦) ; ಕಾಡುಕೋಳಿಗಳನ್ನೂ. ಕೆಲವು ವೇಳೆ ಬೇರೆ ಪ್ರಾಣಿಗಳನ್ನೂ ಕೊಂದು ನಡುಕಟ್ಟನಲ್ಲಿಟ್ಟು ಕೊಂಡು ಬರುತ್ತಿದ್ದನು (ಮಲೆನಾ. ೧೨೮) ; ಅಗದೋನೆ ಭೋಗದೋನೆ ನಾಗರಾ ನಡುಕಟ್ಟನೋನೆ (ಹಳ್ಳಿಶಾ. ೩೭). [ ನಡು$_2$ + ಕಟ್ಟು$_3$ ]

**ನಡುಗಡಲ್, ನಡುಕಡಲು, ನಡುಗಡಲು** (ನಾ). ಸಮುದ್ರದ ಮಧ್ಯಭಾಗ ; ನಡುನೀರು : ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗನಂತೆ (ಧರ್ಮಾಮೃ.೬-೨೦೯); ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತ ಪಿಂಗುವರೆ (ಬಸರ. ೪-೩೦). **ನಡುಕಡಲು** : ನಡುಕಡಲಿನಲ್ಲಿ ಮುಳುಗುತ್ತಿದ್ದವನಿಗೆ ತೆಪ್ಪವಾಗಿ, ಕೈಬಿಡುವಿರಾ ? (ತುಂಗಭ. ೪೧). **ನಡುಗಡಲು** : ಎಲೆ ವಿಧಾತನೆ ವೃಥಾ ಹೊಳೆಯ ನಡುಗಡಲೊಳಗೆ ಸಾವೆಯಂ ಮುಳುಗಿಸಿದೆಲೈ (ತುರಂಗ. ೨-೨೭). [ ನಡು$_2$ + ಕಡಲ್$_2$ ]

**ನಡುಗಡಲು** 'ನಡಂಗಡಲ್' ನೋ.

**ನಡುಗಡ್ಡೆ** (ನಾ). ಸುತ್ತಲೂ ನೀರಿನಿಂದ ಸುತ್ತುವರಿದ ಭೂಪ್ರದೇಶ; ದ್ವೀಪ: "ಅಂತರೀಪ – ನಡುಗಡ್ಡೆ, ದ್ವೀಪ" (ಗಂಗಾವು. ೨); ದಕ್ಷಿಣ ಮಹಾಸಾಗರದಲ್ಲಿ ಹಲವು ನಡುಗಡ್ಡೆಗಳುಂಟು (ಮುಂಬಯಿ. ೮-೧೦೫); ಆ ನಡುಗಡ್ಡೆಯ ಆಧಿರಾಣಿಯಿರಬೇಕು ಆ ಅಪೂರ್ವ ವಿಚಿತ್ರರೂಪಸಿ (ಸಿಡಿಲು. ೩೬); ಒಂದು ಕಾಲಕ್ಕೆ ಹಿಂದೀಉಪಸಾಗರದಲ್ಲಿದ್ದು, ಈಗ ಮುಳುಗಿಹೋದ 'ಲೆಮೂರಿಯಾ' ಎಂಬ ನಡುಗಡ್ಡೆಯಿಂದ ಇವರು ಬಂದವರು (ಭಾಷಾಶಾ.೬೬); ದೋಣಿಯು . . . ರ್ಷಾರ್ಕಿಬಾರ ನಡುಗಡ್ಡೆಯ ದಂಡೆಗೆ ಸ್ವಲ್ಪ ಹೊತ್ತಿನ ಮೇಲೆ ಬಂದು ತಲುಪಿತು 'ಮೇದಿಮು. ೧೦೦). [ ನಡು$_2$ + ಗಡ್ಡೆ ]

**ನಡುಗಣ್** (ನಾ). ೧. ಕಣ್ಣಿನ ಮಧ್ಯಭಾಗ. 'ನಡುಗಣ್ಬೆಳಗು' ಪರಾ. ೨. (ಹಣೆಯ) ಮಧ್ಯದಲ್ಲಿರುವ ಕಣ್ಣು; ಹಣೆಗಣ್ಣು: ಸುರನದಿಯ ಕುಂಡಲದ ನಡುಗಣ್ಣ ಪಂಚಾಸ್ಯದೀರ್ಘದುಭುಜದ . . . ನಿಜದ ಮೂರ್ತಿಯಂ ತೋಱಿಸಿದನು (ಸಿದ್ಧರಾ. ೨-೨೬); ಏಕಿಲ್ಲಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚ ನುಜ್ಜಳಿಸಿ ಸಜ್ಜಿನ ಬೆಂಬೂದಿಯಂ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜೆವೆರಸು ಬೆರೆಪೊಡಲೊಳಿರ್ದಂ (ರಾಮಾಶ್ವ. ೧೧೫-೫). [ ನಡು$_2$ + ಕಣ್ ]

**ನಡುಗಣ್ಣು, ನೆಡುಗಣ್ಣು** (ನಾ). ಅತ್ತಿತ್ತ ಚಲಿಸದ ಕಣ್ಣು; ಒಂದೇ ಕಡೆಗೆ ಸ್ಥಿರವಾದ ದೃಷ್ಟಿಯುಳ್ಳ ಕಣ್ಣು; ಅಚಲವಾದ ನೋಟ: ನಿಟ್ಟಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದು (ಮಂತ್ರಶ. ೮೨-೬). ನೆಡುಗಣ್ಣು: ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು (ನಡದಾ. I, ೪೩೬). [ ನಡು$_1$ + ಕಣ್ಣು (<ಕಣ್) ]

**ನಡುಗಣ್ಬೆಳಗು** (ನಾ). ಕಣ್ಣಿನ ಗುಡ್ಡೆಯ ಕಾಂತಿ; ಆಲಿಯ ಹೊಳಪು: ಸಿರಿಮೊಗಮಂ ನಸುಬಾಗಿ ಕರಂ ಭೂವರನಂ ಪುರ್ಬೆಱಿಸಿ ನಡೆ ನೋಡುವ ತರುಣಿಯ ನಡುಗಣ್ಬೆಳಗಾ ಯವೆಯಾ ಪುರ್ಬನಡರಿ ಪರಿಯೆ (ಜಹುಕಾ. ೪-೦೩). [ ನಡುಗಣ್ + ಬೆಳಗು$_2$ ]

**ನಡುಗನ್ನಡ** (ನಾ). ಮಧ್ಯಕಾಲದ ಕನ್ನಡ; ಹಳಗನ್ನಡ ಮತ್ತು ಹೊಸಗನ್ನಡಗಳ ನಡುವಿನ ಕಾಲದ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ" ವೆನ್ನುತ್ತಾರೆ (ಕೃಪಿಡಿ. ೧); ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು . . . ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ (ಕಶಾಅ. ೭); ನಡುಗನ್ನಡ–ಹೊಸಗನ್ನಡ ಕವಿತೆಗಳಲ್ಲಿ ಮತ್ತು ಆಡುನುಡಿಯಲ್ಲಿ ನೀನು, ನಾನು, ತಾನು ಎಂಬಿವಕ್ಕೆ ನೀ, ನಾ, ತಾ ಎಂಬಿವೂ ಸ್ಥಾನಿಗಳಾಗುತ್ತವೆ (ಸಂಶೋಧ. ೬೫). [ ನಡು$_2$ + ಕನ್ನಡ$_1$ ]

**ನಡುಗಲ್** (ನಾ). ನಟ್ಟಿರುವ ಕಲ್ಲು; ನಿಲ್ಲಿಸಿರುವ ಕಲ್ಲು: ಮುಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದೆಕೆಱಿಯೆ ವಡಗಾಯ್ನುಡುಂಗಲ್ಲೆ ಕೊತ್ತನ್ದೆಱಿಯೆ (ಎಕ. X (S), ಚಿಕ್ಕಬ. ೧೦೬-೬೪; 850). [ ನಡು$_2$ + ಕಲ್$_3$ ]

**ನಡುಗಾಡು** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಪ್ರದೇಶ; ಕಾಡಿನ ಒಳಗಿನ ಪ್ರದೇಶ: ಹೊತ್ತಿಹ ಹೊಱೆಯಂ ನಡುಗಾಡಿನಲ್ಲಿ ಮಡುಗುತ್ತೊಡೆಯರೆ ಬರಲಮ್ಮೆವೆಂದು ನುಡಿದರ್ಭಯದಿಂ (ನನ್ನಜಾ. ೨-೯೧); ಪರಮಕೃಪಾಕರನೆಂಬೀ ಬಿರುದಂ ಬಿಸುಟಕಟ ಶಂಕರಾ ಶಂಕರನಂ ಹರಸಿ ನಡಗಾಡೊಳಂಥೆಯ ಕರದಂಡಮನೆಳೆದುಕೊಂಡವೋಲ್ಮಾಡಿದೆಯ್ಯ (ರಾಜಶೇ. ೦೩-೦೩೯). [ ನಡು$_2$ + ಕಾಡು$_2$ ]

**ನಡುಗಾನಲ್** (ನಾ). = ನಡುಗಾಡು: ಮಿಕ್ಕ ಸರುವಿಂಗೆ ದರುವಿಂಗೆ . . . ನಡುಗಾನಲಿಂಗೆ [ಪಾಠಾಂ. ನಡುವಾನಲಿಂಗೆ, ನಳುನಾನಂಲಿಂಗೆ] ತೆಕ್ಕೆಗತ್ತಲೆಗೆ . . . ಇಕ್ಕೆವನೆಯಾನೆಂದು ಬೊಬ್ಬಿಟ್ಟು ಪೇಳ್ವಂತೆ ಘೀಳಿಡುತ್ತಲಿದುದಡವಿ (ಸೋಮಚಿ. ೩-೩). [ ನಡು$_2$ + ಕಾನಲ್ ]

**ನಡುಗಾಲ** (ನಾ). ೧. ಮಧ್ಯಕಾಲ; ಮಧ್ಯಂತರ ಕಾಲ. ೨. ಸ್ಥಿರವಾದ ತೀರ್ಮಾನ ಕೈಕೊಳ್ಳುವ ಮುಂಚಿನ ಕಾಲ,–ಸಮಯ; ತಾತ್ಕಾಲಿಕವಾಗಿ ನಿರ್ಣಯ ತೆಗೆದುಕೊಳ್ಳುವ ಕಾಲ.

ನಡುಗಾಲದ ವರದಿ=ತಾತ್ಕಾಲಿಕವಾದ ವರದಿ; ಸ್ಥಿರವಲ್ಲದ ಸಂದ್ದಿ: (Interim report. ಪತ್ರಿನಿ. ೪೬). ನಡುಗಾಲದ ಸರಕಾರ=ಮಧ್ಯಕಾಲದ ಸರಕಾರ; ತಾತ್ಕಾಲಿಕವಾದ ಆಡಳಿತ: ರಾಜ್ಯದ ಮಂತ್ರಿಮಂಡಲವು ಬಹುಮತವನ್ನು ಕಳೆದುಕೊಂಡಾಗ ರಾಜ್ಯಪಾಲರು ನಡುಗಾಲದ ಸರಕಾರವನ್ನು ನೋಡಿಕೊಳ್ಳುತ್ತಿದ್ದರು (ರೂಢಿ). [ ನಡು$_2$ + ಕಾಲ ]

**ನಡುಗಿಸು** (ಕ್ರಿ). ೧. ನಡುಗುವಂತೆ ಮಾಡು; ಅಲುಗುವಂತೆ ಮಾಡು; ಅಲ್ಲಾಡಿಸು: ಅಂಗವಂ ನಡುಗಿಸುತ ಬಸುಱಿಂ ಪೊಂಗಿಸುತವಕ್ಕಳಿಸುತಂ ವಾದ್ಯಂಗಳಿಗೆ ಬೆಚ್ಚುತ ಬೆದಱುತಂ (ಬಸಪು. ೧-೪೯); ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದೈಕಿಲಿಂದೆ (ಜೈಮಿಭಾ. ೨೮-೨); ಕಾಶೀಮ ಕೈ ನಡುಗಿಸುತ್ತ ಚೀಟಿ ಬರೆಯಹತ್ತಿದ (ಜೀವರಂ. ೩); ಒಳ್ಳಿದರ ನೆಚ್ಚರಿಸೆ ಪಿಡಿದು ನಡುಗಿಸುಗುಂ (ಕಾಲೂರ. ೭೭-೧೪೧). ೨. ಭಯಗೊಳಿಸಂ; ತಲ್ಲಣಗೊಳಿಸಂ: ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿಹೆ ಛತ್ರವು (ಹಪಕಾ. ೭-೧೪); ಸಹದೇವ ನಕುಲರ ನಡುಗಿಸಿದನುಡುಗಿಸಿದನಾಟೋಪವನು ಪವನಜನ (ಕುಮ್ವಾಭ. ೩-೧೩).

ನಡನಡುಗಿಸು (ದ್ವಿರುಕ್ತಿ): ನಡನಡುಗಿಸಿ ನಲ್ಲನೆದೆಯ ಧೈರ್ಯವ . . . ಪೊಂಗೊಡವೊಲೆವೆಂಗಳು ಮುಸುಕಿತು ಮೃಡತಪಧ್ವಂಸಿಯ ಪಿತನ (ಮೋಹತ. ೧೪-೫೧). [ ನಡುಗು$_1$ + –ಇಸು$_3$ ]

**ನಡುಗು$_1$, ನಡುಂಗು** (ಕ್ರಿ). ೧. ಅದುರು; ಅಲ್ಲಾಡು; ಕಂಪಿಸು: "ನಡುಗು (ನಡಗು)—ಕಂಪನೇ" (ಶಮಧಾ); "ಕಂಪಿಸಿದುದೆನಲ್ಕೆ ನಡುಗಿದುದು" (ಕರ್ಣಾನಿ. ೨೮); ತೆಂಕಣಗಾಳಿಯೊಳಾದ ಸೋಂಕಿನೊಳೆ ನಡುಗುವಶೋಕವಲ್ಲರಿಯ ಪಲ್ಲವದೊಳೆ ನವಚೂತಪಲ್ಲವಂ ತೊಡರ್ದವೊಲಾಗೆ (ಪಂಪಭಾ. ೩-೭೫); ಎಲರಲೆಪದಿಂ ನಡುಗುವೆಲೆದುಱುಗಲಿಂ ಕದಳೀವನಂಗಳು ಮೈಕಿಲಡರ್ದು ನಡುಗಿದಪುವೆಂಬಂತೆಯುಂ (ಕಾದಂಉ. ೨೧೯); ಭಯದಿಂದು ನೋಡಿ ನಾಡೆ ನಡುಗುತ್ತಿರ್ದಳ್ (ಧರ್ಮಾಮೃ. ೩-೪೫); ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ (ನಂಬಿರ. ೬-೨೫); ಸವನಿಸೆ ಹಮ್ಮದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮುಣ್ಣುವ ನವಿರ್ . . . ಇವರೊಳೊಪ್ಪೆ ನೋಡಿದರ್ (ಕಬ್ಬಿಕಾ. ೩೩೨); ಕರ ನಡುಗೆ ಮೈ ಬಲಿಯೆ ಹುಬ್ಬುಗಳುಱೆ ಬಿಗಿಯೆ (ಕುಮ್ವಾಕ. ೧೨-೧೧). ೨. ಹೆದರು; ಭಯಪಡು; ಭೀತಿಗೊಳ್ಳು: ನಡುಗುವುದುಂತೆ ಪಾಂಡವಬಲಂ ನಿನಗರ್ಜುನ ನೆಂಬನೆಂದುಮುಕುರ್ಕುಡುಗಿ ಸುರುಳ್ದನೀಯೆಡೆಗೆ ಪೇಱ್ ಪೆಱಿರಾರ್ ದೊರೆ . . . ಅಂಗಮಹೀತಳಾಧಿಪಾ (ಪಂಪಭಾ. ೧೨-೫೧); ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದು ದ್ರಿಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದುಂ (ಶಾಂತಿಪು. ೬-೨೫ವ); ನಡುಗಿ ಪೊಡೆವಡುವುದುಂ ಮೊಱೆಯಿಡುವುದುಮೇಕಣ್ಣ (ಸಮಪು. ೯-೮೧); ಕಳ್ಳರ ಕೊಟ್ಟಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೧೨-೨೩೬); ಒಡೆಯರಾಡುವ ಮಾತ ಕಡೆಪರಿಯಂತರ ಕೇಳಿ ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ಕ. ೧೭೬-೪೪೯); ಸುರನಗರಿ ನಡುಗಿತ್ತು ಸುರಪತಿ ಹರನ ನೆನೆದನು . . . ಎನೆ ನರನ ಕಡುದುಮ್ಮಾನ ನೆಱೆ ಹದಟಿಸಿತು ಮೂಜಗವ (ಕುಮ್ವಾದ್ರೋ. ೮-೧೦). △ ನಡುಂಗು: ೧. "ಕ್ಷೊಂಪಿಸಿದನೆನೆ ನಡುಂಗಿದನಕ್ಕುಂ" (ಕವಿಕಂ. ೧೪೧).

ನಡಂನಡುಗು, ನಡನಡುಗು, ನಡುನಡುಗು (ದ್ವಿರುಕ್ತಿ) : ಕೆಡೆಯ ಕೃಪಂ ನಡಂನಡುಗಿ ಶಲ್ಯನುರುಳ್ದರೆ . . . ಗಗನೇಚರರ್ ಪಿಡಿದು ಕಟ್ಟಿದರಾ ಧೃತರಾಷ್ಟ್ರಪುತ್ರರಂ (ಮಹಾನೀ. ೧೦-೯೬) ; ಪರಿಭವಾ[ನಿ]ಲನಿಂ ಶೋಕಾ ನಲನಿರ್ಮಡಿಸೆ ನಡುನಡುಗಿ ಕಾಯ್ಪಿನೊಳ್[ಪಿ]ಡುಗಿ . . . ಇಂತೆಂದಳ್ (ಪಂಪಭಾ. ೮-೭೦ವ) ; ಬಂದ ಜಂಗಮವುದ ಇಂಗಿತಾಕಾರವನಱಿತು ಇದಿರೆದ್ದು ವಂದಿಸಿ ಕೈಮುಗಿದು ನಡ[ಪಾಠಾಂ. ಡು]ನಡುಗಿ ಕಿಂಕರನಾಗಿ . . . ಇರಬಲ್ಲರೆ ಅದು ವರ್ಮ (ಅವಹಂ. ೨೨೩-೧೦೧೦) ; ನಡಿಯಲಾಱನು ಮಕ್ಕಳಿರ ನೀರಡಿಸಿದೆನು ಪಿರಿದಾಗಿಯೆನೆ ನಡನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ (ಕುಮಾ.ಭೀ. ೧೦-೨೧) ; ನೆಲ ಬಿರಿವಂತೆ ನಾನಾ ವಾದ್ಯರಭಸದಿ ಕುಲಗಿರಿ ನಡನಡುಗಿದುವು (ಮೋಹತ. ೧೯-೮೭) ; ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗುಗಳಂ ಮುಗಿದು . . . ಏನಾದೊಡ ಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ (ಕಾದಂಉ. ೬೦೧) ; ಪಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮೃ. ೬-೯೨) ; ವೇದ ವೇಧಿಸಲಱಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೫೨); ಮಡದಿ ತನ್ನಯ ಪತಿಗೆ ತೋಱಲು ನಡುನಡುಗಿಯಾ ವರಕುವಾರನ ಪೊಡವಿಪತಿಗವನೀಯೆ(ಸಂಭಪ.೧೩-೬). ನಡನಡಂ ನಡುಗು,ನಡನಡ ನಡುಗು= ನಡಂನಡಂಗಂ : ಲುಬ್ಧಕಂ . . . ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ . . . ಪಾಱಲನುವಾಗಿ ತೂಱಲ್ಗೊಂಬಿನೊಳಿರ್ಪ ವಿಹಂಗ ಸಂಕುಳದಿಂ (ಗಿರಿಕ. ೧-೨೫ವ) ; ನಡನಡ ನಡುಗುವಿನಮಡಸಿ ತಡೆಯದೆ ಖಳನಂ ಪಿಡಿದುಡಿಯೆ ಕಟ್ಟು (ಪದ್ಮರಾ. ೧೨೭-೭) ; ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜನಿಯಂ ಕಂಡು . . . ಇಂತೆಂದಂ (ಪಂಪಭಾ. ೮-೧೦೧ವ) ; ನಡನಡ ನಡುಗಿ ಮಿಡುಮಿಡು ಮಿಡುಕಿ . . . ಪುಯ್ಯಲಿಡುತ್ತಂ (ಅಜಿಪು. ೧೧-೦೦ವ).

[ ದೇ.॥ ತಮಿ. ನಟುಕ್ಕು, ನಟುಙ್ಕು ; ಮಲ. ನಡುಙ್ಙು ; ತುಳು. ನಡುಗು ; ತೆಲು. ನಡುಂಗು, ನಡುಂಕು ]

ನಡುಗು₂ (ನಾ). ೧. (ಚಳಿ ಮಂಂತಾದುವುಗಳಿಂದ) ಅದಿರುವಿಕೆ ; ಕಂಪಿಸುವಿಕೆ; ನಡುಕ; ಕಂಪನ : "ನಡುಕ=ನಡುಗು" (ಗಂಗಾಮು. ೦೭೭) ; ಪದಾರ್ಥಗಳ ಕಂಪನವೆಂದರೆ ನಡುಗು (ಮುಂಬಯಿ. ೫-೦೦೧) ; ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೦೦೨). ೨. ಹೆದರುವಿಕೆ ; ಭಯಗೊಳ್ಳುವಿಕೆ ; ಅಂಜಿಕೆ : ಈತನನ್ನು ನೋಡಿ ದರೆ ನನಗೆ ನಡುಗು ಬರುತ್ತದೆ (ಉರಾಚ. ೧೦) ; ತಿಳಿಯದ ಮಂತ್ರ ಹೇಳಲಾರಂಭಿಸಿದರೆ ನನಗೆ ನಡುಗು ಬರುತ್ತದೆ (ಹುಚ್ಚಾಟ. ೧೨); ನೀನು ಹೇಳೋದು ಕೇಳಿ ನನಗೆ ನಡುಗು ಹುಟ್ಟಿತು (ಚಂದುಟ. ೬೮).

[ <ನಡುಗು₁./ತಮಿ. ನಟುಕ್ಕು ; ಮಲ ; ನಡುಙ್ಙು; ತೆಲು. ನಡುಂಗು, ನಡುಂಕು ]

ನಡುಗುಂಪೆಣ (ನಾ). ಅತ್ಯಂತ ಭಯಗೊಂಡ ವ್ಯಕ್ತಿ : ನಡುಗುಂ ಪೆಣನಾಗಿ. ತನ್ನವರ್ಗೆ ಕಯ್ಯಾಣತಿದೋರುವನು (ಮಂತ್ರಶ. ೮೩-೬).

[ನಡುಗು₁ + ಪೆಣ]

ನಡುಗುಡ್ಡ (ನಾ). ಗುಡ್ಡದ ಬುಡಕ್ಕೂ ತುದಿಗೂ ಮಧ್ಯವಿರುವ ಪ್ರದೇಶ : (ಕಿ). [ ನಡು₂ + ಗುಡ್ಡ₂ ]

ನಡುಗುಹೆ (ನಾ). ಗುಹೆಯ ಮಧ್ಯಭಾಗ ; ಗವಿಯ ನಡುಭಾಗ ; ಗುಹಾಮಧ್ಯ : ಕಡುಗೆರಳಿದ ಮೃಗಾಧಿಪನ ನಡುಗುಹೆಯೊಳಿಹ ಸುಧೆಯ ಘಟವೀ ಪೊಡವಿಯೊಡೆತನ ಸದರವೇ ಕಡುಬಡವರಿಗೆ ದೊರೆಕೊಂಬುದೇ (ಕುಮಾಸ. ೧-೬೭). [ ನಡು₂ + ಗುಹೆ ]

ನಡುಗುೞುವ (ನಾ). = ನಡುಗಡ್ಡೆ : "ಅಂತರೀಪಂ ನೀರ ನಡು ಗುೞುವಮೆನಿಸಿಕ್ಕುಂ" (ಮಂಗರಾ. ೦೨೩-೧೩). [ ನಡು₂ + ಕುೞುವ₁ ]

ನಡುಗೆರೆ (ನಾ). ಕೆರೆಯ ನಡುಭಾಗ ; ಮಧ್ಯದ ಕೆರೆ : ಕೆರೆಯಲ್ಲಿ ಈಜಲು ಹೋಗುತ್ತಿದ್ದೆ . . . ನಡುಗೆರೆಯನ್ನೂ ಮೀರಿ ಹೋಗುತ್ತಿದ್ದೆ (ಧರ್ಮಶ್ರೀ. ೨೦). [ ನಡು₂ + ಕೆರೆ₂ (<ಕೆಱು) ]

ನಡುಗೇರಿ, ನಡುಕೇರಿ (ನಾ). ಕೇರಿಯ ಮಧ್ಯಭಾಗ : ಬೀದಿಯ ಮಧ್ಯಭಾಗ : ನಡುಗೇರಿ ಉರಿದು ನಾನಾ ಭಟರು ಮಡಿದಾರು (ಶಿವಗೀ. ೮೦೭) : ಮಾರನ ಚಾಪಾಗಮವಿಸ್ತಾರಮನೀಕ್ಷಿಪ ತವಂಗಮಂಗನೆಯರ ಶೃಂಗಾರರಸಂ ತೀವಿದ ನಡು[ಪಾಠಾಂ. ಡೆ]ಗೇರಿಯಿದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೬-೩೭). ನಡುಕೇರಿ : ಪೆಡಗಯ್ಯ ಕಟ್ಟಿಸಿ ಪುರವರದ ... ನಡುಕೇರಿಯೊಳಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಕುರಾಸಾಂ. ೩೭-೬೨) ; ಕಾಣಿಕೆಯನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹಂದು (ಕಂನವಿ. ೬-೩೨). [ನಡು + ಕೇರಿ]

ನಡುಗೊಂಬು (ನಾ).=ನಟ್ಟಗೊಂಬು: "ನಟ್ಟಗೊಂಬೆಂದು ನಡುಗೊಂಬು" (ಕಬ್ಬಿಕ್ಕೆ. ೦೮) ; "ನಡುಗೊಂಬೆಂದು ನಾಡೆ ತಾ ನಟ್ಟಗೋಬಕ್ಕು" (ಶಬ್ದಮಂ. ೨೩). [ ನಡು₂ + ಕೊಂಬು₁ ]

ನಡುಗೊಣ 'ನಡುಗೊಳ' ನೋ.

ನಡುಗೊರಲು, ನಡುಗೊರಳು (ನಾ). ಕೊರಳಿನ ಮಧ್ಯಭಾಗ ; ಕುತ್ತಿಗೆಯ ಮಧ್ಯಭಾಗ : ನಡುಗೊರಲ ಸುೞಿ ದೇವಮಣಿ (ಮಂಗರಾ. ೮೩-೨೦). ನಡುಗೊರಳು : ಬರುತಿಹ ಬಾಣವನು ಖಳ ಕಂಡು . . . ಬಲುಹುಶಕ್ತಿಯೊಳಿಟ್ಟೊಡನಿತನು ಮುಳಿದು ನುಂಗಿತು ಕಡಿದುದಮಮಾ ಖಳನ ನಡುಗೊರಳ (ಕಾಶಿರಾ. ೨೭-೫೫).

[ ನಡು₂ + ಕೊರಲು (<ಕೊರಲ್) ]

ನಡುಗೊರಳು 'ನಡುಗೊರಲು' ನೋ.

ನಡುಗೊಳ, ನಡುಗೊಣ (ನಾ). ಪುಷ್ಕರಿಣಿಯ ಮಧ್ಯಭಾಗ ; ಸರೋವರದ ಮಧ್ಯಭಾಗ : ತೊಳೆದು ಚರಣಾನನವ ನಡುಗೊಳದೊಳಗೆ ಹೊಕ್ಕು . . . ಶೀತಳಜಲವ ಕುಡಿದು (ಕುಮಾಅ. ೦೦-೫೭). ನಡುಗೊಣ : ಗುರುತನುಜಂ ಕೃಪನ ಕೃತವರ್ಮನ ನುಡಿಗಳಂ ನಡುಗೊಣದಿ ನುಡಿವ ನಮ್ಮವರ ಮರೆನುಡಿಗಳಮ್ಮರೆಯ ಗಡಬಡೆಗಳಿಂ ಧ್ವನಿಯ ಕಡುಬೆಡಗಿ ನಿಂದರಿದು (ತುರಂಗ. ೭೯-೩೧). [ ನಡು₂ + ಕೊಳ₂ ]

ನಡುಗೋಲ್, ನಡುಕೋಲ್ (ನಾ). ಸರಳಿನ ಮಧ್ಯಭಾಗ ; ಬಾಣದ ಮಧ್ಯಭಾಗ ; ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ . . . ಸತ್ಕಶೌಚಗುಣಸಂಪದವೇಳಿದನಾದಂ (ಪಂರಾಮಾ. ೯-೫೫). ನಡುಕೋಲ್ : ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟಿ ಕಳೆದು ನಡುಕೋ[ಪಾಠಾಂ. ಕಾ]ಲ್ವರಂ ನಟ್ಟ ಕೂರ್ಗಣೆಗಳಂ ಗಱುವೆರಸು ತೋಱಿದು ಕಳೆದು (ಪಂಪಭಾ. ೧೨-೭೯ ವ); ಸ್ಮರನ ಸರಲ್ಗಳ್ ನಡುಕೋಲ್ವರೆಗಂ ನಡೆ (ಧರ್ಮಾಮೃ. ೮-೦೬೮). [ ನಡು₂ + ಕೋಲ್₁ ]

ನಡುಚವುಕಿಗೆ (ನಾ). ಮೊಗಸಾಲೆಯ ಮಧ್ಯಭಾಗ : ನಡುಚವುಕಿಗೆಗೆ ಬಿಗಿದ ತೊಲೆಯ ಪೊಱವಳಸಿನುಗ್ಗಡದ ನಾನಾ ವರ್ಣಚಿತ್ರಪತ್ರಿಕೆಗಳಂ...ಪೊಗಳ ಲಳವೆ (ಜೀರಮ. ೫-೦೨). [ ನಡು₂ + ಚವುಕಿಗೆ (<ಚೌಕಿಗೆ) ]

ನಡುಜವ್ವನ (ನಾ). ತುಂಬುಜವ್ವನ ; ಪಿರಿಯಯೌವನ : ಪಿಡಿದ ತುಂಬು ನೀರ ಪೊಂಗೊಡಮನಿಱಿಪಿ ಪಡಿಮೊಗದ ನೆರೆವೀಡ ನಡುಜವ್ವನದ ಕೆಳದಿ ಯೊರ್ವಳಂ ಸನ್ನೆಯಿಂ . . . ಎನೆ (ರಾಮಾಶ್ವ. ೫೦-೦೭).

[ ನಡು₂ + ಜವ್ವನ ]

ನಡುತರ (ನಾ). ಮಧ್ಯಮ ಮಟ್ಟ,-ರೀತಿ : ಒಂದು ಆಳಕ ಹಿಟ್ಟು . . . ನಡುತರದ ಚಮಚದಲ್ಲಿ ಒಂದು ಚಮಚ ಸಕ್ಕರೆ (ಅಡುಸಾ. ೯೭).

[ ನಡು₂ + ತರ₆ (<ತರಹ) ]

ನಡುತಲೆ 'ನಡುದಲೆ' ನೋ.

**ನಡುತೂತು** (ನಾ). ಮಧ್ಯದಲ್ಲಿರುವ ತೂತು,–ರಂಧ್ರ : ನಾಭಿ–ರಥದ ಗಾಲಿಯ ನಡುತೂತು (ಗಂಗಾವು. ೧೮೧).

[ ನಡು$_2$ + ತೂತು$_2$ (<ತೂಂತು$_2$) ]

**ನಡುತೂಬು** (ನಾ). = ನಡುತೂತು : "ಪಿಂಡಿಕಾ, ನಾಭಿಃ–೨ ಬಂಡಿಯ ಕಣ್ಣಿನ ನಡುತೂಬಿಗೆ ಹೆಸರು" (ಸಿದ್ಧಾಂತಿ. ೨೫೩).

[ ನಡು$_2$ + ತೂಬು (<ತೂಂಬು) ]

**ನಡುತೊಟ್ಟಿ** (ನಾ). = ನಡುಚಪ್ಪರಿಗೆ : "ಕಕ್ಷ್ಯಾ–ಉಪ್ಪರಿಗೆ, ಮನೆಗಳ ನಡುತೊಟ್ಟಿ" (ಸಿದ್ಧಾಂತಿ. ೪೧೧). [ ನಡು$_2$ + ತೊಟ್ಟಿ$_1$ ]

**ನಡುದಟ್ಟಿ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ,–ವಸ್ತ್ರ ; ನಡುಪಟ್ಟಿ : (ಃ). [ ನಡು$_2$ + ದಟ್ಟಿ$_1$ ]

**ನಡುದಲೆ, ನಡುತಲೆ** (ನಾ). ತಲೆಯ ಮೇಲಿನ ಮಧ್ಯಭಾಗ : ನೆತ್ತಿ : ತುಡೆ ಧನ್ವಿ ಸರಲನೊರ್ವಂಗೆಡೆವುಗೆ ಮತ್ತೊರ್ವನವನನದು ತಱಿವವೊಲೊಳ್ಪುಡುಗದೆ ಯಕ್ಷಪ್ರತಿಮೆಯ ನಡುದಲೆಯೊಳ್ ಬಿಟ್ಟುದಶನಿ ನುರ್ಗಪ್ಪಿನೆಗಂ (ಶಾಂತಿಪು. ೬–೨೯) ; ನಡುದಲೆ ಗೋಣ್ ನೊಸಲ್ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇಟುಟಿದಂಗೆ ಸಾಧ್ಯಮೇ (ಲೋಕೋಪ. ೧೦–೪). ನಡುತಲೆ : ಪಾರ್ವನ ಕಾಲ್ ಮೋದೆ ನಡುತಲೆಯುಲಿರ್ಪುದುಮೂದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (ಪಂಪಭಾ. ೨–೬೪). [ ನಡು$_2$ + ತಲೆ$_1$ ]

**ನಡುದಾರ** (ನಾ). ಸೊಂಟಕ್ಕೆ ಕಟ್ಟುವ ನೂಲಿನ ಅಥವಾ ಚಿನ್ನ, ಬೆಳ್ಳಿಯ ಎಳೆ ; ಉಡಿದಾರ : (ಃ). [ ನಡು$_2$ + ದಾರ$_1$ ]

**ನಡುದಾರಿ** (ನಾ). ಮಾರ್ಗದ ಮಧ್ಯ ; ದಾರಿಯ ಮಧ್ಯ ; ನಡುಮಾರ್ಗ : ಹುಲಿ . . . ಕುದುರೆಯ ಮೇಲೆ ಬೀಳಲು ಸಿದ್ಧವಾಗಿ ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಹು. ೬). [ ನಡು$_2$ + ದಾರಿ ]

) (ನಾ). ನಡುವಿನ ಸ್ಥಳ,–ಅಂತರ : ಎರಡುಂ ಸಗ್ಗಂಗಳ ನಡುವೆರಪಿನೊಳಧಿಯಾದ್ಯಮನ್ಯಮಲ್ಲದ ಮಧ್ಯಾಜಿರದೊಳ್ ಧರ್ಮಗ್ಲಾನಿಯ ನರಕದೊಳಳಲ್ವರುಮನಕಟ ! ನೆನೆಗೆಮ ! ಕೃಷ್ಣಂ (ಜಟ್ಯಅ. ೯–೬). [ ನಡು$_2$ + ತೆರಪು (<ತೆಱಪು) ]

**ನಡುದೊಱೆ** (ನಾ). ನದಿಯ ಮಧ್ಯಭಾಗ : ನಡುನೀರು : ನಡುದೊಱೆಯಲ್ಲಿ ಹುಟ್ಟುಹಾಕಿದಡೆ ಹಱುಗೋಲು ಮುಳುಗದೆ ಏಱಿದವರು ಸತ್ತರು (ಅವಚಂ. ೮೦–೩೬೦) ; ನಡುದೊ[ಪಾಠಾಂ. ತೊ]ಱೆಯೊಳಗೆ ಹಱುಗೋಲನಿಳಿದಂತಾಯಿತ್ತೆನ್ನ ಭಕ್ತಿ (ಬಸಹೆ. ೯೮–೨೯೩).

[ ನಡು$_2$ + ತೊಱೆ$_2$ ]

**ನಡುನಾಡು** (ನಾ). ೧. (ದೇಶದ) ಮಧ್ಯಭಾಗ ; (ರಾಜ್ಯದ) ಮಧ್ಯ ಪ್ರದೇಶ : ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡುನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ಗುಂ (ಆದಿಪು. ೧೫–೪೦) ; ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ . . . ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮಱೆದೆಯಲ್ಲಾ (ಅವಚಂ. ೨೧೯–೯೯೨) : ಊರೂರ್ದಪ್ಪದೆ ದೇವತಾನಿಳಯದಿಂ ಸದ್ಭಕ್ತರಿಂ ಚೆಲ್ವುವೆತ್ತೂರೂರ್ದಪ್ಪದೆ ಬಲ್ಲಕುಂದೆ ನಡುನಾಟಿಬ್ ಸಂತಂ ಬಸಂತಂ ಕರಂ (ಶಾಪಮಂ. ೯೬೪) : (ಎಇ. XIV, ೨೭೦–೧೯ ; 1181 ನೋ). ೨. (ಮೂರು ಲೋಕಗಳಲ್ಲಿ) ಮಧ್ಯದಲ್ಲಿರುವ ಲೋಕ ; ಭೂಲೋಕ ; ಮರ್ತ್ಯಲೋಕ : ನಡುನಾಡರಸದ ಪೆರ್ದೊಟಿ ನಡುಪಳ್ಳಿಯ ಕಾಮಧೇನು[ವುಂ]ಗಣದೊಳೆನಿಪ್ಪದೆ ಪಣ್ತ ಕಲ್ಪತರುವೆಂದಡದೇಂ ಪಣ್ಣಪುದೊ ರೂಪ ವಿದ್ಯಾಧರಿಯ (ಸೌಇಇ. XX, ೪೯–೩೫ ; ಸು. 1076 ?) ; ನಡುನಾಡು ಮೇಲ್ನಾಡು ಕೀಳುನಾಡೆಂಬ ಮುಪ್ಪೊಡವಿಯೊಡೆಯನ ಹೆಮ್ಮೆಗಗೆ ತಡೆಯುಂಟೆ (ಭರಚ. ೪೪–೬೬).

ನಡುನಾಡ ತೀರ್ಥ = ೧. ಭೂಲೋಕಕ್ಕೆ ಪೂಜ್ಯವಾದ ಸ್ಥಳ,–ಶ್ರೇಷ್ಠವಾದ ಪ್ರದೇಶ : ನಡುನಾಡ ತೀರ್ಥಮೆನಿಸಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ (ಅನಂಪು. ೧೨–೨೯). ೨. ಭೂಲೋಕಕ್ಕೆ ಪೂಜ್ಯನಾದವನು : ಒಂದಂ ಬಿರುದಂ : ಸಕಳಗುಣಸಂಪೂರ್ಣ್ಣಂ ಕಲಿಕಾಲಕರ್ಣ್ಣನಮಳಚರಿತ್ರಂ ನಡುನಾಡ ತೀರ್ತ್ಥಂ ಶ್ರೀಮತ್ಕೊಸವೂರಾಯ್ಯಗಾವುಣ್ಡಂ (ಸೌಇಇ. XI-i, ೬೫–೨೯ ; 1028) ; ಬಮ್ಮ[ಂ]ಗಣ್ಡ ಎಲಪ್ಪೊರ್ಗಳೆ ನೆಗಟ್ದನವನೀತಳದೊಳ್ . . . ಕುನ್ದಿಗನೊಳ್ಪಡೆದಂ ನಡು[ನಾ] [ಡ] ತೀರ್ತ್ಥವೀ ಮಹಿಮೆಗಳಂ (ಸೌಇಇ. XX, ೨೪ ೧೪ ; 1034).

[ ನಡು$_2$ + ನಾಡು ]

**ನಡುನಿದ್ದೆ** (ನಾ). ನಿದ್ರೆಯ ಮಧ್ಯಕಾಲ ; ಗಾಢನಿದ್ರೆ : ಇದು ಬೇರೊಂದು ಕಾಲ ; ನಡುನಿದ್ದೆಯಲ್ಲಿ ಕನಸು ಬಿದ್ದ ಹಾಗೆ ತಣಿವಿಗಾಗಿ ಈ ನಾಡನ್ನು ತೆರೆದಂತಿದೆ (ಕುಸುಸಂ. ೧೫೮). [ ನಡು$_2$ + ನಿದ್ದೆ ]

**ನಡುನಿಲ್** (ಕ್ರಿ). (ಆಲಂ) ನಿಷ್ಪಕ್ಷಪಾತದಿಂದಿರು : ಎರಡುಂ ಪಕ್ಕಮುಮೊಂದೇ ಸರಿಯೆನೆ ನಡುನಿಂದು ನೆಗಟಿಯಾ ದ್ವಿಜವರನೊಳ್ ಕರಮೊಸೆದು ತನ್ನ ಭಾರಮನಿರಿಸಿದವೊಲ್ ಪೆಂಪುಗೊಳಿಪನುತ್ತಮಪುರುಷಂ (ಚಕವಿ. ೧–೪೨). [ ನಡು$_2$ + ನಿಲ್ ]

**ನಡುನೀರ್, ನಡುನೀರು** (ನಾ). (ಸರೋವರ, ನದಿ ಮುಂತಾದುವುಗಳ) ನೀರಿನ ಮಧ್ಯಭಾಗ,–ಜಲಮಧ್ಯ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋರ್ಮುಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುಟಿಯೊಳಂ (ಕಾದಂಪೂ. ೧೧೭) ; ಅನ್ಯಾಯದೊಳ್ಪಡೆದರ್ಥಂ ನಡುನೀರಿನೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬–೧೨೮) ; ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ (ಬಸವ. ೨೨೦) ; ಎಲೆ ಭಕ್ತ ನೀನೇಕೆ ನಡುನೀರೊಳಿರ್ದಪ್ಪೆ (ರುದ್ರರ. ದೀ. ೨೧೦–೯) ; ನಡುನೀರೊಳೊಗೆದ ನಳಿನವುಂ ಮುಱಿಯಲೆಳಸಿ ಮಗುಳ್ದು ತೆರೆವಿಡಿದೀಸುವೆಳೆವೇಡಿತಿ (ರಾಜಶೇ. ೬–೨೪ವ). ನಡುನೀರು : ಕೃಪ ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ ಅಱಿದರಿವರಾಲಿಸಿದರು (ಕುವ್ಯಾಗ. ४–४३).

ನಡುನೀರಲ್ಲಿ ಕೈಬಿಡು, ನಡುನೀರಲಿ ಕೈಬಿಡು = ೧. ಪ್ರವಾಹದ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುನೀರಲ್ಲಿ ಕೈಬಿಟ್ಟ ಹಾಗೆ (ಗಾದ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ಕೈಕೊಡು : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲಿ ಕೈಬಿಡುವುದೆ ? (ನಡದಾ. II, ೮೭೦). [ ನಡು$_2$ + ನೀರ್$_1$ ]

**ನಡುನೀರು** 'ನಡುನೀರ್' ನೋ.

**ನಡುನೆತ್ತಿ** (ನಾ). ತಲೆಯ ಮೇಲಿನ ಮಧ್ಯಭಾಗ ; ನಡುದಲೆ : ಮುಡುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿಪೊಯ್ದರೊರ್ವರನೊರ್ವರ್ (ಗದಾಯು. ೮–೧೫); ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗಟಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯–೨೮) ; ಆಧಾರ ಸ್ವಾಧಿಷ್ಠಾನ . . . ಆಜ್ಞೆ ಎಂಬ ಷಡಾಧಾರದ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೧೧–೨೧) ; ನಿರವಧಿಯಿಂ ಕುಳಿರ್ವುದಕಮಂ ನಡುನೆತ್ತಿಯೊಳಾಂತು ತನ್ನ ಕಣ್ಣುರಿಗುಪಶಾಂತಿಯಂ ಪಡೆದನಿಲ್ಲಭವಂ (ದಶಕು. ೧–೫೩) ; ಒಡೆದು ನಡುನೆತ್ತಿಯನು ಝುಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುವ್ಯಾದ್ರೋ. ೧೮–೭೧) ; ನಡುನೆತ್ತಿ ಬಿರಿದು

ಮುತ್ತುಗಳೊಡೆದುಚ್ಚಳಿಸುತ್ತೆ ಪಾಱಿ (ರಾಜಶೇ. ೫-೪೧). [ನಡು$_{2}$+ನೆತ್ತಿ]

ನಡುನೆಲ (ನಾ). ಮಧ್ಯದ ಪ್ರದೇಶ,-ಸ್ಥಳ : ಸನ್ನೆಯು ಭೇರಿಕಾಱರು ನಡುನೆಲದಲ್ಲಿ ಸನ್ನದ್ಧರಾಗಿ ನೆರೆದರು (ಭರಚ. ೫೧-೨೯). [ನಡು$_{2}$ + ನೆಲ]

ನಡುನೆಲೆ (ನಾ). ಮಧ್ಯಸ್ಥಿಕೆ ; ನಿಷ್ಪಕ್ಷಪಾತತೆ : ನಡುನೆಲೆಯುಳ್ಳವನ ಬದುಕು ಅೞಿವಿಲ್ಲದೆ ಸಂತತಿಗಂ ಕಾಪುಳ್ಳುದಕ್ಕುಂ (ಕುಱಳ್. ೧-೧೨-೨). [ ನಡು$_{2}$ + ನೆಲೆ ]

ನಡುನೇಸಱ್, ನಡುನೇಸಱು (ನಾ). ನಡುಹಗಲು ; ಮಧ್ಯಾಹ್ನ : ಒಡಲುಂತ ತನುವೀತನ ನೆವದಿಂದೆಂದು ಕಡುಗಳಲ್ದಾಕಾಶಮೆಂಬ ಮೃಡ ನುರಿಗಣ್ಣ ತೆಱೆದವೊಲು ನಡುನೇಸಱಿಡಸಿದುದುಂದು ಬಲ್ಪಿಸುವ (ಶ್ರೀಪಾಲ. ೪-೫೪). ನಡುನೇಸಱು : ನಡುನೇಸಱಿಲಿ ತವು ನಿಲಬಲ್ಲದೇ ಜನನಾಥ (ನಿಭಾಗ. ೫-೧೨-೨೭). [ ನಡು$_{2}$ + ನೇಸಱ್ ]

ನಡುನೇಸಱು 'ನಡುನೇಸಱ್' ನೋ.

ನಡುನೊಸಲು (ನಾ). ಹಣೆಯಂ ಮಧ್ಯಭಾಗ : ಜಡೆಮುಡಿಯುನಳವಡಿಸಿ . . . ಭಸಿತಲೇಪನದೊಡಲು ನಡುನೊಸಲೊಳು ತ್ರಿಪುಂಡ್ರದ ರೇಖೆಗಳು ಮೆಱೆಯೆ (ಬಸವು. ೩-೨೭). [ ನಡು$_{2}$ + ನೊಸಲು (<ನೊಸಲ್ ) ]

ನಡುನೋಟ (ನಾ). ಸ್ಥಿರವಾದ ನೋಟ ; ನೆಟ್ಟ ದೃಷ್ಟಿ : ಪಸುಳೆಗುವರಂ ತನ್ನ ಕಟ್ಟಿದಿರ ಪುರ-ಷೋತ್ತಮಮೂರ್ತಿಯನೆಮೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲ್ (ರಾಮಾಶ್ವ. ೭೭-೪). [ ನಡು$_{1}$ + ನೋಟ ]

ನಡುಪಗಲ್ 'ನಡುವಗಲ್' ನೋ.

ನಡುಪಟ್ಟ? (ನಾ). (?) : ತೊಡೆಯಿಂ ಕಡುಗುದುರೆಗಳು ಮಡದಿಂ ನಡು [ಪಾಠಾಂ. ಡೆ]ಪಟ್ಟ ದಂತಿಯಂ ನಿಡುದೋಳಿಂ ಕಡುವಾಳಂ ಕೂರಸಿಯಿಂ ಕಡುಂಗಿದಣೆಯುಂ ಸಮಂತು ಬಸದಾಗಿಸುವಂ (ಕಾವ್ಯಾವ. ೨೩೧) ; ಚಿತ್ರಭವ ಚಕ್ರವರ್ತಿಯ ನಡುಪಟ್ಟ ಪಟ್ಟದಾನೆಯಂತೆ ಮಾಗಮಾಗಿಸುವ ಮದಮದದ ಸೊನೆಸೊನೆಯಂ ಬಿಡುವ ಬಾಳರಸಾಳಂಗಳಿಂ ಕಾಮದೇವನ ದೀವದ ಪಿಂಡಿನಂತಿರ್ಪ ಕಳಹಂಸೆಗಳಿಂ . . . ಮನಂಗೊಳಿಸಿ (ಅರ್ಧನೇ. ೪-೬೫ ವ). [ ? ]

ನಡುಪಟ್ಟಿ (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ಚರ್ಮ, ವಸ್ತ್ರ, ಲೋಹ ಮುಂತಾದುವುಗಳ ಪಟ್ಟಿ ; ಬೆಲ್ಟು : ಅವಳು ಬಿರುಬಿರನೆ ಕೈಚಾಚಿ, ನೋಟನ್ನು ಕಸಿದು-ಕೊಂಡು ತನ್ನ ನಡುಪಟ್ಟಿಯ ಕೆಳಗೆ ಬಚ್ಚಿಟ್ಟು ಕೊಂಡಳು (ಪುನರು. ೧೯೫) ; ಕಯ್ಯ ಪಟ್ಟದ ಖಡ್ಗವನ್ನು ನಡುಪಟ್ಟಿಯ ಒರೆಯೊಳಕ್ಕೆ ಸಶಬ್ದವಾಗಿ ನೂಂಕಿಬಿಡುವನು (ಬಿರುಗಂ. ೩೧-೬). ೨. ಸೊಂಟದಲ್ಲಿ ಧರಿಸುವ ಒಂದು ಬಗೆಯ ಆಭರಣ : ಒಡ್ಯಾಣ ; ಡಾಬು. [ ನಡು$_{2}$ + ಪಟ್ಟಿ$_{2}$ ]

ನಡುಪಳ್ಳಿ, ನಡಪ್ಪಳ್ಳಿ (ನಾ). ಒಂದು ಸ್ಥಳದ ಹೆಸರು : ನಡುನಾಡ ರಸದ ಪೆರ್ದೊರೆ ನಡುಪಳ್ಳಿಯ ಕಾಮಧೇನು[ವುಂ] ಗಣದೊಳೆನಿಪ್ಪದೆ ಪಣ್ತು ಕಲ್ಪತರುವೆಂದಡದೇವಣ್ಣಿಪುದೊ ರೂಪವಿದ್ಯಾಧರಿಯ (ಸಾಇಇ. XX, ೪೮-೩೫ ; ಸು. 1076 ?). ನಡಪ್ಪಳ್ಳಿ : ನೇಱಿಲೆಯಂ ಮಾಯೊತ್ತಿಂ ನಡಪ್ಪಳ್ಳಿಮೂಱಣಂ ನಡಲು ಎಪ್ಪಳ್ಳಿ (ಎಕ. VI, ಚಿಕ್ಕಮ. ೯೫-೧೫ ; ಸು. 1025 ?). [ ನಡು$_{2}$ + ಪಳ್ಳಿ$_{1}$ ]

ನಡುಪಾಯ್ 'ನಡುವಾಯ್' ನೋ.

ನಡುಪ್ರಾಯ (ನಾ). ಮಧ್ಯವಯಸ್ಸು : ಅವರು ನಡುಪ್ರಾಯದಲ್ಲಿ ತೀರಿ ಹೋದುದರಿಂದ ಸಂಸಾರಕ್ಕೆ ಬಹಳ ಕಷ್ಟವಾಗಿದೆ (ರೂಢಿ). [ ನಡು$_{2}$ + ಪ್ರಾಯ ]

ನಡುಬನ (ನಾ). ಕಾಡಿನ ಮಧ್ಯಭಾಗ ; ಅರಣ್ಯದ ಒಳಭಾಗ : ಸ್ವರ್ಗಸ್ಥರಾದರು ತಂದೆ ತನ್ನಣುಗನ ನಡುಬನದೊಳು ಬಿಟ್ಟ ಹಾಗೆ (ಇಂಬಾಪ. ೨೧-೯೫). [ ನಡು$_{2}$ + ಬನ ]

ನಡುಬಾನು (ನಾ). ಆಕಾಶದ ಮಧ್ಯಭಾಗ : ನಡುಬಾನೇಱಿದುಷ್ಣಾಂಶು ಮಂಡಲವಲ್ಲಿ ಕಡು ಸೊಗಸಿತು (ಶ್ರೀಪಾಲ. ೪-೪೮). [ ನಡು$_{2}$ + ಬಾನು$_{2}$ (<ಬಾನ್$_{3}$ )]

ನಡುಬಾವಿ (ನಾ). ಬಾವಿಯ ಮಧ್ಯಭಾಗ : ಶ್ರೀವಿಜಯಮುನಿ ಹೋಗಿ ತಾ ನಡುಬಾವಿಯುಲಿ ಬಿದ್ದನು (ಬಸಪು. ೫೧-೧೭). [ ನಡು$_{2}$ + ಬಾವಿ ]

ನಡುಬೀಡು (ನಾ). ಸ್ವಲ್ಪ ಬೆಳೆ ಬೆಳೆಯುವ ಹೊಲ ಮುಂತಾದುವು : ಕೀಳು ಮೇಲು ನಡುಬೀಡುಬೀಡು ಬಿಯ ತಪ್ಪುವೊಪ್ಪ (ಸಾಇಎ. ೧೯೩೬, ಪುತ್ತೂರು. ೧೧೪-೯ ; 1282). [ ನಡು$_{2}$ + ಬೀಡು$_{2}$ ]

ನಡುಬೀದಿ 'ನಡುವೀದಿ' ನೋ.

ನಡುಬೆಟ್ಟ (ನಾ). ಬೆಟ್ಟದ ಮಧ್ಯಭಾಗ : ನಡುಬೆಟ್ಟಕ್ಕೆ ಹತ್ತುವ ವೇಳೆಗೆ ಬಿಸಿಲೇರಿಬಿಟ್ಟಿತು (ರೂಢಿ). [ ನಡು$_{2}$ + ಬೆಟ್ಟ (<ಬೆಟ್ಟು$_{2}$)]

ನಡುಬೆಟ್ಟು (ನಾ). = ನಡುಬೆರಳು : (ಕ). [ ನಡು$_{2}$ + ಬೆಟ್ಟು$_{3}$ (<ಬೊಟ್ಟು$_{1}$) ]

ನಡುಬೆನ್, ನಡುಬೆನ್ನು (ನಾ). ಬೆನ್ನಿನ ಮಧ್ಯಭಾಗ : ಇಱಿದು ಮರ ದಿಂದವಾಗಳ್ ಕೆಟಗೆಲ್ಲಂ ಪರೆದು ಬಿರ್ದ ಶುಕಸಂತತಿಯಂ ಗಟಗಟಿಸಿ ಕಟ್ಟಿ ನಡುಬೆನ್ನಿಱಿವನೆಗಂ ಪೊತ್ತು ಪೋದನಾ ಮುದುವೇಡಂ (ಕಾದಂಪೂ. ೦೮೭) ; ನಡುಬೆನ್ನಂ ಸಬ್ಬನೆ ಸೀಟಿಯುಂ (ಆಪು. ೧೧-೧೦ ವ). ನಡುಬೆನ್ನು : ಮೂಟೆ ಹೊತ್ತು ನಡುಬೆನ್ನು ಮುರಿದುಹೋಯಿತು (ರೂಢಿ). [ ನಡು$_{2}$ + ಬೆನ್ ]

ನಡುಬೆನ್ನು 'ನಡುಬೆನ್' ನೋ.

ನಡುಬೆರಳು (ನಾ). (ಹಸ್ತದ ಅಥವಾ ಪಾದದ ಐದು ಬೆರಳುಗಳಲ್ಲಿ) ಮಧ್ಯದ ಬೆಟ್ಟು, – ಬೆರಳು : ಮಗುವಿನ ನಡುಬೆರಳಿನಲ್ಲಿ ಉಂಗುರವಿದೆ (ರೂಢಿ). [ ನಡು$_{2}$ + ಬೆರಳು ( < ಬೆರಲ್ ) ]

ನಡುಬೊತ್ತು, ನಡುಹೊತ್ತು (ನಾ). = ನಡುನೇಸಱ್ : ಮತ್ತದಂ ಪೊಗೆ ಹೋದ ತಱಿಗೆಂಡದೊಳಗೆ ನಡುಬೊತ್ತಾಗುವನ್ನವರ ಮಱುಚ್ಚಳಂ ಮುಚ್ಚಿರಿಸಿ (ಸೂಪಶಾ. ೨-೧). ಅಂಬರಮೆಂಬವನಿಯ ಹೊತ್ತ ಭೂಧರ ಮೆಂಬ ಶೇಷನ ಮಸ್ತಕದ ಕೆಂಬೆರಲೆನೆ ನಡುಬೊತ್ತಿನೊಳೆಸೆದುದು ಬಿಂಬ ಮಂಭೋರುಹಸಖನ (ಶ್ರೀಪಾಲ. ೪-೪೯). ನಡುಹೊತ್ತು : ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇನೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ಸಾಗಿ ಬಂದೆವು (ಹಾಹುತ್ತ. ೯೦). [ ನಡು$_{2}$ + ಪೊತ್ತು$_{3}$ ( < ಪೊಟ್ಟು ) ]

ನಡುಭವಗಾವುಂಡ (ನಾ). ಒಬ್ಬಾತನ ಹೆಸರು: ಅಂಕಗವುಣ್ಡಗೆ ಪಲಮ್ಮೆಚಿ ಗಾವಣ್ಡಂ ನಡುಭವಗಾ[ವು]ಣ್ಡಂಗೆ ತೆಲುಂಗರ ಮಾರಗಾವುಣ್ಡನೊಳ್ಪಡ್ಡಿಟ (ಎಕ. IV, ಹೆಗ್ಗಡ, ೧೨೪-೧೮ ; 1037). [ ? + ಗಾವುಂಡ ( < ಗಾಮುಂಡ ) ]

ನಡುಭಾಗ (ನಾ). ಮಧ್ಯಭಾಗ : ನದಿಯ ನಡುಭಾಗದಲ್ಲಿ ಬಹಳ ಆಳವಿದೆ (ರೂಢಿ). [ ನಡು$_{2}$ + ಭಾಗ ]

ನಡುಮಂಡೆ (ನಾ). = ನಡುದಲೆ : ಭಂಡರಾದೆವಲಾಯೆನುತ ನಡುಮಂಡೆಯನು ತುಡುಕಿದನು ಮೆಱೆವುದ್ದಂಡಜಡೆಯನು ಕಿತ್ತು ಬೀಸಾಡಿದನು ಭೂತಳಕೆ (ನಿಭಾಗ. ೪-೨-೪) ; ದಂಡೆ ಕಾಣದು ನಮ್ಮೂರು ನಡುಮಂಡೆ ಸ್ಥಳವೆ ನಮ್ಮೂರು (ಪುರಂದ. ೫-೭೧-೧). [ ನಡು$_{2}$ + ಮಂಡೆ$_{1}$ ]

ನಡುಮಟ್ಟ$_{1}$ (ನಾ). ನಡುವಿನ ಮಟ್ಟ ; ಸೊಂಟದ ಸಮ : ಅವನು ನಡುಮಟ್ಟದ ನೀರಿನಲ್ಲಿ ನಿಂತಿದ್ದಾನೆ (ರೂಢಿ). [ ನಡು$_{2}$ + ಮಟ್ಟ$_{1}$ ]

ನಡುಮಟ್ಟ$_{2}$ (ಅ). ಸೊಂಟದ ವರೆಗೆ ; ಸೊಂಟದ ತನಕ : ಆ ಕೆರೆಯಲ್ಲಿ ಒಬ್ಬ ಮನುಷ್ಯನ ನಡುಮಟ್ಟ ಬರುವಷ್ಟು ಮಾತ್ರ ನೀರಿದೆ (ರೂಢಿ). [ ನಡು$_{2}$ + ಮಟ್ಟ$_{5}$ ]

**ನಡುಮಣ್ಣು** (ನಾ). (ತಕ್ಕಮಟ್ಟಿಗೆ ಚೆನ್ನಾಗಿರುವ) ಮಧ್ಯಮವರ್ಗದ ಭೂಮಿ: (ಕಿಸಂಗ್ಲಾ. ೧೭). [ ನಡು₂ + ಮಣ್ಣು (<ಮಣ್) ]

**ನಡುಮಧ್ಯ₁** (ನಾ). ನಡುಭಾಗ; ಮಧ್ಯಭಾಗ; ನಟ್ಟನಡುಮ: ನಡುಮಧ್ಯದಲ್ಲಿ ನಕ್ಷತ್ರ ಉದಯವಾಗಲು . . . ಕಾಳಲಾದೇವಿ ಕೆಡೆವಂಟಿ ದೋಡಿದಳು ನೋಡಾ (ಸಿದ್ಧೇವ. ೪೮-೧೩೫); ಸುತ್ತ ಮೆರದಿಹ ಸೇನೆ ನಡುಮಧ್ಯದೊಳು ಹಿಮಕರನಾ ಚಿತ್ರಭವನವೊಯೆನಲು ರಂಜನೆವೆತ್ತ ನಿಜಬೀಡಿನಲಿ . . . ಎಸೆದನು ಕೇಳು ಕೌರವನು (ಜೆನಭಾ. ೫೭-೨); ಬಿಡಾರವಿರುವವನಿಗೆ ನಡುಮಧ್ಯವಾದರೇನು? (ಗಾದೆ).
[ ನಡು₂ + ಮಧ್ಯ₁ ]

**ನಡುಮಧ್ಯ₂** (ಅ). ಮಧ್ಯಭಾಗದಲ್ಲಿ; ನಟ್ಟನಡುವೆ: ನಡುಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು (ರಾಜೇಂದ್ರ. ೨೭).
[ ನಡು₂ + ಮಧ್ಯ₂ ]

**ನಡುಮಧ್ಯೆ** (ಅ). ಮಧ್ಯಭಾಗದಲ್ಲಿ; ನಟ್ಟನಡುವೆ: ಇಬ್ಬರು ದುಷ್ಟರಿಗೆ ಜಗಳವಾಗುತ್ತಿರುವಾಗ ನಡುಮಧ್ಯೆ ಪ್ರವೇಶಿಸುವುದು ಅಪಾಯಕರ (ರೂಢಿ); ನಡುಮಧ್ಯೆ ಇವರ ಕಿತಾಪತಿ ಬೇರೆ (ರೂಢಿ). [ ನಡು₂ + ಮಧ್ಯೆ₂ ]

**ನಡುಮನೆ** 'ನಡಂಮನೆ' ನೋ.

**ನಡುಮರ** (ನಾ). ವೃಕ್ಷದ ಮಧ್ಯಭಾಗ: ನಡುಮರ ಹತ್ತಿ ಬುಡ ಕಡಿದ (ಗಾದೆ). [ ನಡು₂ + ಮರ₁ ]

**ನಡುಮಾಳ** (ನಾ). ಮೈದಾನದ ಮಧ್ಯಭಾಗ; ನಡುಂಬಯಲು; "ನಟ್ಟಡವಿ" (ಶಮದ. ನ. ೧೯೩ ಅಡಿಟಿ): ಉಕಾರಕ್ಕೆ: ಕಡುಗುದುರೆ, ಕಡುಗಾಳಿ . . . ನಡುಸೆಟಿಂಗು, ನಡುಮಾಳಂ. ನ[ಪಾಠಾಂ. ನಿ]ಡುಮಾಳಂ ಮುಂದೆ ನೀರಿಲ್ಲಣಮ ಮಗುಟಿಟ್ಟೊಡಂ ಪಿಂದಣೂರ್ಗೆಂಟು (ಶಮದ. ನ. ೧೯೩ ಪ್ರಯೋ). 'ನಿಡಂಮಾಳ' ಪರಾ. [ ನಡು₂ + ಮಾಳ₄ ]

**ನಡುಮುರಿ₁** (ಕ್ರಿ). ೧. ಸೊಂಟ ಬಾಗಂ, - ಬಗ್ಗು: ನಡುಮುಟಿ[ರಿ]ದು ಗುಡುಗೂಟಿ ತಲೆ ನಡುಗಿ . . . ಒಂದನಾಡಹೋಗಿ ಒಂಬತ್ತನಾಡುವರೂ ಹಿರಿಯರೆ (ಚನ್ನವ. ಕ. ೧೫೪-೩೫೩). ೨. (ಅಲಂ) ಸಂಪೂರ್ಣ ಶಕ್ತಿಗುಂದಂ. [ ನಡು₂ + ಮುರಿ₁ ]

**ನಡುಮುರಿ₂** (ಕ್ರಿ). ೧. ಸೊಂಟವನ್ನು ಮುರಿದಂಹಾಕು. ೨. (ಅಲಂ) ನಾಶಮಾಡು; ಹಾಳುಮಾಡು: ಬರುತದೆ! ಮೈತೋರದೆ ಬರುತದೆ! ಆದೆ - ನಡುಮುರಿಯುತ ನಗನಾವೆಗೆ, ಕೂವೆಗೆ (ಕಎಪು. ೨೭-೩).
[ ನಡು₂ + ಮುರಿ₂ (<ಮುಟಿ₁) ]

**ನಡುಮೂಗು** (ನಾ). ಮೂಗಿನ ಮಧ್ಯಭಾಗ; ನಾಸಿಕದ ನಡುಭಾಗ: ನಡುಮೂಗು, ನಾಸಾಸೇತು (Bridge of the nose. ಪಾರಿನಿ. ೧೦).
[ ನಡು₂ + ಮೂಗು₁ ]

**ನಡುರಂಗ** (ನಾ). (ದೇವಸ್ಥಾನದ) ಮಧ್ಯಭಾಗದಲ್ಲಿರುವ ರಂಗಮಂಟಪ, - ಸಭಾಮಂಟಪ; ನವರಂಗ: ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಟಿಗು ತಾ ಕಲ್ಲು ವರವನು ಕೊಡುವಾತ ಬೇಟಿ (ಸರ್ವಜ್ಞ. ೨೦೫). [ ನಡು₂ + ರಂಗ₂ ]

**ನಡುರಾತ್ರಿ** (ನಾ). ಮಧ್ಯರಾತ್ರಿ; ಸಮರಾತ್ರಿ: ನಡುರಾತ್ರಿಯಿಂದ ಮುಂಜಾನೆ ನಾಲ್ಕು ಗಂಟೆಯ ತನಕ ವಿಶ್ರಾಂತಿ ತೆಗೆದುಕೊಳ್ಳುವರು (ರಾಜಮ. ೭೮). [ ನಡು₂ + ರಾತ್ರಿ ]

**ನಡುರಾತ್ರೆ** (ನಾ). = ನಡುರಾತ್ರಿ: ಆತನಿಗೆ ಈಗ ನಡುರಾತ್ರಗೆ ತನ್ನನ್ನು ಕರೆದು ಪಸೆ ತುಂಬಿದ ಕಣ್ಣುಗಳಿಂದ 'ನನ್ನನ್ನು ರಕ್ಷಿಸು' ಎನ್ನುತ್ತಿದ್ದ ತಂಗಿಯನ್ನು ಇದಿರಿಸುವುದು ಸಾಧ್ಯವಾಗಲಿಲ್ಲ (ವಾತ್ಸಲ್ಯ. ೩೩೭); ಈ ನಡುರಾತ್ರೆಯಲ್ಲಿ ಭೀತಿಯಿಲ್ಲದೆ ನನ್ನ ಬೆಂಬತ್ತಿ ಬಂದವನು ನೀನು ಯಾರು? (ಬತ್ತೀಸ. ೩೦). [ ನಡು₂ + ರಾತ್ರೆ ]

**ನಡುವಂತರ** (ನಾ). ೧. ನಡುವೆ ಇರುವ ಸ್ಥಳ. ೨. ಮಧ್ಯದ ಅವಸ್ಥೆ, - ಕಾಲ: ಹೀಗೆ ನಡುವಂತರದಲ್ಲಿ ಕೈಬಿಟ್ಟುಬಿಟ್ಟರೆ ಯಾರು ಗತಿ? (ರೂಢಿ).
[ ನಡು₂ + ಅಂತರ ]

**ನಡುವಗಲ್**, ನಡಂಪಗಲ್, ನಡಂಬಗಲು, ನಡಂಹಗಲಂ (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ; ನಡಂಹೊತ್ತು: "ಮುಂಬಗಲ್, ನಡುವಗಲ್, ನಡೆವಗಲ್ - ಇವು ೩ ತ್ರಿಕಾಲಂಗಳ್" (ಕಶಸಾ. ೫೭-೨೫೦); ನಡುವಗಲ ಬಿಸಿಲ್ಗನ್ನಂ ಸುಡೆ ವನಕರಿ ಕಮಳಬಂಧುವೊಳ್ದನಕರನೊಳ್ ಕಡುಗಾಯ್ಪನೆ ಸರಸಿಜವಂ ಕಿಡಿಸಲ್ಕಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ೩-೧೧೪); ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೩); ಕಡುಪೊತ್ತಾದುದು ರವಿಯುಂ ನಡುವಗಲೊಳ್ಳಿಂದು ಕೆದಟಿದಂ ಕರತತಿಯಿಂ ಕಿಡಿಗಳನೆನೆ ಬಿಟಿುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾದಂಪೂ. ೧೯೭); ನಡುವಗಲಾದಿತ್ಯನಂತೆ ನೋಡಲರಿದು (ಧರ್ಮಾಮ್ಮ. ೩-೧೮೬); ಸೊಲ್ಲಿಸಲು ಬಾರದಾನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨-೧೭); ನಡುವಗಲೊಳ್ ಕಡುನೀರ ನೊಲೊಡವರೆದ ಬಳಲ್ಕೆಗಳೆಯಲೆಳಸಿ ಘಳಿಲನೊಳಪೊಕ್ಕು ಮೈದೊಳೆದು (ರಾಜಶೇ. ೬-೨೪೮); ನಡುವಗಲ ಭಾಸ್ಕರಂ ನಿಶ್ಚಲಂ ಪೊಳೆಯುತಿರ್ದಂ (ರಾಮಾಶ್ವ. ೩೧-೧೩). **ನಡುಪಗಲ್**: ಮರುಸ್ಥಳದ ಮಾಳದೊಳ್ ನಡುಪಗಲ್ವರಂ ಗ್ರೀಷ್ಮದೋಳ್ ಸುರುಳ್ವನೆಗಮಟ್ಟಿ ಬೇವವರ್ಗೆ ಜೋಂಪಮಿಮ್ಮಾವು ನಿಜ್ಜರಾಂಬು ದೊರೆಕೊಳ್ವವೊಲ್ (ಆದಿಪು. ೧೩-೮೭); ನಡೆಯಲ್ವೇಡೆಂದು ಪೋಗಿ ಕಾಲ್ಗೆ ಬಿಗಿದವೋಲಡಿವೊದಲಂ ಸಾರ್ದ ನೆಟಲ್ ನಡುವಗಲಂ ನಿಗದಿಸಿತ್ತು ಮುನಿಪತಿಗಾಗಳ್ (ವರ್ಧಪು. ೩-೨). **ನಡುವಗಲು**: ನಡುವಗಲಿನ ಸನ್ನೆಯಾದುದು ವಾದಕರೆಡಬಲಕೊಲೆದು ಸಾಗಿದರು (ಭರತ. ೧೭-೧೩೪); ನಡುವಗಲಿನ ಬೇಸಗೆಯ ಮಾರ್ತಂಡನ ಕಡುರುಳುದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತುಸಾವಿರಬಲ ಮಡಿದುದು (ಕಂಎವಿ. ೧೫-೮೫); ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಯೂಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೊಲ್ (ಶಾಕುಂತ. ೬೨-೧೦೫); ಬೆಳಗು ಬೈಗನು ದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡುವಗಲು ಕುದಿಸಿ ಒಣಗಿಸಿ (ನಲಮು. ೬೪-೫). **ನಡುಹಗಲು**: ಕಂಡಿರೇ ಮುರವೈರಿ ದಳಪತಿ ಚಂಡಬಳನಹ ನಡುಹಗಲ ಮಾರ್ತಾಂಡನಂತಿರೆ ತೋಱುತೈದನೆ ರಥವ ತಿರುಹೆಂದ (ಕುವ್ಯಾಕ. ೧೪-೩೭); ನಡುಹಗಲ ಸೂರ್ಯನನಳುಕಿಸುವುದೇ ಮಂಜು (ನಿಭಾಗ. ೧೦-೫೭-೪೮); ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊಲ್ಲೊಥಾ. ೧೧-೨೬೨); ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು (ರಾಮಾನಿ. ೧೦೬); ನಡುಹಗಲಲ್ಲಿ ಸೂರ್ಯನ ಸೆಕೆಯಿಂದ ಪಾರಾಗಲು, ತಂಪಾದ ನೆರಳಲ್ಲಿ ಮಲಗಿ ವಿಶ್ರಾಂತಿ ಪಡೆದರು (ಮಚಿಸ. ೭೯).
[ ನಡು₂ + ಪಗಲ್ ]

**ನಡುವಗಲು** 'ನಡುವಗಲ್' ನೋ.

**ನಡುವಗಲ್ಪಂಜು** (ನಾ). (ದೇವರ ಅಥವಾ ಹಿರಿಯ ವ್ಯಕ್ತಿಗಳ ಗೌರವಾರ್ಥವಾಗಿ) ಮಧ್ಯಾಹ್ನದಲ್ಲಿ ಉರಿಸುವ ಪಂಜು; ಹಗಲುದೀವಟಿಗೆ: ಪಿಡಿದೆರಳ್ ಸತ್ತಿಗೆಗಳೆರಡೆರಳ್ ಚಮರಗಳ ನಡುವಗಲ್ಪಂಜುಗಳ . . . ಗದಾದಿಯಾಯುಧಮನುಟಿ ಜಡಿವುತ್ತ ಸಿಡಿಲ ಬಳಗಂಗಳೆನೆ ಬಂದುದು ಪದಾತಿಬಲಮೇನೆಂಬೆನು (ಚಿಬಪು. ೪೭-೩೭). [ ನಡುವಗಲ್ + ಪಂಜು ]

**ನಡುವಟ್ಟು** (ನಾ). ಬಿಂಬದ ಮಧ್ಯಭಾಗ; ಮಂಡಲದ ನಡುಭಾಗ: ಒಡಲೊಳ್ ಪೊತ್ತಪನಾವ ವಸ್ತುವನಹೀಂದ್ರಂ ಕಂದದೊಳ್ ತಾರ್ಕ್ಷನುಂ ನಡುವಟ್ಟೊಳ್ ಪಗಲಾಣ್ಮಂ . . . ತೊರ್ದರ್ಕಾ ಪರವಸ್ತು ವೀರ ಚಿಕದೇವೇಂದ್ರಕ್ಷಮಾಪಾಲನಂ (ಚಿಕವಿ. ೫-೨); ಅಚ್ಚಪೊಚ್ಚಪೊಸ ಸೇವಂತಿಗೆಯೆಸಟ್ಟರದ ಸುತ್ತಿನಿಂದಿನಿಸುಂ ನಡುವಟ್ಟನುಟಿದು ತಲೆಯೆಡೆಯಂ

ಬೆಳರ್ಪಿಸುವೋರೆಸಿಕ್ಕ ತನ್ನ ಕುಲದೇಟ್ಗಿಯಂ ನಿಟ್ಟಸಲ್ಕಿಟಿತಂದ ಚಂದಿರನೆಂಬ ಸಂದೆಯುಮಂ ಸಮನಿಸುತ್ತಿದೆ (ಚಿಕವಂ. ೮೧-೩೧).

[ ನಡು$_2$ + ಬಟ್ಟು$_1$ ]

**ನಡುವಟ್ಟೆ** (ನಾ). ಮಧ್ಯದಾರಿ ; ಮಾರ್ಗಮಧ್ಯ : ಪೆಸರ್ವೆತ್ತ ತೀರ್ಥ ಕ್ಷೇತ್ರಂಗಳೊಳ್ ಸಂಚರಿಸುತಿಪ್ಪನ್ನಂ ನಡುವಟ್ಟೆಯೊಳ್ ಪಲಂಬರಂ ಕರ್ವೇಡರಂ ಕಂಡಂ (ರಾಮಾಶ್ವ. ೭೭-೧೩). [ ನಡು$_2$ + ಬಟ್ಟೆ$_1$ ]

**ನಡುವನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಭಾಗ: ನೆರಹಿದರದಟಗಂಧರ್ವರು ಭಟವ್ರಜವ ಬಂದುದದು ನಡುವನಕೆ ಕೌರವ ವೃಂದವನು ಕರೆದರು ವಿನೋದಕೆ ಬಂದಿರ್ದ್ದ ನಾರಾಚಸಲಿಲಕ್ರೀಡೆಯಿದೆ ಯೆನುತ (ಕುಮ್ಮಾಭಾ. ೧೪-೩೩). [ ನಡು$_2$ + ವನ ]

**ನಡುವನೆ, ನಡುಮನೆ** (ನಾ). ಮನೆಯ ಮಧ್ಯಭಾಗ : "ನೆಟ್ಟಿ ನಡುವನೆ ನಟ್ಟವನೆಯುಮಕ್ಕು ಬುಧರಿಂ" (ಕವಿಕಂ. ೧೪೪). ನಡುಮನೆ : "ನಟ್ಟವನೆ ಯೆನೆ ನಡುಮನೆಯುಮಕ್ಕು" (ಕಬ್ಬಿಕೈ. ೪೩); ಅಸುವೆಪೊರಲೊನಕೆ ಗೂಟಂ ಪೊಸತಿಲು ನಡು[ಪಾಠಾಂ. ಮನೆ]ಮನೆಯ ಕಂಭವೊಲೆ ಪಡಿ ಪಾಲುಂ . . . ಸಮಸ್ತಂ ದೆಯ್ವಮಿಂತಿವೆಂಬಮರ್ಾೀರ್ಥರ್ (ಸಮಪ. ೯-೮೨); ನಡುಮನೆ ಯೊಳಿರ್ದವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ ಸುಟ್ಟನೆ ಸುಯ್ದು ಬಂದ ಭಕ್ತರ್ಗೆ ನೆಟಿ ಬೋನವಂ ಮಾಡುತಿರೆ (ಕಲಿಕಾ. ೭೭-೦೭) ; ತನ್ನ ಭಾತ್ರುನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತರಳಲಾಗದೆಂದು ನಿಯಮವಾಜ್ಞೆಯಂ ಕೊಟ್ಟು ಪೋಗೆ (ಧರ್ಮಪ. ೩-೦೩ವ); ನಡುಮನೆಯೊಳಗೊಂದು ನಾಲ್ಕು ತೆಂಗಿನ ಮರ . . . ತಲೆ ಮೊದಲಿಲ್ಲದೆ ಬೆಳದು ಹಣ್ಣಾಯಿತು (ಪುರಂದ. ೨-೧೯೧ ಪಲ್ಲವಿ) ; ಊಟವಾದ ಮೇಲೆ ನಡುಮನೆಯಲ್ಲಿ ಕುಳಿತುಕೊಂಡು ಮೂವರೂ ಲೆಕ್ಕದ ಪರಿಶೀಲನೆ ಮಾಡ ತೊಡಗಿದರು (ಮರಳಿ. ೧೫೮) ; ವೆಂಕಮ್ಮನವರು ನಡುಮನೆಗೆ ಬಂದು ಹುಡುಗರ ಗುಂಪನ್ನು ನೋಡಿ ಸ್ವಲ್ಪ ದಿಗಿಲು ಬಿದ್ದರು (ಕಳಹು. ೧೦).

ನಡುಮನೆ ಕಂಬ = ಮನೆಗೆ ಆಧಾರಸ್ತಂಭದಂತಿರುವವನು ; ಮನೆಯಂ ಹಿರಿಯ,-ಮುಖ್ಯಸ್ಥ. [ ನಡು$_2$ + ಮನೆ ]

**ನಡುವರಿ** (ನಾ). [ನಾಟ್ಯ] ಕರಣಗಳಲ್ಲಿ ಒಂದು ಬಗೆ: ನಡುವರಿ ಮೊಸಳೆವರಿ ಜಲಶಯನಚ್ಯುತಂ ಮತ್ಸ್ಯಪುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ . . . ಎರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಪ. ೨-೨೭ವ). [ ? ]

**ನಡುವಲೆ** (ನಾ). ಬಲೆಯ ಎರಡುಂ ಬೇರೆ ಬೇರೆ ಕೊನೆಗಳನ್ನು ಭೂಮಿಯಲ್ಲಿ ನಾಟಿರುವ ಒಂದು ಬಗೆಯ ಬಲೆ (?) : ತಡಿಕೆವಲೆ ಕಣ್ಣವಲೆ . . . ನಡುವಲೆ ತಡೆವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (೧೦ಕೆ. ೧-೮೦). 'ನಡೆವಲೆ' ಪರಾ. [ ನಡು$_1$ + ಬಲೆ$_1$ ]

**ನಡುವಳಿ** (ನಾ). ಮಧ್ಯಭಾಗ : ನೀರಳ್ಳಿ ಹಸಿಯಲ್ಲದ ಹುಡಿಯ ತುಪ್ಪದಿ ಹುರಿದು ಮತ್ತಮಾ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡು . . . ನಾರಿಂದಮ ಬಿಗಿವುದು (ಸೂಪಶಾ. ೫-೦೩) ; ಆ ಮಧ್ಯದ್ವೀಪದ ನಡುವಳಿಯ ಮಹಾಮೇರುಮಹೀಧರಮೆಸದತ್ತು (ಜಯಕಾ. ೧-೩೨).

[ ನಡು$_2$ + ಬಳಿ$_3$ (< ಬಟ್ಟೆ$_2$) ]

**ನಡುವಾಯ್, ನಡುಪಾಯ್** (ಕ್ರಿ). ೧. ನಡುವೆ ಹಾಯಲು ; ಮಧ್ಯೆ ಪ್ರವೇಶಿಸು. 'ನಡುವಾಯಿ' ಪರಾ. ನಡುಪಾಯ್ : ೨. ಕಾಲಕ್ಕೆ ಮುಂಚಿತವಾಗಿ ಹೊರಬೀಳು ; ಮಧ್ಯಕಾಲದಲ್ಲಿ ನೆಗೆ : ಈಂಬ ಸಿಂಹಿಕಿಶೋರಂ ನಡುಸೂಲೊಳ್ಸರ್ಕೆ ಕಣ್ಣಂ ತೆಱಿದಿ ಭಪತಿಯಂ ತಾಟಿಲೊಳ್ಕಂಡು ಕಾಯ್ಪಿಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ಪಂದುದುದಂತೊಂದಲಂಪಂ (ಅನಂಪು. ೧೨-೬೨).

[ ನಡು$_2$ + ಪಾಯ್$_1$ ]

**ನಡುವಾಯಿ** (ನಾ). ಮಧ್ಯೆ ಪ್ರವೇಶಿಸುವವನು ; ನಡುವೆ ತಲೆಹಾಕು ವವನು : ಬಣಗುಗಳು ಭೀಮಾರ್ಜುನರು ಕಾರಣಿಕ ನೀ ನಡುವಾಯಿ ಧರ್ಮದ ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ (ಕುಮ್ಮಾಗ. ೮-೩೯). [ ನಡುವಾಯ್ + - ಇ$_3$ ]

**ನಡುವಾಯು** (ನಾ).ಸೊಂಟದಲ್ಲಿ ಬರುವ ವಾಯುರೋಗ,-ಸಂಧಿವಾತ: (ಕಿಸಂಗ್ಣ. ೧೧೮). 'ಕಟಿವಾತ' ಪರಾ. [ ನಡು$_2$ + ವಾಯು ]

**ನಡುವಿಡಿ** (ಕ್ರಿ). ನಡುವನ್ನು ಹಿಡಿ ; ಸೊಂಟವನ್ನು ಬಳಸು : ಉಟ್ಪರ್ಪ ಬೆಳ್ದಳಿಂಬಂ ಸುತ್ತಿ ನಡುವಿಡಿದ ಕಟ್ಟಣಿಗೇಂ ನೇವಳಂ ಬಿಗಿವುದಲ್ತೆ (ಕಾಲಚರ. ೧೪೮-೩೩). [ ನಡು$_2$ + ಪಿಡಿ$_1$ ]

**ನಡುವಿರುಳ್$_1$, ನಡುವಿರುಳು$_1$** (ನಾ). = ನಡುರಾತ್ರಿ : "ನಿಶೀಥಃ, ಮಹಾನಿಶಾ - ಈ ೨ ನಡುವಿರುಳ್" (ಹಲಾಯು. ೧೯-೦೦೯) ; ಜಿನಮಂದಿರ ದೊಳ್ ನಡುವಿರುಳಪ್ಪಿನಂ ಪೂಜಾವೈಭವಮಂ ನೋಡುತ್ತಿರ್ದು (ಧರ್ಮಾಮೃ. ೨-೨೦೭) ; ನಡುವಿರುಳೊಳಿದ್ದ ಕುರುಡಂಗೆ ಆಗಸಿಯಲ್ಲಿ ಬೆಳಗಾದಂತೆ (ಬಸವ. ೨೮೭). ನಡುವಿರುಳು$_1$: ನಡುವಿರುಳಲ್ಲಿ ಹೊರಟವರಿಗೆ ಹೆಬ್ಬಾಗಿಲಲ್ಲಿ ಬೆಳಗಾಯಿತು (ಗಾದ). [ ನಡು$_2$ + ಇರುಳ್ ]

**ನಡುವಿರುಳ್$_2$, ನಡುವಿರುಳು$_2$** (ಅ).ಮಧ್ಯರಾತ್ರಿಯಲ್ಲಿ; ನಡುರಾತ್ರಿಯ ಸಮಯದಲ್ಲಿ : ನಡುವಿರುಳ್ ಕರ್ಪಟಮಂ ಪಱಿದುಟ್ಟು ನಾಗಪುರಕ್ಕೆ ಪೋಗಿ (ಶಾಂತಿಪು. ೯-೫೦ವ) ; ನಡುವಿರುಳಪರ್ ನಾಟಕಂ ನಲಿದು ಮುಱಿ ದೊಱಗಿರ್ದ ಸಮಯದೊಳ್ (ಪಂಚತಂ. ೨೭೯-೧) ; ನಡುವಿರುಳಾರುಮಿಲ್ಲ ದೆಡೆಯೊಳ್ ಕೊರಲೊಳ್ ವಧು ಕೋದು ಬಳ್ಳಿಯಂ ಮಡಿಯಲೊಡರ್ಚೆ (ಪಂರಾಮಾ. ೮-೦೫) ; ತರುಣಿ ನಡುವಿರುಳೈದಿ ಕರ್ಣನ ಹೊರೆಯೊಳಾ ವಿರ್ಭವಿಸಲು (ಕುಮ್ಮಾಭಾ. ೦೧೩. ೨೩-೪). ನಡುವಿರುಳು$_2$ : ನೆಲೆವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಗೆಯೊಳಿರ ಲಂದು (ನಂಚಿರ. ೭-೫೪) ; ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ (ಕುಮ್ಮಾದ್ರೋ. ೯-೩) ; ಪೊಡವಿಪತಿಯೆಡೆಗೊಯ್ಯೆಯಾತನ ಬಿಡಲಿ ಮೇಣಲ್ಲದೊಡೆ ಕೊಲಿಸಲಿ ನಡುವಿರುಳು ರಣದೊಳಗೆ ಕೊಂದುದ ಮಱಿದುದಿಲ್ಲೆಂದ (ಕಾಶಿರಾ. ೩೯-೯೭) ; ದೀವಿಗೆಯು ಕಡುಬೆಳದು ಸುಟ್ಟುದೆನಿಪ ಶಂಕೆಯ ಬೆಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಹೊಱಮಟ (ಸಾಳ್ವಭಾ. ೩೫-೫); ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ಆಗದರ ನಂಬಿ ಕೆಡದಿರು ನಡುವಿರುಳು ಹೋಗದಿರು ಪಯಣ (ಸರ್ವಜ್ಞ. ೧೫೪೫). [ < ನಡುವಿರುಳ್$_1$ ]

**ನಡುವಿರುಳು$_1$** 'ನಡುವಿರುಳ್$_1$' ನೋ.

**ನಡುವಿರುಳು$_2$** 'ನಡುವಿರುಳ್$_2$' ನೋ.

**ನಡುವೀದಿ, ನಡುಬೀದಿ** (ನಾ). ಬೀದಿಯ ನಡುಭಾಗ ; ದಾರಿಯ ಮಧ್ಯಭಾಗ : ನಿಜಜನನಿ ನೀರ್ಗೆ ಪೋದ ಪೊಳ್ತಿನೊಳಾ ಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು (ರಾಜಶೇ. ೦೩-೯೫ವ). ನಡುಬೀದಿ : ಪಶು ಮಡುವಿನ ಅಗ್ಗಣಿಯ ಕುಡಿದು ನಡುಬೀದಿ ಯಲ್ಲಿ ಬರುತಿರಲು (ಸಿದ್ದೇಶ್ವ. ೪೮-೦೩೭) ; ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ (ದುಂಬಿಕ. ೭) ; ಏನಿಲ್ಲಿ ನಿಂತುಬಿಟ್ಟಿರಿ ಮೂಟೆಗಳ ನಿಳಿಂಹಿ ನಡುಬೀದಿಯಲ್ಲಿ ? (ಚಂದ್ರಸ. ೪೨).

[ ನಡು$_2$ + ಬೀದಿ ]

**ನಡುವು** (ನಾ). ನಡು ; ಮಧ್ಯಭಾಗ : ಮಾನಂಬುಟುವುಮಂ ನೀರಿಲ್ಲದ ಕೆಱಿಯ ನಡುವುಮಂ . . . ಇಂತೀ ಪದಿನಾಱುಂ ಕನಸುಗಳಂ . . . ಕಂಡೆನೆಂದುಱಿ (ವಡ್ಡಾರಾ. ೮೫-೨೭) ; ನಡುವಿನಲ್ಲಿ ಅಧಿಕಾರ ಬಂದರೆ ಅವನನ್ನು ಹಿಡಿಯ ಸಲ್ಲ, ನಡುವಿನಲ್ಲಿ ಸೀರೆ ಹರಿದರೆ ಉಡ ಸಲ್ಲ (ಗಾದ).

[ ದೇ.॥ ತಮಿ. ನಟುವು ; ತುಳು. ನಡುವುಲು ; ತೆಲು. ನಡುಮು.]

**ನಡುವೂರು** (ನಾ). ಊರಿನ ಮಧ್ಯಭಾಗ ; ಪಟ್ಟಣದ ಮಧ್ಯಸ್ಥಳ,-ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ... ಹುಸಿಯ ಬೊಗಳಿ ವ್ಯಾಪಾರದ ಮಱಿಯಿಂದ ನಡುವೂರ ಬೀದಿ ನಡುವೆ ಕುಳಿತು (ಮಡಿಮಾ. ೪೭-೬೪). [ ನಡು₂ + ಊರು₃ ( < ಊರ್ ) ]

**ನಡುವೆ, ನಡವೆ** (ನಾ). ಮನೆಯ ಮಧ್ಯದ ಭಾಗ; ನಡುಮನೆ : ಇಪ್ಪುರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಮ್ಮೆಯ್ಯ ಬಂದು ನಿಂತಿದ್ದರು (ಚಂಗಾಳ್ಕ.೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೧೩೭). ನಡವೆ : ಒಡನಾ ಪೂರ್ಥತ್ತಾಟ್ಟಾರ್ ನಡವೆಯೊಳಿನಿತೆಡೆಯನೀವುದೆನೆ (ದಿವ್ಯಚ. ೩-೯) ; ಗಣಿಕಾವನಿತಾಲಯಂ ಮೆರೆಗುಮವುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಪಂಜರದಲ್ಲಿ (ಅರ್ಜಾವಿ. ೨೦-೩೮ವ) ; ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾಮಂ.IV, ೨೮); ಅಂದಣಾವನೇರಿ ಬಂದಳಣ್ಣನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿ.ಪ. ೧೦೨). [ <ನಡು₂./ ತೆಲು. ನಡುವ, ನಡವ ]

**ನಡುವೆ₂** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊೞ್ತಱಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇೞ್ದೊಡೆ (ವಡ್ಡಾ.ಕಾ. ೧೦೨-೧೦) ; ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಱ ಪತ್ತುಂ ಪೊಟಲ್ಗಳನೊಳಕೊಂಡು (ಆದಿಪು. ೧-೯೨ವ): ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಪಂಪಭಾ. ೨-೭೩ವ) : ಮೂಱುಂ ಬೆಳ್ಗೊಡೆಯ ನಡುವಿರ್ಪ ನೀನಿರ್ದೆಡೆಯುಮನೆಮಗಱಿಯದಂತುಟಾದುದೆ ಮಗನೇ (ಗದಾಯು. ೩-೭೪) ; ದುಷ್ಕರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖಮಾಗಲಱಿಯದು (ಪಂಚತಂ. ೧೯೬-೧) ; ಕೂಡಲ ಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು (ಬಸವ. ೧೯೩) ; ಬಿಡದೆ ಬೆಂಡೆದ್ದೇಳ್ವ ತಲೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತಿ (ಕುಮ್ಮಾದ್ಯಾ. ೧೨-೨೩) ; ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೧೭).

ನಡುನಡುವೆ, ನಡನಡುವೆ (ದ್ವಿರುಕ್ತಿ) : ನಡುನಡುವೆ ಯಮನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯ ದಂತೆ ನೀ ದಯಮಾಡೊ (ಪುರಂದ. ೩-೧೭೭-೩) : ಈ ವನದ ನಡುನಡುವೆ ತೊಳತೊಳಗುತಿರುತಿಹ ಸರೋವರದೊಳೆ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಭಾ. ೩-೬೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಅಡುಸೌ. ೫೩) ; ನಡನಡುವೆ "ಚಾಯ್‌ಗರಮ್" ದವರ ಬಾಯಿ-ಗರಮು ಗದಗದಿಸುತ್ತಿತ್ತು (ದೀಪಹ. II, ೩೮೮). [ <ನಡುವೆ₁./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,-ಮಧ್ಯಭಾಗ : ಸಿಡಿಲಾಳ್ ತಡೆಯುದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧-೬). [ ನಡು₂ + ಬೆಟ್ಟು₂ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯-೧೮).

[ ನಡು₂ + ಪೊಗು(<ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,-ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯ ಹೊತ್ತು. ಜನ ಸುಗ್ಗುತ್ತಿದ್ದಾರೆ (ರೂಢಿ). ೩. ಹೇರಳವಾಗಿರುವಿಕೆ ; ಆಧಿಕ್ಯ ; ಯಥೇಚ್ಛವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆಯಾದುದಾಸ್ಥಾನ (ಶ್ರೀಪಾಲ. ೩-೭) ; ತೆಂಗಿನ ನಡುಸಂತೆಯಲ್ಲಿ ಕಾಯಿಗೆ ಬರವೇ ? (ರೂಢಿ). [ ನಡು₂ + ಸಂತೆ₁ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,-ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ "ನಡು-ಸರಕು" ಆಗಬಹುದು (ಮಾವಾದ. ೧೧೪).

[ ನಡು₂ + ಸರಕು₃ ]

**ನಡುಸರು** (ನಾ). ನಡುವಿನ ಉಸಿರು ; ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದುರ್ವಾರಿಕಲ್ಗಳಂತೊಡನೆ ಸುರನದಿಯ ನಡುಸರು ಬಿರ್ದವಂತಾಗ ಮ್ರುಡ ಪೊಡವಿದಣಿದಮೃತಫಲ ಬತ್ತದಂತಾಗ ಕೊಡುತಿರ್ದ ಶರಣಜನಕೆ (ಮರುಚಾ. ೧-೯).

[ ನಡು₂ + ಉಸರು₀ ( < ಉಸಿರ್₂ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೧೯೮) ; ಪಡಸಾಲೇ ಊಟ. ನಡುಸಾಲೇ ನಿದ್ರೆ (ಗಾದೆ). [ ನಡು₂ + ಸಾಲೆ₃ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, - ಆವರ್ತ, - ಗರ್ತ : ಹೋಲಿಸುಪಡಿದು ಮೃತ್ಯುವಿನ ಗೋನಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮ್ಮಾದ್ಯಾ. ಓರಿ೩. ಪರಿ. ೨೭೭). [ ನಡು₂ + ಸುಳಿ₂ ( < ಸುೞಿ₂ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ : ಹೆರಿಗೆಯ ಮಧ್ಯಭಾಗ : ಬೇನೆಯಿಂ ಧೂಳಿದುತುಂ ಶೈಲಾಗ್ರದೊಳ್ಕುಕ್ಕುಱಿಸಿ ಮಱುಕದಿಂದೀಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ಕಿ ಕಣ್ಣಂ ತೆಱೆದಿಭಪತಿಯಂ ತಾಱಲೊಳ್ಕಂಡು ಕಾಯ್ದುಂ ನಡುಪಾಯ್ದಾ ತಾಯ್ಗೆ ದುಃಖಿಪ್ರಸವಸಮಯದೊಳ್ಪಂದುದಂತೊಂದಲಂಪಂ (ಅನಂಪು. ೧೨-೬೨).

[ ನಡು₂ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ ; ಉಡಿ ; ಮಡಿಲು : ಉಕಾರಕ್ಕೆ . . . ನಿಡುದೋಳ್, ನಿಡುವಯಣಂ. ನಡುಸೆಱಂಗು (ಶಮದ. ೧೪೧ ಪ್ರಯೋ). [ ನಡು₂ +ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಇಂಚಾಪ. ೭೫-೬೧).

[ ನಡು₂ + ಹಣೆ₁ ( < ಪಣೆ₂ ) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಕಾತ್ಯಾಯನಿಕೆಯಕ್ಕ (ಮಂಗರಾ. ೬೯-೨).

[ ನಡು₂ + ಹರೆಯ ( < ಪರಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಪಾಡು ಕೆಟ್ಟುಹೋಯಿತು (ರಾಜವ. ೫೦) ; ಹೊರಬಂದ ಗುಂಡಣ್ಣನಿಗೆ, ಕತ್ತಲೆಯ ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿದುವು (ರಂಗವ. ೮೦). [ ನಡು₂ + ಹಾದಿ ( < ಪಾದಿ₁ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯ) ಹೆಚ್ಚುಹಾಳೆ, ನಡುಹಾಳೆ" (Interleaf. ಇಂಕನಿ).

[ ನಡು₂ + ಹಾಳೆ₁ ( < ಪಾಳೆ₁) ]

**ನಡುಹೊತ್ತು** 'ನಡುಬೊತ್ತು' ನೋ.

ನಡುಹೊಳೆ (ನಾ). ೧. ನದಿಯ ಮಧ್ಯಭಾಗ ; ನಡುನೀರು: ಇಂದು ನಾನು ಹಱಿಗೋಲಲ್ಲಿ ಕುಳ್ಳಿರ್ದು ನಡುಹೊಳೆಯಲ್ಲಿ ಹೋಗಲಿಕೆ ಕಾಮವೆಂಬ ಕೊಱಡು ಅಡ್ಡಬಿದ್ದಿತ್ತು (ವಚಸಂ. ೨೪೯-೨೩) ; ನಡುಹೊಳೆಯ ಹಱಿಗೋಲ ಮೂಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯ ಕಾಲವು ಶಿವಾಯೆಂದರಸ ಬಿಸುಸುಯಿದ (ಕುವ್ಯಾಭೀ. ೯-೩). ೨. ಒಂದು ಊರಿನ ಹೆಸರು: ನಂಜೇಗವಡ ವಿರಕ್ತಗವಡಯಿ.ವರ ಕುಲದೇವರು ನಡುಹೊಳೆಬ್ಬುವೇಸ್ವರ (ಎಕ. III. (R), ಗುಂಡ್ಲುಪೇ. ೬೧-೩೨; 1027).

ನಡುಹೊಳೆಯಲ್ಲಿ ಕೈಬಿಡು = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮುಸಕೊ. ೬೮).

[ನಡು$_2$ + ಹೊಳೆ$_3$ ( < ಪೊೞೆ$_1$ ) ]

ನಡೆ$_1$, ನಡಿ, ನೆಡೆ (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮಧಾ) ; ಜಯದ್ರಥನಂ ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೧ವ) ; ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನದಿಂದಿೞಿದು ಮುಂದನೇಟಡಿಯಂ ನಡೆದು (ಸುಕುಮಾ. ೮-೪೭ವ) ; ನಡೆದೊಡೆ ಕಾಲ್ನೊಂದಪುದು (ಧರ್ಮಾಮೃ. ೩-೫೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದವ. ೧೫-೩೨) ; ನಡೆಯುತ್ತ ನಡೆಯುತ್ತ ಬಳಲುವರಲ್ಲದೆ ಬಟ್ಟೆ ಬಳಲುವುದೆ (ಬಸವ. ೧೧೩) : ತಲೆ ಮೇಲಣಿಗೆ ಚಿಗಿದುದು ಮುಂಡ ನಡೆದುದು ನೂಱು ಹಜ್ಜೆಯನು (ಕುವ್ಯಾಕ. ೨-೨೧) ; ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೫೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗ್ರತೆಯಾಗಿ ನಡೆಯುವುದು ಕಷ್ಟ (ನಾಡಿಗೀ. ೪೪) ; ನಡೆಯೋದು ಕಾಲ್ನಡೆ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೊಱೆಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀಯೋಡಂ ನಡೆಯದೆಂಬುದುಂ (ಪಂಪಭಾ. ೧-೬೮ವ) ; ಪನ್ನೆರಡು ಪಳ್ಳಿಗಮೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕ್ಕಳ್ ಉಳ್ಳನ್ನಮ್ಬರಂ ನಡೆವುದು (ಎಕ. IV, ಚಾಮುರಾ. ೪೮-೧೩ ; 965) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾವುಂಪು. ೭೮-೨೬); ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೯ ವ) ; ಪೆಜ್ಜುಂಕದದಿಗೆಯನ್ದವ ಕೋಲಮುಮಕ್ಷೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದೆ ಪನ್ನಾಯದಿಂದಕ್ಷೋಣಿಯಾಗಿ ನಡೆವ ಗದ್ಯಾ ೧ (ಸೌಇಇ. XX, ೪೫-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣಿರಣ್ಣಾ (ಬಸವ. ೧೪೭) : ಖಱಿಲೆ ನುಡಿದಬಲೆ ಬಗ್ಗಿಸಿ ಘಱಿಲನೆ ನಡೆಯೆಂದು ಜಡಿದು ಸಾರಥಿಯಂ (ಶಮದ. ೧೯ ಪ್ರಯೋ) ; ಅದ್ದುದತಳಕೆ ಅವನಿಯೆನೆ ಹೊದಱಿದ್ದು ನಡೆದುದು ದಂತಿಘಟೆ ಬರುತಿದ್ದುದಗಣಿತ ರಥಪದಾತಿಗಳಾಹವಾಂಗಣಕೆ (ಕುವ್ಯಾದ್ರೋ. ೯-೧೩) ; ಈಸುದಿನ ನಮ್ಮಗ್ನಿಹೋತ್ರಕೆ ವಿಘಾಸಲಳಿಯದೆ ನಡೆದುದೀಗ ವಿನಾಶಕರವಾಯ್ತುದಱಿನಾದುದು ಬರವು ನಮಗೆನಲು (ತೊರರಾ. ೧-೯-೨೫) : ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯುತ್ತದೆ (ದ್ರಾವಿವಿ. ೪೫) ; ಧರ್ಮಾತ್ಮರಾದ ಮಹೇಶೂರಮನೆತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (ಒಡಳ. ೨೧). ೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ವ); ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱುವ ಕಸವರಗಲಿಗಳುಮಂ ಮತ್ತಮಣ್ಮಿ ನಡೆದಿಱುವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ವ) ; ನಡೆವೆ ನಾನಿರಲೊಲ್ಲೆ ಕೈಲಾಸಪುರಕೆನುತೆ . . . ಪೊಱಮಟ್ಟಳಮ್ಮಮ್ಮ ಪುರಜನಂ ನೋಡುತಿರೆ (ಕಾರಿರ. ದೇ. ೨೮೮-೩) ; ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲಾ ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುವ್ಯಾದ್ರೋ. ೦೪-೨೪) : ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರರಾ. ೧-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂನವಿ. ೯-೧೬೩). ೪. ತೊಲಗು; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೧೯೪). ೫. ಆಚರಿಸು ; ಆಚರಣೆ ಮಾಡು : ಶ್ರೀಬಾಳಾ ಮೇಲ್ಸಿಖಿ ಮೇಲೆ ಸಪ್ಪರ್ದ ಮಹಾದನ್ನಾಗ್ರದುಳ್ಸಲ್ಲ್ವೋಲ್ ಸಾಲಾಮ್ಬಾಲ ತಪೋಗ್ರದಿನ್ತು ನಡದೊಂ ನೂಱಿಣ್ಬುಸಂವತ್ಸರಂ (ಎಕ.II, ೨೨-೨ ; ಸು. 700) ; ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಯಾದು ಪಾಪದು ಮಾರ್ಗಗ್ಗಮಂ (ಸುಕುಮಾ. ೧-೪) ; ಪೊಲ್ಲದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮಪ. ೧-೧೮) ; ಜೈನಾಗಮದೋಜೆಯಿಂ ನಡೆ ಬಾಧವ್ರಾತಕೆ ಲೇಸಾಗು (ಧರ್ಮಾಮೃ. ೪-೨೭೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೧೦). ೬. ವರ್ತಿಸು ; ನಡೆದುಕೊಳ್ಳು ; ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುಮೊರ್ವನೊಳಂತುಂ ನಡೆಯವು ಭುವನಾಂತರದೊಳ್ (ಆದಿಪು. ೦೨-೧೦೪) ; ದಯೆಗೆಯ್ಯೇಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫) ; ನಿಮಗೆ ಕರಿಗಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗದೊಡೋಡಿಪೋಪೆವೆನೆ (ಪಂಚತಂ. ೮೮-೧೦) ; ಒಡೆಯಂಗುತ್ಸವಮಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಸೋಮೇಶ. ೬೫) ; ಪೊಡವಿಪನೊಲುಮೆಯ ಕಡುನೆಚ್ಚಿ ಗರ್ವದಿ ನಡೆಯದಿರೆಚ್ಚಱಿಕೆ (ಪುರಂಪ. ೨-೪೫-೧) ; ನೃಪ ಹಿಂದಣಳಲನು ನೆನೆಯದೆನ್ನವರೆಂದು ನಡೆ ಕಾಮಂಗೆ ಕೊಡದಾರ್ಗಿತ್ತಪರಿ ಸುತೆಯ (ಸಾಳ್ವಭಾ. ೩೧-೧೦) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ); ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದೀ ತಿಳುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೮೭) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು; ನೆರವೇರು ; ಪಾಲನೆಯಾಗು : ಲೇಸೆನಿಪ ಮಹಿಷಾಕ್ಷಿಧೂಪದ ಭಾಷೆ ನಡೆಯಲು . . . ಅರ್ಥವನೋಸರಿಸದಿಂತರ್ಪಿಸುತ್ತಿರೆ (ಬಸಪು. ೨೭-೯). ೧೦. ಚಲಾವಣೆಯಾಗು : ಚಾಲತಿಯನ್ನು ಹೊಂದಿರು ; ಬಳಕೆಯಾಗು : ಷವಕಳಿ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುತ್ತು ; ಮೇಲೆ ನುಗ್ಗು : ನಿನಗುತ್ತರಾರ್ಧವೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗಿನಿತುಮರಂ ದೇವರ್ ನಡೆವನಿತುಂ ಮಾಣ್ಬನಿತುಮಂತದಾವುದು ಗಹನಂ (ಆದಿಪು. ೦೩-೨೨).

**ನಡುವೂರು** (ನಾ). ಊರಿನ ಮಧ್ಯಭಾಗ ; ಪಟ್ಟಣದ ಮಧ್ಯಸ್ಥಳ,-ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯ ಬೊಗಳಿ ವ್ಯಾಪಾರದ ಮಹಿಮೆಯಿಂದ ನಡುವೂರ ಬೀದಿ ನಡುವೆ ಕುಳಿತು (ಮಡಿಮಾ. ೪೭-೬೪). [ ನಡು₂ + ಊರು₃ ( < ಊರ್ ) ]

**ನಡುವೆ₁, ನಡವೆ** (ನಾ). ಮನೆಯ ಮಧ್ಯದ ಭಾಗ; ನಡುಮನೆ : ಇಷ್ಟರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಮ್ಮಯ್ಯ ಬಂದು ನಿಂತಿದ್ದರು (ಪಂಗಾಳ್ಮ.೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೧೩೭). **ನಡವೆ** : ಒಡನಾ ಪೂಧಿತ್ರಾಟ್ಸ್ವರ್ ನಡವೆಯೊಳಿನಿತೆಡೆಯನೀವುದೆನೆ (ದಿವ್ಯಸ. ೨-೯) ; ಗಣಿಕಾವನಿತಾಲಯಂ ಮೆರೆಗುಮವುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಪಂಜರದಲ್ಲಿ (ಅರ್ಕಾವಿ. ೨೧-೩೪ವ) : ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾವಂ.IV, ೨೮); ಅಂದಣಾವನೇರಿ ಬಂದಳಣ್ಣನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿಪ. ೧೦೨). [ <ನಡು₂./ ತೆಲು. ನಡುವ, ನಡವ ]

**ನಡುವೆ₂** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ರಜಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇಟ್ದೊಡೆ (ವಡ್ಡಾರಾ. ೧೦೨-೧೦) ; ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಱ ಪತ್ತುಂ ಪೊಟಲ್ಗಳನೊಳಕೊಂಡು (ಆದಿಪು. ೧-೯೨ವ): ಅಂತು ಮೇರೆದಪ್ಪಲ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಪಂಪಭಾ. ೨-೭೩ವ) : ಮೂಱುಂ ಬೆಳ್ಗೊಡೆಯ ನಡುವಿರ್ಪ ನೀನಿರ್ದೆಡೆಯುಮನೆಮಗಱಯದಂತುಟಾದುದೆ ಮಗನೇ (ಗದಾಯು. ೩-೭೪) ; ದುಷ್ಪರ ನಡುವಿರ್ದ ಶಿಷ್ಪಂಗೇಗೆಯ್ದುಂ ಸುಖಮಾಗಲಱಿಯದು (ಪಂಚತಂ. ೧೪೭-೧) ; ಕೂಡಲ ಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು (ಬಸವ. ೧೪೩) ; ಬಿಡದೆ ಬೆಂಡೆದ್ದೇಳ್ವ ತಲೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತಿ (ಕುಮಾರವ್ಯಾ. ೧೨-೨೩) : ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೧೭).

**ನಡುನಡುವೆ, ನಡನಡುವೆ** (ದ್ವಿರುಕ್ತಿ) : ನಡುನಡುವೆ ಯಮನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯ ದಂತೆ ನೀ ದಯಮಾಡೊ (ಪುರಂದ. ೩-೧೭೭-೩) : ಈ ವನದ ನಡುನಡುವೆ ತೊಳತೊಳಗುತಿರುತಿಹ ಸರೋವರದೊಳೆ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಭಾ. ೩-೬೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಅಡುಸೌ. ೫೩) ; ನಡನಡುವೆ "ಚಾಯ್‌ಗರಮ್" ದವರ ಬಾಯಿ–ಗರಮು ಗದಗವಿಸುತ್ತಿತ್ತು (ದೀಪಹ. II, ೩೮೮). [ <ನಡುವೆ₁./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,-ಮಧ್ಯಭಾಗ : ಸಿಡಿಲಾಳ್ ತಡೆಯದೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧-೬). [ ನಡು₂ + ಬೆಟ್ಟು₂ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯-೧೮).
[ ನಡು₂ + ಪೊಗು(<ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,-ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯ ಹೊತ್ತು. ಜನ ಸುಗ್ಗುತ್ತಿದ್ದಾರೆ (ರೂಢಿ). ೩. ಹೇರಳವಾಗಿರುವಿಕೆ ; ಆಧಿಕ್ಯ ; ಯಥೇಚ್ಛವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆಯಾದುದಾಸ್ಥಾನ (ಶ್ರೀಪಾಲ. ೩-೭) ; ತೆಂಗಿನ ನಡುಸಂತೆಯಲ್ಲಿ ಕಾಯಿಗೆ ಬರವೇ ? (ರೂಢಿ). [ ನಡು₂ + ಸಂತೆ₁ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,-ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ "ನಡು-ಸರಕು" ಆಗಬಹುದು (ಮೂವಾದ. ೧೧೪).
[ ನಡು₂ + ಸರಕು₃ ]

**ನಡುಸರು** (ನಾ). ನಡುವಿನ ಉಸಿರು : ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದುರ್ವಾರಿಕಲ್ಗಳಂತೊಡನೆ ಸುರನದಿಯ ನಡುಸರು ಬಿರ್ದವಂತಾಗ ಪ್ರೈಡ ಪೊಡವಿದಣಿದಮೃತಫಲ ಬತ್ತದಂತಾಗ ಕೊಡುತಿರ್ದ ಶರಣಜನಕೆ (ಮರುಚಾ. ೧-೯).
[ ನಡು₂ + ಉಸರು₀ ( < ಉಸಿರ್₂ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೧೯೪) ; ಪಡಸಾಲೇ ಊಟ, ನಡುಸಾಲೇ ನಿದ್ರೆ (ಗಾದೆ). [ ನಡು₂ + ಸಾಲೆ₃ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, - ಆವರ್ತ, - ಗರ್ತ : ಹೋಲಿಸುವಡಿದು ಮೃತ್ಯುವಿನ ಗೋನಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮಾರವ್ಯಾ. ಓರಿ೩. ಪರಿ. ೨೬೭). [ ನಡು₂ + ಸುಳಿ₂ ( < ಸುೞ₂ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ : ಹೆರಿಗೆಯ ಮಧ್ಯಭಾಗ : ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಮುಕ್ಕುಱಿಸಿ ಮಱುಕದಿಂದೀಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ಕಿ ಕಣ್ಣಂ ತೆಱೆದಿಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡುಪಾಯ್ದಾ ತಾಯ್ಗೆ ದುಃಖಿಪ್ರಸವಸಮಯದೊಳ್ಪಂದುದಂತೊಂದಲಂಪಂ (ಅನಂಪು. ೧೨-೬೨).
[ ನಡು₂ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ ; ಉಡಿ ; ಮಡಿಲು : ಉಕಾರಕ್ಕೆ . . . ನಿಡುದೋಳ್, ನಿಡುವಯಣಂ, ನಡುಸೆಱಂಗು (ಶಮದ. ೧೮೧ ಪ್ರಯೋ). [ ನಡು₂ +ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಇಂಚಾಪ. ೭೫-೬೦).
[ ನಡು₂ + ಹಣೆ₁ ( < ಪಣೆ₂) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಕಾತ್ಯಾಯನಿಕೆಯಕ್ಕು (ಮಂಗರಾ. ೪೯-೨).
[ ನಡು₂ + ಹರೆಯ ( < ಪರೆಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಪಾಡು ಕೆಟ್ಟುಹೋಯಿತು (ರಾಜಮ. ೫೦) ; ಹೊರಬಂದ ಗುಂಡಣ್ಣನಿಗೆ, ಕತ್ತಲೆಯ ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿದುವು (ರಂಗವ. ೮೦). [ ನಡು₂ + ಹಾದಿ ( < ಪಾದಿ₁ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯ) ಹೆಚ್ಚುಹಾಳೆ, ನಡಂಹಾಳೆ" (Interleaf. ಇಂಕಣಿ).
[ ನಡು₂ + ಹಾಳೆ₁ ( < ಪಾಳೆ₁) ]

**ನಡುಹೊತ್ತು** 'ನಡುಬೊತ್ತು' ನೋ.

**ನಡುಹೊಳೆ** (ನಾ). ೧. ನದಿಯ ಮಧ್ಯಭಾಗ ; ನಡುನೀರು : ಇಂದು ನಾನು ಹಱಿಗೋಲಲ್ಲಿ ಬಳ್ಳಿರ್ದು ನಡುಹೊಳೆಯಲ್ಲಿ ಹೋಗಲಿಕೆ ಕಾಮ ವೆಂಬ ಕೋಱಡು ಅಡ್ಡಬಿದ್ದಿತ್ತು (ವಚಸಂ. ೨೪೯-೨೩) ; ನಡುಹೊಳೆಯ ಹಱಿಗೋಲ ಮಾಲೆಯ ಕಡಿದಿರಾದರೆ ನಮ್ಮ ಪುಣ್ಯದ ಬಿಡುಗಡೆಯು ಕಾಲವು ಶಿವಾಯೆಂದರಸ ಬಿಸುಸುಯಿದ (ಕುವ್ಯಾಖೀ. ೯-೩). ೨. ಒಂದು ಊರಿನ ಹೆಸರಂ : ಸಂಜೀಗವಡ ವಿರಕ್ತಗವಡಯ.ವರ ಕುಲದೇವರು ನಡುಹೊಳೆಬ್ಬವೇಸ್ವರ (ಎಕ. III. (R). ಗುಂಡ್ಲುಪೇ. ೬೧-೩೨; 1027).

ನಡುಹೊಳೆಯಲ್ಲಿ ಕೈಬಿಡು = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶ ಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮಾಸಕೊ. ೬೮).

[ನಡು₂ + ಹೊಳೆ₃ ( < ಪೊೞೆ₁ ) ]

**ನಡೆ₁, ನಡಿ, ನಡೆ** (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮದ) ; ಜಯದ್ರಥನಂ ಕೋಡಗಗಟ್ಟು ಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೧ವ) ; ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನ ದಿಂದಿೞಿದು ಮುಂದನೇಟಡಿಯಂ ನಡೆದು (ಸುಕುಮಾ. ೮-೯೬ವ) ; ನಡೆದೊಡೆ ಕಾಲ್ನೊಂದಪುದು (ಧರ್ಮಾಮೃ. ೩-೫೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದವ. ೧೫-೩೨) ; ನಡೆಯುತ್ತ ನಡೆಯುತ್ತ ಬಳಲು ವರಲ್ಲದೆ ಬಟ್ಟೆ ಬಳಲುವುದೆ (ಬಸವ. ೧೧೩) ; ತಲೆ ಮೇಲಣಿಗೆ ಚಿಗಿದುದು ಮುಂಡ ನಡೆದುದು ನೂಱು ಹಜ್ಜೆಯನು (ಕುವ್ಯಾಕ. ೨-೨೧) ; ಭೂತಳ ದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೫೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗ್ರತೆಯಾಗಿ ನಡೆಯುವುದು ಕಷ್ಟ (ನಾಡಿಗೇ. ೪೪) ; ನಡೆಯೋದು ಕಾಲ್ನಡೆ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೊಱೆಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೊಱೆಯಂ ಪಾಯಿಸಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಂ (ಪಂಪಭಾ. ೧-೬೪ವ) ; ಪನ್ನೆರಡು ಪಳ್ಳಿಗವೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕಳ್ ಉಳ್ಳನ್ನವಬ್ಬರಂ ನಡೆವುದು (ಎಕ. IV. ಚಾಮರಾ. ೪೮-೧೩ ; 965) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾವುಂಪು. ೭೮-೨೬) ; ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೯ ವ) ; ಪೆಜ್ಜುಂಕದದಿ ಗೆಯನ್ನವ ಕೋಲಮುಮುಕ್ಷೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದೆ ಪನ್ನಾಯದಿಂದಕ್ಷೋಣಿಯಾಗಿ ನಡೆವ ಗದ್ಯಾ ೧ (ಸಾಇಇ. XX. ೪೫-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣಿರಣ್ಣಾ (ಬಸವ. ೧೪೭) ; ಖಿಟಿಲೆ ನುಡಿದಟಲೆ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು ಸಾರಥಿಯಂ (ಶಮದ. ೧೯ ಪ್ರಯೋ) ; ಅದ್ದುದತಳಕೆ ಅವನಿಯೆನೆ ಹೊದಱಿದ್ದು ನಡೆದುದು ದಂತಿಘಟೆ ಬರುತಿದ್ದುದಗಣಿತ ರಥಪದಾತಿಗಳಾಹವಾಂಗಣಕೆ (ಕುವ್ಯಾದ್ರೋ. ೯-೦೩) ; ಈಸುದಿನ ನಮ್ಮಗ್ನಿ ಹೋತ್ರಕೆ ವಿಾಸಲಳಿಯದೆ ನಡೆದುದೀಗ ವಿನಾಶಕರವಾಯ್ತುದಱಿನಾದುದು ಬರವು ನಮಗೆನಲು (ತೊರವೆ. ೧-೯-೨೫) ; ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯು ತ್ತದೆ (ದ್ರಾವಿವಿ. ೪೫) ; ಧರ್ಮಾತ್ಮರಾದ ಮಹೇಶೂರಮನೆತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (ಒಡೆಕ. ೨೧).

೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಪಣ್ಣನೆ ಪಣ್ಣಿ ಕಾಳೆಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ವ) ; ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಸವರಗಲಿಗಳುಮಂ ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ವ) ; ನಡೆವೆ ನಾನಿರಲೊಲ್ಲೆ ಕೈಲಾಸಪುರಕೆನುತೆ . . . ಪೊಱಮಟ್ಟಳಮ್ಮಮ್ಮ ಪುರಜನಂ ನೋಡುತಿರೆ (ಕಾಲಿರ. ದೇ. ೨೮೮-೩) ; ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲ್ ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುವ್ಯಾದ್ರೋ. ೧೪-೨೪) ; ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರವೆ. ೧-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂಸವ. ೯-೧೬೩). ೪. ತೊಲಗು ; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೧೪೪). ೫. ಆಚರಿಸು ; ಆಚರಣೆ ಮಾಡು : ಶ್ರೀಬಾಳಾ ಮೇಲ್ಸಿಖಿ ಮೇಲೆ ಸರ್ಪ್ಪದ ಮಹಾದನ್ಯಾಗ್ರುದುಳ್ಳಲ್ಲವೊಲ್ ಸಾಲಾಮ್ವಾಲ ತ ಪೋ ಗ್ರು ದಿ ನ್ನು ನಡದೊಂ ನೂಱಿಪ್ಪುಸಂವತ್ಸರಂ (ಎಕ. II. ೨೨-೨ ; ಸು. 700) ; ನಡೆಯಂ ಧರ್ಮದ ಬಟ್ಟೆಯೊಳ್ ಬಿಸುಡಿಯಾ ದು ಷ್ಪಾ ಪ ದು ಮಾ ರ್ಗ ರ್ಗ ಮಂ (ಸುಕುಮಾ. ೧-೪) ; ಪೊ ಲ್ಲ ದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮುಪ. ೦-೧೮) ; ಜೈನಾಗಮದೋಜೆಯಿಂ ನಡೆ ಬಾಧಮಾತ್ರಕೆ ಲೇಸಾಗು (ಧರ್ಮಾಮೃ. ೪-೨೬೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦). ೬. ವರ್ತಿಸು ; ನಡೆದು ಕೊಳ್ಳು ; ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ ನಡೆಯವು ಭುವನಾಂತರದೊಳ್ (ಆದಿಪು. ೦೨-೦೦೪) ; ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯಡೆಯೊಳ್ ನಡೆಯಲ್ವೇಡೆಸಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫) ; ನಿಮಗೆ ಕರಿಗಳ್ ದೊ ರೆ ಕೊ ಳ್ವನ್ನಂ ನಿಚ್ಚಲೊಂದೊಂದು ಮೃಗಮನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗ ದೊಡೋಡಿಪೋಪೆವೆನೆ (ಪಂಚತಂ. ೮೮-೦೦) ; ಒಡೆಯಂಗುಲ್ತ್ಸವಮಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಸೋಮೇಶ. ೬೫) ; ಪೊಡವಿಪನೊಲುಮೆಯು ಕಡುನೆಚ್ಚಿ ಗ ರ್ವ ದಿ ನಡೆಯದಿರೆಚ್ಚಱಿಕೆ (ಪುರಂದ. ೨-೪೫-೧) ; ನೃಪ ಹಿಂದಣಳಲನು ನೆನೆಯದೆನ್ನವರೆಂದು ನಡೆ ಕಾವಂಗೆ ಕೊಡದಾರ್ಗಿತ್ತಪಿರಿ ಸುತೆಯು (ಸಾಳ್ವಭಾ. ೩೦-೦೦) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೩೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ) ; ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದಿ ತಿಳುಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೮೭) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು ; ನೆರವೇರು ; ಪಾಲನೆಯಾಗು : ಲೇಸೆನಿಪ ಮಹಿಷಾಕ್ಷಿಧೂಪದ ಧಾಷೆ ನಡೆಯಲು . . . ಅರ್ಥವನೋಸರಿಸ ದಿಂತರ್ಪಿಸುತ್ತಿರೆ (ಬಸವು. ೨೭-೯). ೧೦. ಚಲಾವಣೆಯಾಗು ; ಚಾಲತಿ ಯನ್ನು ಹೊಂದಿರು ; ಬಳಕೆಯಾಗು : ಷವಕಳ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುತ್ತು ; ಮೇಲೆ ನುಗ್ಗು : ನಿನಗುತ್ತರಾರ್ಧ ಮೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗಿನಿತುವರಂ ದೇವರ್ ನಡೆವನಿತುಂ ಮಾಣ್ಬನಿತುಮಂತದಾವುದು ಗ ಹ ನಂ (ಆದಿಪು. ೧೩-೨೨).

೧೨. ಸಲ್ಲು ; ಒಳಪಡು : ತುರಗಮೇಧಾಧ್ವರದ ಮೇಲಾರ್ಯಕೆ ನಡೆದುದು ಪರಮಋಷಿಜಾಬಾಲಿಗವನೀಶ್ವರರ ಮಾನ್ಯತೆಯು ಪರುಟವಣೆ ವಿಜಯಂಗೆ ಸೇರಿತು (ತೊರಕಾ. ೧-೭-೨೪). ೧೩. ಪ್ರವರ್ತಿಸು ; ತೊಡಗು : ಎನ್ನವರಾದರೆ ಜನ್ನಕ್ಕೆ ನಡೆವರೆ ಎನ್ನವರಲ್ಲ ಕೂಡಲಸಂಗಾ ನಿಮ್ಮಾಣೆ (ಬಸವ. ೭೦೨). ೧೪. ಗದ್ಯ ಅಥವಾ ಪದ್ಯದ ಲಯಕ್ಕೆ ಹೊಂದಿಕೊಳ್ಳು : ಷಟ್ಪದಿ ಈಗ ಮಾತ್ರೆಗಳಿಂದ "ನಡೆ"ದರೂ ಒಮ್ಮೆ ಅಂಶಗಳಿಂದ "ನಡೆ" ಯುತ್ತಿದ್ದಿತೆಂಬುದನ್ನೂ . . . ಮರೆಯಬಾರದು (ಕೈಪಿಡಿ. ೧೪೭). ೧೫. ಪ್ರಭಾವಶಾಲಿಯಾಗು ; ಯಶಸ್ವಿಯಾಗು : ನನ್ನ ಮುಂದೆ ನಿನ್ನ ಯಾವ ಆಟವೂ ನಡೆಯುವುದಿಲ್ಲ (ರೂಢಿ). 'ಕೈನಡೆ' ಪರಾ. ೧೬. ನಡಗೆಯಿಂದ ಅಳತೆ ಮಾಡು ; ಹೆಜ್ಜೆಯಿಂದ ಅಳೆ (?): ರಣಾವಲೋಕ ಶ್ರೀಕಮ್ಬಯ್ಯನ್ ಪೃಥುವೀರಾಜ್ಯಂಗೆಯೆ ಬ × × × ರಸಕ್ಕರ್ಟ್ಟಿಪ್ಪ × × × ಳ ಪೆರ್ಗ್ಗಟ್ಟಿಪ್ಪಿನಾ ಪೊಲದಿನ್ನಡದು ಕೊಟ್ಟದು (ಎಕ. II, ೩೫-೪ ; ಸು. 800). ☞ ಇದು ಅನೇಕ ಕಡೆ ನಾಮಪದದೊಡನೆ ಸೇರಿದಾಗ ಬೇರೆ ಬೇರೆ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ-'ಆಟನಡೆ', 'ಜೀವನ ನಡೆ', 'ಮಾತು ನಡೆ', 'ವ್ಯಾಪಾರ ನಡೆ' ಇತ್ಯಾದಿ. ನಡಿ : ೧೦. ಸವಿಗೊಂಡನಹಳ್ಳಿಯೆಂದು ಹೆಸರು ನಡಿಯಬೇಕು (ಎಕ. VII, ಶಿವಮೊ. ೯೩-೩೩ ;?). ನೆಡೆ : ೨. ಸುರ್ಗಚಂದರುಯಿರೊ ಪರಿಯಂತ್ರ ನೆಡೆಯಬೇಕುಯೆಂದು ಆ ಗ್ರಮವನು ಹುಗಿಸು ಹೊಯಿಸಿ ಪಲಿಸಿಕೊಟರು (ಎಕ. VII, ಶಿವಮೊ. ೧೦೮-೩೪ ; 1558). ೧೭. ಬಾಳು; ಬದುಕು : ಜನರು ಕೂಡಿ ನೆಡೆಯಬೇಕುಯೆಂದು ನಗಸಮುದ್ರದಮೆಂಬೊ ಗ್ರಾಮವಂನು ಪೆಸರಗಿ ಕಟಿಸಿ (ಎಕ. VII, ಶಿವಮೊ. ೧೦೮-೩೩ ; 1558).

ನಡೆನಡೆ$_1$ (ದ್ವಿರುಕ್ತಿ) : ಸಮದ ಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡೆನಡೆದು ನಡೆಯಲಾಱದೆ ಸುಟಿದರ್ (ಪಂಪಭಾ. ೭-೮೪); ನಡೆನಡೆ ಡೊಂಬುಮೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟೆ (ಧರ್ಮಾಮ್ಮ. ೮-೮೮); ನಡೆನಡೆದು ನಿಂದಡಿಗಡಿಗೆ ನೆನೆವ (ಸಿದ್ಧರಾ. ೦-೩೭); ಕ್ರಿಯಾಸಮಭಿಹಾರಕ್ಕೆ – ನಡೆನಡೆಯೆಂದು; ಇದಿರ್ಚಿದಿರ್ಚೆನೆ ಜಟಾಯು (ಶಮದ. ೧೯೫ ಪ್ರಯೋ); ಸಕಳೇಶನ ನಿರೂಪವಿದಕ್ಕೆ ನಡೆನಡೆ ಮಗನೆ ಹೋಹವೆನುತ್ತ (ಬಸಪು. ೪೭-೫೦); ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುವ್ಯಾದ್ರೋ. ೬-೫೫). ನಡೆದಾಟ = ಓಡಾಟ; ಅಲೆತ; ಸಂಚಾರ : ಅತಿಯಾದ ನಡೆದಾಟದಿಂದ ಮೈಗೆ ಆಲಸ್ಯವಾಗಿದೆ (ರೂಢಿ). ನಡೆದಾಡಿಸು=೧. ನಡೆಯುವಂತೆ ಮಾಡು; ಓಡಾಡಿಸು : ಸಣ್ಣ ಮಗುವನ್ನು ಹೆಚ್ಚು ನಡೆದಾಡಿಸಬೇಡ (ರೂಢಿ). ೨. ನಡೆದುಕೊಳ್ಳುವಂತೆ ಮಾಡು : ವ್ಯವಹರಿಸುವಂತೆ ಮಾಡು : ಹುಡುಗರು ಆಸ್ತಿಗೆ ಅಧಿಕಾರಿಗಳಾಗಿ ಬಂದಾಗ ತಾವೇ ತಾವಾಗಿ ಸರ್ವಾಧಿಕಾರವನ್ನೂ ಸ್ವಾಧೀನಪಡಿಸಿಕೊಂಡು ಆ ಹುಡುಗರನ್ನು ಸ್ವೇಚ್ಛೆಯಂತೆ ನಡೆದಾಡಿಸಿಕೊಂಡದ್ದುಂಟು (ಇಪ್ಪಕ. ೩೦೫). ನಡೆದಾಡು = ಓಡಾಡು ; ಅಡ್ಡಾಡು : ಅರಸಂಚೆಮಾಱಿ ನಡೆದಾಡುತವೆ ತಾಯೊಡನೆ (ಸಾಳ್ವಭಾ. ೩-೯); ಮೇರು ನಡೆದಾಡೆ . . . ದಿನಕರ ಕಾರಿರುಳಾಗೆಸೆಯೆ ಸತಿಯರಂ ನಂಬುವರೇ (ನನ್ನಚ. ೩-೪೨); ಕುಡಿತೆಗಂಗಳ ಭಾವಿನಿಯರು ನಡೆದಾಡುತಿರ್ದರು (ಅಬ್ಬಲೂ. ೩-೧೧೮); ಹೆಚ್ಚು ನಡೆದಾಡಿ ಆಯಾಸ ಮಾಡಿಕೊಳ್ಳಬೇಡ (ರೂಢಿ). ನಡೆದುಕೊಳ್ಳು, ನಡಕೊಳ್ಳು = ೧. ವರ್ತಿಸು; ವ್ಯವಹರಿಸು : ರಾಮನು ಯಾವಾಗಲೂ ಗುರುಹಿರಿಯರಲ್ಲಿ ವಿಧೇಯನಾಗಿಯೆ ನಡೆದುಕೊಳ್ಳುತ್ತಿದ್ದನು (ವಾರಾಶ್ಯ. ೫೭); ಎಲ್ಲ ಪ್ರಜೆಗಳೂ ಇವರ ಅಪ್ಪಣೆಯ ಮೇರೆಗೆ ನಡಕೊಳ್ಳತಕ್ಕದ್ದು (ಮುಂಬಯಿ. ೪-೩). ೨. ವ್ರತ, ಪೂಜೆ ಮುಂತಾದುವನ್ನು ಆಚರಿಸಿ ಭಕ್ತಿಯನ್ನು ತೋರಿಸು : ಇವರು ಯಾವತ್ತು ಹಿಂದೂದೇವತೆಗಳಿಗೆ ನಡಕೊಳ್ಳುವರು (ಕಭಾಗ. ೦೦೫); ಪಥ್ಯ-ಉಪಚಾರವನ್ನು ಮಾಡಿದ್ದಾಯಿತು. ದೇವರು-ದಿಂಡರಿಗೆ ನಡಕೊಂಡದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಹೊಸಕ್ಷ. ೧೮೪). ನಡೆದು ಬರು= ಮುಂದುವರಿ; ಮುಂದೆ ಸಾಗು : ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹುಕಾಲದವರೆಗೂ ನಡೆದುಬರುವುದು (ಕಗದ್ಯ. II, ೧೦). ನಡೆದೊವಲ ಪಾಪೆ = ಚಲಿಸುವ ತೊಗಲ ಬೊಂಬೆ ; ಶರೀರ ; ದೇಹ : ನಡೆದೊವ[ಪಾಠಾಂ. ಗ]ಲ ಪಾಪೆ... ಘನರೋಗದಾಗರಂ ತಾನೆನಿಪೀಯೊಡಲಿದು ಕಾಲನ ತಿಂಗುಳಿ ಜಡಮನುಜರ್ ನಿತ್ಯಮೆಂದು ಮೆಯ್ಮಱೆದಿರ್ಪರ್ (ತ್ರಿಪುವಿ. ೩೩-೧೧೨).

[ ದೇ.II ತಮಿ. ನಟ; ಮಲ. ಕೊಡ. ನಡ; ತೆಲು. ನಡಚು, ನಡುಚು; ಕೊಲಾ. ಅಡ್ಗ್; ನಾಯ್ಕಿ. ಅರ್ಗ್ ]

ನಡೆ$_2$ (ನಾ). ೧. (ಕಾಲಿನಿಂದ) ನಡೆಯುವಿಕೆ ; ನಡಗೆ ; ಚಲನೆ; ಗಮನ : "ಪರಿಕ್ರಮಂ ಪರಿಸರ್ಪಮೆನೆ ನಡೆ" (ಮಂಗರಾ. ೧೩೦-೧೭); ಓರ್ವ[ನೋರ್ವ]ಳ ನಡೆಯು ನುಡಿಯು ಮುಡಿಯು ಗಾಂಪಿಂಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋಱಿ (ಪಂಪಭಾ. ೪-೯೩ವ); ಬಾಳೆ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ (ಪಂಪಭಾ. ೧೩-೫೨); ಕಡುಗೂರ್ಪಿಲ್ಲದ ಕರವಾಳ್ . . . ನಡೆಯಿಲ್ಲದ ಕರ್ತೆ ಮನಕ್ಕೆಡಂಬಡಂ ಮಾಱ್ಕುಮರ್ತಿಯುಂ ಮಾಡುಗುಮೇ (ಅಜಿಪು. ೬-೯೭); ಆವೆಡೆ ಹಂಸಗೀ ನಡೆಯ ಚೆಲ್ವನೆ ನೂಪುರದಿಂಚರಂ ಸ್ವರಂ ಜೇವೊಡೆದಂದಮಾಗೆ . . . ಬಂದಳದೊಂದು ಲೀಲೆಯಿಂ (ಮಲ್ಲಿಪು. ೪-೭೩); ಮರಾಳಂ ನಡೆಯೊಳುರುಪಿಕಂ ನಾದದೊಳ್ . . . ಭೃಂಗಂ ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀನಿಚಯಂ (ಉದ್ಭಟ. ೧೦-೪೩); ಬನದೊಳೆಡೆಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ ಬಳಗಂಗಳ (ಕಬ್ಬಿಕಾ. ೧೮); ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲೀ. ೩-೩೨); ಅಂಚೆಯ ನಡೆಯನಿದಂ ತನತೆನುತುಂ ಮಂಚಲ್ಪಿಡಿವೊಳ್ನಡೆ (ಜಯಕಾ. ೨-೨); ನಡೆ ಮಂದವಾಯ್ತು ನಡುಗಡಸಿತ್ತು ಬಡತನಂ ನುಡಿ ಮೆಲ್ಲನಾಯ್ತು ಕಳವೆಯ ಮಡಿಗಳಂ ಕಾವ ಮಡದಿಯರ್ಗೆ (ಭಾವಚಿಂ. ೨-೯). ೨. ಆಚರಣೆ ; ನಡವಳಿಕೆ ; ಆಚಾರ ; ಚರ್ಯೆ ; ಸಂಪ್ರದಾಯ ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ . . . ನುಡಿಯ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ (ಬಸವ. ೩೦); ಪೊಡವಿಗಚ್ಚರಿ ನಿಮ್ಮ ಭಕ್ತಿಯ ನಡೆ ಸೊಗಸದೆಮಗೀ ಹಿರಿಯತನಗೆಡದೆ ಹೊಱವಡಿ ಸಾಕು (ಬಸಪು. ೫೫-೧೯); ಸಂತೋಷ ಪರಿಣಾಮ ನುಡಿ(ನಡೆ) ತತ್ವ ನಡೆ(ನುಡಿ) ಪಾವನ ಆತನ ಸುಳುಹು ವಸಂತಗಾಳಿ (ಸಿದ್ಧೇವ. ೧೫೫-೪೭೩); ನಿನ್ನ ನಡೆಯ ನಿನ್ನ ನುಡಿಯ ನಿನ್ನೊಳೆ ಕಂಡು ನಿನ್ನ ಮುಂದೋದಿದೆನರಸಾ (ಭರಚ. ೨-೩೭); ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ . . . ಲಿಂಗವ ಕೂಡಬಲ್ಲಾತನೇ ಶರಣ ನೋಡಾ (ಅಬಂಡೇ. ೧೪೭-೧೩೯); ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ ಉತ್ತಮರ ಸಂಗವದು ತೀರ್ಥ ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೨೦); ಪೆತ್ತರಂ ಸೋಲಿಪಂ ನಲ್ಲಮಗನೊಳ್ಪುಗುಣಂಗಳಿಂ ಮುಂಗಿಲ್ವೊಲ್ ನಡೆಯಿಂ ನೀರಿಂ ಲೋಗರಂ ನಲವೇರಿಪಂ (ಸೌನಂದ.೨-೩೦); ಅವರ ಕಡೇಲಿ ಏನು ನಡೆ ಇದೆಯೋ ಹಾಗೆಯೇ ಮಾಡಲಿ (ಬೆಳುಮ. ೨೧೭); ನುಡಿ ಪುರಾತನದು ನಡೆ ಕಿರಾತನದು (ಗಾದೆ). ೩. ಶೀಲ ; ನಡತೆ : ಎನ್ನಲ್ಲಿ ನಡೆಯಿಲ್ಲಾಗಿ ನಾನು ಭಕ್ತನೆಂತಪ್ಪೆನಯ್ಯಾ (ಬಸವ. ೨೯೧); ಹುಡುಗಿಯ ಗುಣವನು ಜನರು ನಿರ್ಣಯಿಪರು ತಾಯಿಯ ನಡೆಯನು

ನೋಡಿ (ಇಂಚಾಪ. ೩೦೫-೨೯). ೪. ಮುಂದುವರಿಕೆ; ಮುನ್ನಡೆ; ಪ್ರಗತಿ : ಜ್ಞಾನವಿಜ್ಞಾನಕ್ಷೇತ್ರಗಳಲ್ಲಿ ಹಲವು ಪ್ರಯೋಗಗಳನ್ನು ನಡೆಸಿ ಪಾಶ್ಚಾತ್ಯ ಜಗತ್ತು ಅಣುಬಾಂಬನ್ನು ಕಂಡುಹಿಡಿದಿದೆ. ಇಲ್ಲಿಗೆ ಪಾಶ್ಚಾತ್ಯಜಗತ್ತಿನ ನಡೆ ನಿಂತಿತು (ಭಾರದ. ೫೮೧) ; ನಮ್ಮ ಸಯ್ಪಿನ ಬಿದಿಯು ನಡೆಗೆ ತೊಡ ರೊದಗದೊಲ್ ಸರ್ವಮುಂ ಪುರುಷಪ್ರಯತ್ನಮಂ ಮಾಳ್ಪೆ ನಾನ್ ! (ಚಂದ್ರಸ.೧೩-೨೧). ೫. ಪ್ರಯಾಣ; ಸಂಚಾರ: "ನಡೆ ಸಿದ್ಧಯಾತ್ರೆಯುಕ್ಕು" (ಮಂಗರಾ. ೧೨೧-೫). ೬. ಎತ್ತುಗಳು ಒಂದು ಸಲ ಒಟ್ಟಿಗೆ (ಒಂದು ರಾತ್ರಿಯಲ್ಲಿ) ನಡೆಯುವಷ್ಟು ದಾರಿ; ಸುಮಾರು ಮೂವತ್ತು ಮೈಲಿ: ಈ ಊರಿನಿಂದ ಹೊರಟರೆ ನಮ್ಮ ಎತ್ತಿನ ಗಾಡಿಯು ಎರಡು ನಡೆಯಲ್ಲಿ ತುಮಕೂರು ಸೇರಬಹುದು (ರೂಢಿ). ೭. ದಾರಿ ; ಹಾದಿ. 'ನಡೆದುಳಿ' ಪರಾ. ೮. ದನಕರು, ಕಾಲ್ನಡೆ ಇತ್ಯಾದಿ : ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ೫೦ ಅಯಿವತ್ತುಯೆತ್ತಿನ ಮಾನ್ಯವನೂ ಶಿವಾರ್ಪಿತ ವಾಗಿ ಬಿಟ್ಟಿಧೇವೆ (ಎಕ. VII, ಶಿವಮೊ. ೨೮-೧೩ ; 1670) ; ಭಾರಾಮಾರ್ಗದ ಪೈರ್ರಿಗೆ ಅರಮನೆ ಕಟ್ಟೆಲಿ ನಿಂತ್ತ ನಡೆ ೧ ಪಂದಕ್ಕೆ ಹಂ (ಎಕ. X (S), ಕೋಲಾರ. ೨೫೮-೧೭ ; 1761) ; ಯಿಾ ಹುಳಿಯಾರ ಸುಂಕದಲ್ಲಿ ನಾನಾ ದಿನಸಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಕ್ಕಾ ಹಾಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದನೆ ನಿಂತ್ತ ನಡೆ ೧ಕ್ಕೆ ಕಂಟಿರಾಯಿ ೮೦೦೦೦ (ಎಕ. XVI, ಚಿಕ್ಕನಾ. ೯೦-೧೭ ; 1802) ; ಒಡಕು ಕೊಟ್ಟಿಗೆ ಹಿಡಿಯಲಾರದು, ನಡೆಗಳಿಪ್ಪತ್ತಾದವು (ಕಎಪು. ೧೮-೧೧). 'ಕಾಲ್ನಡೆ' ಪರಾ. ೯. (ಕೆಲವು ವಿಶೇಷ ಸಂದರ್ಭಗಳಲ್ಲಿ) ನಡೆಯುವ ದಾರಿಗೆ ಹಾಕುವ ಹಾಸು: ನಡೆಮಡಿ ; ಹಡದಿ (ಉಕ) : ವಿಳಸತ್ಕಾಂತಂ ವಸಂತಂ ತಳರದಿರೆ ವನಶ್ರೀ ಮುದಂಬೆತ್ತು ಮುಕ್ತಾಕುಳದಿಂ ನೀಳೌಘದಿಂದಿಕ್ಕಿದ ನಡೆಗಳೊ ಪೇಟೆಂತಿ ಮೆಂಬಂದದಿಂ ಕಣ್ಗೊಳಿಸುತ್ತಿರ್ದಪ್ಪವಂತಾ ವನದೊಳಗೆಲ್ಲರ್ಪೊಯ್ಲಿಂದ ಮಲ್ಲೊಕ್ಕ ನವ್ಯಾಮಳಪುಷ್ಪಂಗಳ್ ಜನುಂಗುತ್ತೆಱಗಿದ [ಮದ]ಭೃಂಗಾವಳೀ ಸಂಗದಿಂದಂ (ಕುಸುಮಾ. ೧-೧೦೩). ೧೦. ಗದ್ಯ ಅಥವಾ ಪದ್ಯದ ಲಯ,-ಓಟ : ಅವರ ಕಾವ್ಯದ ನಡೆ ಇತರರ ಕಾವ್ಯದ ರೀತಿಗಿಂತ ಭಿನ್ನವಾಗಿದೆ (ರೂಢಿ). ೧೧. ಒಂದು ಬಾರಿ ಹೊರುವಷ್ಟು ಪ್ರಮಾಣ ; ಒಂದು ಹೊರೆ,-ಹೇರು ; ಸಾರಿಗೆ (ಉಕ) : ಕಲಿನಾಥ ದೇವರ ಗಂಧ ಕಸ್ತುರಿಗೆ ಎಲೆಯ ನಡೆಗೆ ತಾರ ೧ ನು ಬಿಟ್ಟರು (ಸೌಇಇ. IX-1, ೩೪೪-೪೭ ; 1292) ; ಎತ್ತಿನ ಮಾನ್ಯ ಹದಿನೈದು ನಡೆಲು ಅಡಕೆ ಮೆಣಸು (ಎಕ. VIII, ತೀರ್ಥಹ. ೭೩-೨೨ ; 1674). ತೆಂಗಿನಕಾಯಿ, ನಡೆ ೧೧೦೦ಕ್ಕೆ ಪಕ್ಕಾ ಸಾವಿರ ಅಂತ ತಿಳಿದು ಅದರ ಮೇಲೆ ಧಾರಣೆ ಇರುತ್ತದೆ (ಮುಂಬವ್ಯಾ. ೨೮೩) ; ರೈತ ಬೆಳಗಿನಿಂದ ಐದು ನಡೆ ಗೊಬ್ಬರ ಹೇರಿದ್ದಾನೆ (ರೂಢಿ). ೧೨. [ನಾಟ್ಯ] ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತ ಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೆ ಎಂಬ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಮೊಗದೊಳಿಳಿನಗೆದೋಱ ಬಿನ್ನಣದ ನಡೆ ಸೋಲಪುಡಿಳಾಯುಧರು ಕಾಲರವೆಯ ಚೆಲ್ವಡರೆ ದೇಶಿಯನಾಡು ತಿರ್ದಳು ವಿಲಾಸವಿಭ್ರಮಹಾವಭಾವಮೆಸೆಯೆ (ರೇವಣ. ೩೨-೪೯).

ನಡೆನಡೆ$_2$ (ದ್ವಿರುಕ್ತಿ) : ನಡೆನಡೆಗೆ ಬಾವುಲಿಯ ಪೊಡೆಯ ತೊಡರುಗಳು ಘಲಘಲನೆ ಮೊರೆಯಲು ಬಿಡದೆ ತಾಟಿಪ ಹಲಗೆ ಘಂಘಂಘಲಿಗು ಘುಲಿಲೆನಲು (ಬಸಪು. ೧೭-೧೭). ನಡೆನುಡಿ = ೧. ನಡಗೆ ಮತ್ತು ಮಾತು : ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು (ಪಂಚತಂ. ೩೪-೧೫) ; ನಡೆನುಡಿ ಬಳಲ್ಕೆ ಮುನ್ನಂ ಕಡುಚೆಲ್ವೆಯ ರೂಪುಗಂಡ ಬಳಿಕಂ ನಡೆಯರ್ ನುಡಿಯರ್ ನೀರಂ ಕುಡಿಯರ್ ನಡೆ ನೋಡುತಿರ್ಪರತನುಶಿಥಿಲರ್ ಪಥಿಕರ್ (೧೦ಕ. ೨-೨೫) . ಪಾಲಿಸಿದಳಿಂತು ನಡೆನುಡಿಗಳಂ ಕಲಿಪಲ್ಲಿ ಪರಿಯಂತಮಾ ಶಿಶುವನು (ಜೈಮಿಭಾ. ೨೮-೧೯). ೨. ನಡತೆ ; ನಡವಳಿಕೆ ; ಆಚಾರ : ಸಂಪ್ರದಾಯ ; ನಡೆನುಡಿ ಹುಸಿಯುಂಟಾದರೆ ಕೂಡಲಸಂಗನ ತೋಱದ ಚೆನ್ನಬಸವಣ್ಣನಾಣೆ (ಬಸವ. ೭೧೮) ; ಶುಕ್ಲಶೋಣಿತದಿಂದ ತನುಮನ ಜನಿಸಿತ್ತು ತನುಮನದಿಂದ ನಡೆನುಡಿ ಜನಿಸಿತ್ತು (ಆದವ. ೨೭-೮೦) ; ನಡೆನುಡಿಯೊಳಭವನೆಂದೆನಿಸಿರ್ಪನಾ ಪುರಕೆ (ತಿರುರ. ದೀ. ೪-೫) ; ದೃಢಭಾವದೇ ತಕ್ಕಮೆಡೆಗುಡದೆ ಬಲಿತವನ ನಡೆನುಡಿಯು ಬಗೆದ ಸರಿನೂಲಿನಂತೆ ಮೃಡನೊಳು ತೊಡಂಕಿ ಬಿಡದಡರ್ದುದೆನಲಾಹ ಸಡಿಫಡ ಶರಣನಿರವನಾಮ ಬಣ್ಣಿಪಂ (ಶಾನಂದ. ೦-೬೯) ; ನಡೆನುಡಿ ಭಕ್ತಿ ವಸ್ತುಗಳ ಕೊಳ್ಳಿಡುಮಂಜಿಕೆ ಕಾಯಶುದ್ಧಿ ಮಾಟ್ಪುಡುಮೆನಿಸಿರ್ಪ ಪಂಚಸಮಿತಿಸ್ಥಿತಿಯಂ ತಳೆದಂ (ಅನಂಪು. ೪-೧೨) ; ವ್ಯಕ್ತಿಯ ನಡೆನುಡಿಗಳು, ಮನೋಭಾವಗಳು, ದೃಷ್ಟಿಧ್ಯೇಯಗಳು . . . ಇವೆಲ್ಲದರ ಮೇಲೂ ಬುದ್ಧಿಶಕ್ತಿ ತನ್ನ ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ (ಶಿಕ್ಷದ. ೬೧೨). ನಡೆನುಡಿಮುಗ್ಧ = ಆಚಾರ, ವಿಚಾರಗಳಲ್ಲಿ ಮುಗ್ಧನಾದವನು,-ನಿಷ್ಕಪಟಿಯಾದವನು; ಶುದ್ಧವಾದ ಚಾರಿತ್ರವುಳ್ಳವನು: ಕಂಗಳ ನೋಟ ಲಿಂಗಕ್ಕೆ ಭಾರ ಅಂಗಜೀವಿಗಳ ಕೂಡೆ ನುಡಿವನೆ ಶರಣನು ನಡೆನುಡಿಮುಗ್ಧ ಗುಹೇಶ್ವರ ನಿಮ್ಮ ಶರಣನು (ಅವಚಂ. ೮೦-೩೬೪). ನಡೆಯಾಡು = ೧. ಚಲಿಸು ; ಸುತ್ತಾಡು ; ಸುತ್ತಲೂ ಹಾಯು : ಕೈತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳಕಳಶಂಗಳಂ ಘನರಸಾಕಳಿತಂಗಳನುನ್ನತಂಗಳಂ (ಅನಂಪು. ೪-೧೧೮). ೨. ನಡೆದುಕೊಳ್ಳು ; ಆಚರಿಸು ; ವ್ಯವಹರಿಸು : ಮದನಕದಳೀವನಕುಠಾರರು . . . ಪಾಪಾಟವೀಪಾವಕರುಮಪ್ಪ ಶ್ರೀಪದ್ಮಪ್ರಭಮಲಧಾರಿದೇವರು ತಪೋನಿಷ್ಠರಾಗಿ ನಡೆಯಾಡಿ (ಸೌಇಇ. IX-1, ೨೭೮-೨೯ ; 1185).

[ <ನಡೆ$_1$./ತಮಿ. ನಟ್ಟೆ ; ಮಲ. ನಡ ;ತುಳು.ನಡೆ, ನಡಿ ; ತೆಲು. ನಡ ]

ನಡೆ$_3$ (ಅ). ಚೆನ್ನಾಗಿ ; ವಿಶೇಷವಾಗಿ ; ಅತಿಶಯವಾಗಿ : ಎಡೆಯುಱದು ತೊಳಗುವಂತಿರೆ ಸಿಡಿಲ್ದು ಪೋಯ್ತುಟ್ಟುದಾಗಳಂಗಜಕಲೆಯೊಳ್ನಡೆ ಮೊಗ ಮಿಕ್ಕಿ ಲಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೫೮ ಶೂದ್ರಕ); ತೀಡೆ ತುಷಾರವಾಯು ನಡೆ ಕೋಡಿ ಕಡಂಗಿ ಜಲಕ್ರೀಡೆಯೊಳಂತೆ ಸೇಡುವಡೆದೊಪ್ಪಿದವೊಲ್ (ಲೀಲಾವ. ೦೪-೦೭) ; ತದವಸರದೊಳೆ ನೆಲದ ಪತಿ ಪೊಸಪೆಣ್ಣಂ ನಡೆ ಬಗ್ಗಿಸುತಂ . . . ಅತಿಶಯ ಚತುರೆಯನಿರದಾರೋಹಣಮಂ ಮಿಗೆ ಮಾಡುತಿರಲ್ (ಹಾಲಾಸ್ಯ.೩-೧೩-೩೭); ನಡೆ ಮಿಡುಕದ ಚಮರದ ನೀಳ್ದೊಡಲೆತ್ತಿದ ಕಿವಿಯ ತಮ್ಮ ಪದರಜಮುಂ ಪಾಯ್ದೊಡೆ ಸಿಲ್ಕದಶ್ವಗಳ್ ಧೀಂಕಿಡುವುವು (ಶಾಕುಂತ. ೪-೮). 'ನಾಡೆ'ಪರಾ.

ನಡೆ ನೋಟ = ಚೆನ್ನಾದ ನೋಟ ; ಅತಿಶಯವಾದ ದೃಷ್ಟಿ: ನಡೆನೋಟದಿಂದೆ ಬೆಮರು ಪಡೆದು ಮನೋಭವನ ಮನಮುಮಂ ನನೆವಿಲ್ಲಂ ಓಡಿದಿಸುವ ಕೆಯ್ಮುಮಂ ಕೇಳ್ ನಡುಗಿಸದೊಡೆ ನಿನ್ನ ಕೆಳದಿಯಲ್ಲೆಂ ಕೆಳದೀ (ಲೀಲಾವ. ೧೧-೮೨). ನಡೆ ನೋಡು = ಚೆನ್ನಾಗಿ ನೋಡು ; ನಟ್ಟ ದೃಷ್ಟಿಯಿಂದ ನೋಡು : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳೆನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯವಪ್ಪುವಾ ಪುರವರದೊಳ್ (ಕಾವ್ಯಸಾ. ೧೭೮ ಶೂದ್ರಕ) ; ಮೆಲ್ಲನೆ ಮೃಗಮೊಂದು ಸಾರ್ದು ನೆಱನಂ ನಡೆ ನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಚಾರಿಯುಂ ತನಗೆ ಮಾಣದೆ ತಂದನದೊಂದು ಮಾರಿಯುಂ (ಪಂಪಭಾ. ೧-೧೧೧) ; ಎಳೆಮೆಂಡಿನ್ನೆಲೆವಾಡದೊಳೆಳಸಿರೆ ನಡೆ ನೋಡಿ ಸೋಲ್ತುಪೋಲ್ಟಿಂದ್ರಂ ಮಾರ್ಪೊಳೆವ ನೆವದಿಂ ಪೊರಳ್ವಂ ಮಳಯಜರಸಸಿಕ್ತರತ್ನಕುಟ್ಟಿಮತಳದೊಳ್ (ಕಾದಂಪೂ. ೩೦೪) ; ನಡೆ ನೋಟ್ಪರ ಕಡೆಗಣ್ಣಂ ಕಡುನಲ್ಲರ ಮನಮುಮೊಡನೆ ಪೊತ್ತುವು ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಯವೆ ಬಳುವಳಿಕೆವಡೆದ ಬಡನಡು ಭರದಿಂ (ಅರ್ಧನೇ. ೪-೨೨); ಕೃತಕಗಿರಿಯೊಳ್ ನವಿಲೆಟ್ಟಾಡುವುದು

ಪಥಿಕರ್ ನಡೆ ನೋಡುವರೆರ್ದೆ ಥಕ್ಕೆವಾಜಿಸುತ್ತಿರ್ಪಿನೆಗಂ (ವರ್ಧಪು. ೩-೨೨); ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆ ನೋೞ್ಪಿನೊಳಗೆಲು ವಡಗಿರ್ಪುದು ಜೀವನಿರ್ಪೊಡಲ್ಲಿಗೆಪೋದಂ (ಯಶೋಚ. ೪-೧೯); ಕುಸುಮ ಮಾಲೆಯ ತಿರುಹುತೆತ್ತಿದ ಮುಸುಡಿನರೆನೋಟದಲಿ ಲಜ್ಜೆಯ ಬೆಸುಗೆಯಲಿ ನಡೆ[ಪಾಠಾಂ. ನೆಟ್ಟ, ಮಿಗೆ]ನೋಡುತಿರ್ದಳು ಸೀತೆ ರಘುಪತಿಯ (ತೊರರಾ. ೧-೧೫-೩೯); ನಡೆ ನೋಡಿ ನಲವಿಂದ ಹರಸಿದವರು ಮತ್ತೊಡನೆ ಲಂಘಿಸಿದರಂಬರಕೆ (ಭರತ. ೩-೧೨೯); ಜನಪತಿಯ ವದನವಮಂ ಕಣ್ಗೊನೆಯಿಂ ನಡೆ ನೋಡಿ ನಾಡೆ ಮುದವಮಂ ತಳೆದಳ್ (ರಾಜಶೇ. ೪-೬).

**ನಡೆಕೆಯ್ ?** (ಕ್ರಿ). (?) : ಎಡೆಪಟ್ಟಿಗೀ ನಡೆಕೆಯ್ದು ತಪಂ ಸಯ್ಯಮ ಮಾನ್ಯೊಳತ್ತೂರ ಸಂಘ × × ವಡೆ ಕೊೞ್ದಿನ್ತು ವಾೞ್ವುದಱಿದು (ಎಕ. II, ೯೩-೧; ಸು. 700). [ ? ]

**ನಡೆಕೋಲು** 'ನಡೆಗೋಲು' ನೋ.

**ನಡೆಗ** (ನಾ). ೧. ನಡೆಯುವವನು ; ನಡೆಗಾರ : "ಕಸನ್, ಕಸಕಃ, ಈ ೨ ನಡೆಗಂ" (ಕಾಶಕ್ಸ.೧೫೦). ೨. ಒಳ್ಳೆಯ ನಡಗೆಯುಳ್ಳ ಒಂದು ಬಗೆಯ ಕಂದುರೆ : ನಡೆಗ ನಾಗರ ಮಱ ಮಿಡಿವ ಚೆನ್ನಿಗರ ಮುಂಗುಡಿಯಲೇಱುವ ಮುದ್ದುಮೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಿಪರಿಗೆ ತೋಱದರು (ಅಂಜಚ. ೬-೮೪); ನಡೆಗನನೇಱ ಮೇಳದವಳಂ ಪೆಱಗೇಱಿಸಿ ಕೊಂಡು ಪಕ್ಕದೊಳ್ ಗಡಣಿಸಿ ಮೇಳದೊಳ್ ನಗಿಸುತಂ ಬರವಾದಿಗೆ ಗೆಂಟುವೋಗಿ (ಸೂಕ್ತಿಸು. ೧೯-೩೭). [ ನಡೆ$_1$ + -ಗ$_2$ ]

**ನಡೆಗಲ್, ನಡೆಗಲಿ$_1$** (ಕ್ರಿ). ನಡಗೆಯನ್ನು ಕಲಿ ; ಓಡಾಡಲು ಕಲಿತುಕೊಳ್ಳು : ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಪಂಚತಂ.೧೮೭-೯); ನಡೆಗಲ್ವಂದುಂ ಬಿಣ್ಪಂ ಕೊಡೆನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ (ಪಂರಾಮಾ. ೩-೧೨೯); ದೃಢಚಿತ್ತಂ ಗುಣನಿಳಯಂ ಕಡುಗಲಿ ಕಿಱಯಂದು ದಿವ್ಯಜಿನಮುನಿಗಳ ಮೆಲ್ಲಡಿಯಂ ಪಿಡಿದು ತಳರ್ನಡೆ ನಡೆಗಲ್ತಂ ಭವ್ಯವನಜ ವನಕಳಹಂಸಂ (ಧರ್ಮಾಮೃ.೭-೧೩); ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ (ಎಕ. V, ಹಾಸನ. ೭೨-೩೩ ; 1160); (ಶಾಪಮಂ. ೬೧೧ ನೋ.); ನಡೆಗಲ್ವಂದೆ ತಳರ್ನಡೆ ನಡೆಯಿಸಿದುಂ ನೃಪಕುಮಾರನೆಳೆಯಂ ಬಿಣ್ಪಂ ನುಡಿಗಲಂದೆ ತೊದಳ್ನುಡಿ ನುಡಿಯಿಸಿದುಂ ತನಗೆ ಸೋಲ್ತ ವಾಕ್ಕನ್ನಿಕೆಯಂ (ಅರ್ಧನೇ. ೩-೩೦); ವಿಚಾರಿಪಂತಿದು ನಡೆಗಲ್ತು ಸಂಚರಿಪ ಮೇಚಕಶೈಲಮೊ . . . ಪೇಳೆನೆ ತೋಱದುದಾ ವರಾಹಕಂ (ಶಬಶಂ. ೪-೩). **ನಡೆಗಲಿ$_1$** : ಅಂಬೆಗಾಲಿಟ್ಟು ನಡೆಗಲಿತನು ಶ್ರಾವಕರ ಗಡಣಮಾರಣ್ಯದಾವಾನಲ ಮೃಡಭಕ್ತ ಪಡೆದರ್ಗತಿಯೆನೀವುತಿರ್ದ (ಅಬ್ಬಲೂ. ೩-೩೩). [ ನಡೆ$_2$ + ಕಲ್$_1$ ]

**ನಡೆಗಲಿ$_1$** 'ನಡೆಗಲ್' ನೋ.

**ನಡೆಗಲಿ$_2$** (ನಾ). ಆಕ್ರಮಣ ನಡೆಸುವ ಶೂರ ; ಮುನ್ನುಗ್ಗುವ ವೀರ : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱವ ಕಸವರಗಲಿಗಳುಮಂ ಮತ್ತಮಣ್ಮಿ ನಡೆದಿಱವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ ವ). [ ನಡೆ$_1$ + ಕಲಿ$_2$ ]

**ನಡೆಗಲಿಸು** (ಕ್ರಿ). ನಡಗೆಯನ್ನು ಕಲಿಸು ; ನಡೆಯುವುದನ್ನು ಹೇಳಿ ಕೊಡು : ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾವಿಂಡಿಗಳನಿಕ್ಕುತುಂ . . . ನಿರುತರಂ ತೊಲಗದಿರ್ಪುದು ಪೌರವಿಲಾಸಿನೀ ಜನಂ (ಮಲ್ಲಿಶು. ೩-೩೯). [ ನಡೆ$_2$ + ಕಲಿಸು$_1$ ]

**ನಡೆಗಟ್ತಿ** (ನಾ). ಹೇರನ್ನು ಹೊರುವ ಕತ್ತೆ ; ಭಾರವನ್ನು ಹೊತ್ತು ನಡೆಯುವ ಕತ್ತೆ : ನಡೆಗಟ್ತಿಗಳನಿರ್ಬರ್ಗಮೇೞಲ್ ಕೊಟ್ಟು ಪಿರಿದಾಳಂ ನೆರಂಬೇಟ್ಟು ಕಿಱದಂತರಂ ಕಟಿಃಪುತ್ತ್ರಂ ಬಂದು (ಸುಕುಮಾ. ೨-೫೯ ವ). [ ನಡೆ$_1$ + ಕಟ್ತಿ ]

**ನಡೆಗಾಣ್** (ಕ್ರಿ). ೧. ನಡಗೆಯನ್ನು ನೋಡು : ನಡೆಗಂಡು ಕವಿವ ಕಳಹಂಸೆಯಂ ಜಡಿವ ಸವಿನುಡಿಗೇಳ್ದು ಮುತ್ತುವರಗಿಳಿಗಳಂ ಕೊಡಹಿ (ಹಚಕಾ. ೪-೩೦). ೨. ನಡವಳಿಕೆಯನ್ನು ತಿಳಿ ; ಆಚಾರ ವ್ಯವಹಾರ ಗಳನ್ನು ತಿಳಿದುಕೊಳ್ಳು ; ಸಂಪ್ರದಾಯವನ್ನು ಅರಿತುಕೊಳ್ಳು : ಕಡೆಯ ದಿನದೊಳು ಮೂಜಿನೆಯ ಜಾಪದೊಳೆಲ್ಲ ಕಡೆಯಿಂದ ಕೂಡಿದ ಪ್ರಜೆಗೆ ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ ತೊಡಗಿದನೇನ ಬಣ್ಣಿಪೆನು (ಭರತ. ೭೧-೧೧೧). [ ನಡೆ$_2$ + ಕಾಣ್ ]

**ನಡೆಗಿಡು** 'ನಡೆಗೆಡು' ನೋ.

**ನಡೆಗುಱ** (ನಾ). (ಗುಂಪಿನಲ್ಲಿ) ಮುಂದಕ್ಕೆ ಹೋಗುವ ಕುರಿ : ಕೊೞದು ತೊಡೆಲೊಳ್ ಕಾಯ್ದು ಕೋದ ಸಂಕಲೆಯಿಂದೆ ಕೊೞದು ಕಿವಿಯೊಳ್ ಕೊೞದು ಚಿಬುಕದೊಳ್ ನೇಣಿಂದೆ ನಡೆಗುಱಗಳಂ ಮಾಡಿ ಕೈಯನೆಚ್ಚು ವರಿರದೆ ನಡೆಯಿಸೆಚ್ಚಾರ್ದು ಕಾಲ್ಗಳನರಿದು ಬಿಡದಿರದೆ ತಲೆಗಳಂ ತುದಿ ಮೂಗನೆಚ್ಚು ಕೆಡಪುವರಹೋ (ಸಾನಂಚ. ೪-೧೯೯ ರಗಳೆ). [ ನಡೆ$_1$ + ಕುಱ$_2$ ]

**ನಡೆಗೆಡಿಸು** (ಕ್ರಿ). ನಡಗೆಯನ್ನು ನಿಲ್ಲಿಸು ; ಚಲನೆಯನ್ನು ತಪ್ಪಿಸು,- ಅಡ್ಡಿಪಡಿಸು ; ನಿಲ್ಲುವಂತೆ ಮಾಡು : ವಿಟರ ಮೇಳಂಗಳಂ ಚೇಟಿಯರ ಗಡಣದಿಂ . . . ವಾರನಾರೀಜನಂ ಕಟಕದೊಳ್ಕಾಮುಕರ ನಡೆಗೆಡಿಸು ತೊಗ್ಗಿನಿಂ ಪೊಱಮಟ್ಟು ಬರುತಿರ್ದುದು (ಜೈಮಿಭಾ. ೭-೬). [ ನಡೆ$_2$ + ಕೆಡಿಸು$_1$ ]

**ನಡೆಗೆಡು, ನಡೆಗಿಡು** (ಕ್ರಿ). ೧. ನಡೆಯಲಾರದಾಗು ; ಚಲನೆ ಇಲ್ಲ ವಾಗು; ಮುಂದು ಹೋಗಲು ಆಗದಿರು : ತೊಡೆ ದಡದಡಿಸೆ ನಡೆಗೆಟ್ಟು ಕಟಲುಲಿಗೆ ಬೞಸಲ್ಲ ಕಳಹಂಸಮುಂಡಲಕ್ಕಯಶವಂ ಮಾಡಿಸಿಯುಂ. . . ತತ್ಕಾಂತೆ ಒಂದೆರಡಡಿಯನಿಡುವಲ್ಲಿ (ಕಾದಂಲು. ೩೬); ನಭಮೆತ್ತಪೋದುದೆ ನಿಸಲ್ನಡೆಗೆಟ್ಟುದು ಗಾಳಿ ರೂಪುಗೆಟ್ಟುದು ದೆಸೆ (ಜಗವಿ. ೭-೮೦); ಕಳಹಂಸ ಮಾಲೆ ಕಾಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುಪದ್ಯುತಂ (೧೧ಕ. ೮-೧೧); ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೩-೪೫); ಮೆಲ್ಲಡಿಯ ಇಡಲಱಯದಿನ್ನೆನಿತು ಕಾನನದೆಡೆಯೆನುತ ಬೆಸ ಗೊಂಬಳೀ ಪರಿ ನಡೆನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ (ತೊರರಾ. ೩-೪-೧೭); ಆರು ಕರುಣಿಸುವವರು ನಡೆಗೆಟ್ಟಡವಿಯಲಿ ಬೀಳೆ (ನಿಭಾಗ. ೩-೧೪-೧೨); ಜಡೆಗನ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದು ನಡೆಗೆಟ್ಟು ಬಿಸುಸುಯ್ದಾಪಳು (ಮೋಹತ. ೧೭-೯); ೨. ಕ್ರಮಂ ತಪ್ಪು ; ರೀತಿ ತಪ್ಪು : ನಾವು . . . ಮಿತಿಮೀರಿ ಅತಿರೇಕದಿಂದ ಸೊಕ್ಕಿನಿಂದ (Hubris) ನಡೆಯುತ್ತೇವೆ. ಹೀಗೆ ನಡೆಗೆಟ್ಟ ತಪ್ಪಿಗೆ ತಕ್ಕ ಶಿಕ್ಷೆ ನಮ್ಮನ್ನು ಬಡಿಯುತ್ತದೆ (ಬದ್ಧಪ್ರ. XXXV ಅಡಿಟಿ); ನಡೆಗೆಟ್ಟ ಕಟ್ಟಳೆಯೊಳಗೆ ಯಚ್ಚು ಪೆರ್ಚನಿಂ ಸುಡುವ ನನ್ನಿಯನುಳಿಸೆ ತಿಳಿಯದೆಡೆಗೆಟ್ಟಂ (ಕಾಲೂರ. ೧೬೧-೩೫೭). ೩. (ಸಾಮಾನ್ಯವಾದ) ಆಚರಣೆಗೆ ಅಸಾಧ್ಯವಾಗು ; (ಸಾಧಾರಣವಾದ) ವ್ಯವಹಾರಕ್ಕೆ ಒಳಪಡದಿರು : ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅವಚಂ. ೯೯-೪೪೮). **ನಡೆಗಿಡು** : ೧. ನಡೆಗಿಡೆ ಗಾಳಿ ಪೂಱ ಗಗನಸ್ಥಳಿ ತೆಕ್ಕನೆ ತೀವೆ ದಿಜ್ಮುಖಂ . . . ದೇವರುಂ ದಿವಿಜಕಾಂತೆ ಯರುಂ ಬೆಱಗಾಗೆ ಪೂಣೆಪೊಕ್ಕೊಡನೊಡನಾರ್ದರಟ್ಟಡೆಯ ಬಿಲ್ವಡೆ ಬೀಱದುದಸ್ತ್ರವಿದ್ಯೆಯುಂ (ಪಂರಾಮಾ. ೧೩-೪೪); ನಡೆಗಿಡೆ ಗಾಳಿ . . . ಘನಾಘನಂ ಕಟಿಯೆ ಪೆರ್ಮಟ್ಟ ಕೊಂಡವು ಸರ್ವಸತ್ತ್ವಮೋಗಡಿಸೆ ತದಭು

ಕಾಲಮಮವನೀವಳಯಕ್ಕತಿಚೋದ್ಯಮಪ್ಪಿನಂ (ಮಹಾನೇ. ೭-೫೪) ; ನಡೆಗಿ [ಪಾಠಾಂ ಗೆ]ಡೆ ಚಿತ್ತಂ ಧೃತಿಲತೆ ಕುಡಿಗಿಡೆ ಮನಸಿಜ ವಿಕಾರತತಿ ಮಾನಸ್ತ ದೊಳ್ಪಡೆಗಿಡೆ . . . ವಿರಹವಿಹ್ವಳನಾದಂ (ವೃಷವಿ. ೮-೨೦) ; ಕಾಲಿಡಲ್ಕಾ ಶಿಲೆಯೊಳಾ ತುರಂಗದ ಖುರಂ ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ಮೇಲೆ ನಡೆಗೆಟ್ಟು ನಿಂದುದು (ಜೈಮಿಭಾ. ೧೦-೧೧). [ ನಡೆ$_2$ + ಕೆಡು$_1$ ]

ನಡೆಗೇಡು (ನಾ). ನಡಗೆಗೆ ಒದಗುವ ಅಡ್ಡಿ,-ತೊಂದರೆ : ಕೆಲಕೊಜಗಿರ್ದ ಬಲ್ವರವಿಯುಂ ಬಲಗೈ ಜಡಿದೊಪ್ಪಿ ತೂಗೆ ನೀಳ್ದಲೆದೆಡಗೈಯೊಳಾವರೆಯ ಪಂದಳಿರ್ಗಳ್ನಡೆಗೇಡು ಮಾಡೆ . . . ಒಪ್ಪಿದರ್ ಕೆಲಬಲದೂರ್ಗೆ ಪೋಗಿಯಳೆ ಮಾಜಿ ಮುಗುಟ್ಟಿರುತಿರ್ಪ ಗೋಪಿಯರ್ (ಲೀಲಾವ. ೫-೧೦೦).
[ ನಡೆ$_2$ + ಕೇಡು ]

ನಡೆಗೊಳ್, ನಡೆಗೊಳು (ಕ್ರಿ). ೧. ಚಲಿಸು ; ಹೋಗು ; ಸಾಗು ; ತೆರಳು : ಆಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರ್ (ಪಂಪಭಾ. ೧೩-೧೧೭ವ) ; ನಡೆಗೊಂಡತ್ತು ಮದೇಭದಾನ ಜಲಧಾರಾಸಾರದಿಂ ಮಾರುತಂ ನಡೆಗೆಟ್ಟಿರ್ಪನಂ. . .ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೨-೩೨) ; ಒಡನೆಯ್ದಿದ:ವಲರ್ಗಣ್ಗಳ್ ಬಿಡದೆ ಮನಂ ಪೋಯ್ತು ಮನದ ಪಿಂತನೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡದೊರ್ವಳ ಜೀವಮಿರದೆ ಪೋದತ್ತಾಗಳ್ (ಜಗವಿ. ೫-೯೯). ೨. ನಡೆಯಲು ಸಮರ್ಥವಾಗು ; ಗತಿಯನ್ನು ಪಡೆ : ಆಗಳಾಗಳೆ ಪೆಟವಂ ನಡೆಗೊಂಡುತುಂ ಕುರುಡಂ ಕಣ್ಬಡೆದಂತುಂ ಷಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ . . .ಕರ್ವೆಟ್ಟುಮನೇಱಿ ಪೋ:ದರ್ (ರಾಮಾಶ್ವ. ೮೨-೧೨). ೩. ಹೊರಡು ; ಹೊರಬೀಳು : ಪಡೆಯುಂ ನಡೆಯಲ್ಕೆ ಬೇಱೆ ಭೋರೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ (ಶಾಂತಿಪು. ೧೧-೪೬) ; ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ಯೆ (ಜಗವಿ. ೮-೭೯ವ). ೪. ಬಿಟ್ಟುಹೋಗು ; ತೊಲಗು ; ದೂರಸರಿ : ನಾಣ್ ನುಣ್ಚ ಸೋಲದೊದವಿಂ ಕಣ್ ನಸುಮುಗುಳ್ದಿಸೆಯೆ ನಸೆಯುನೆಸಗುವ ಪಲವುಂ ನುಣ್‌ನುಡಿ ಪಸರಿಸೆ ಮನದಿಂ ಜಾಣ್ ನಡೆಗೊಳೆ ತೊಡರ್ದರಿನಿಯಕೂಟ ದೊಳಿನಿಯರ್ (ಚಂದ್ರಪು. ೮-೭೯). ೫. ಮೇಲೆ ನುಗ್ಗು ; ಆಕ್ರಮಣ ನಡೆಸು : ಬಲದಲ್ಮಹೇಶ್ವರನನ್ನರುಪಾಯದಲ್ವಿಷ್ಣುವಿನನ್ನರ್ವಿಜ್ಞಾನದಲ್ ಬ್ರಹ್ಮನನ್ನಯ್ಯರ್ಮ ವರುಣ ವಾಯುವ್ಯ ಚೇರ ಚೋಳ ಪಾಣ್ಡ್ಯರ್ಕಳನ್ನಡೆ ಗೊಂಡು ಕನ್ನರದೇವನ ಕರುಮಾಂ (ಎಕ. IV, ಹೆಗ್ಗಡ, ೧೭-೧೫ ; 1033). ನಡೆಗೊಳು : ೧. ಪೊಳೆವ ಬೆಳ್ಗೊಡೆ ಚಾಮರಂ. . .ಮುಂತಾದ ಸಕಲವಿನಿಯೋಗಸಹಿತಂ ಸೌಂದರಾಧೀಶನು ಒಲಿದು ತಿರುವಾರೂರ್ಗೆ ನಡೆಗೊಂಡ (ಸೌಂದಪು. ೫-೩೪) ; ಜೋಡಿಸಿದ ಕರಿತುರಗರಥವೆಡೆಯಾಡಿದವು ಗುಡಿಮಂಡವಿಗೆಗಳ ಹೂಡಿದೆತ್ತಿನ ಬಂಡಿಗಳು ನಡೆಗೊಂಡವಗಲದಲಿ (ತೊರರಾ. ೨-೬-೯) ; ರಾಜಮರಾಳ ಮತ್ತೇಭಸುಕುಲಕೆ ಸರೋಜಾಂಘ್ರಿ ಯುಗದ ಸದ್ಗತಿಯ ಮಾಜದೆ ಮನಗೊಳಿಸುವವೊಲು ನಡೆಗೊಂಡುದಾ ಜಾಣೆಯ ಸಖೀನಿವಹ (ಮೋಹತ. ೪೧-೩೭) ; ಎಣ್ದೆಸೆಯ ಮೆಟ್ಟಿದುದು ಸಕಲ ವಾದ್ಯಂಗಳ ನಿನದಮಳ್ಳಿವಟ್ಟರಚ್ಚರಿಯರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು (ಚಬಪು. ೬-೫೨) ; ಶರಣ್ಗೊಂಡು ಮುನಿಪ ಅತ್ತ ನಡೆಗೊಳಲಿತ್ತ ದನುಜೇಂದ್ರ ತನ್ಮನದಿ ಚಿತ್ರಭವನುದಿಪ ದಿನಮಂ ಶಂಕಿ ಸುತ್ತಿರಲು (ನವಮೋ. ೧೨-೧೯). [ ನಡೆ$_2$ + ಕೊಳ್$_1$ ]

ನಡೆಗೊಳಿಸು(ಕ್ರಿ). ೧. ನಡೆಯುವಂತೆ ಮಾಡು ; ನಡೆಸು : ಪಸುರ್ವುಲ್ಲಂ ಮೇವುತಿರ್ದ ಪೊಸವಾಣತಿಪುಲ್ಲೆ . . . ಪಟ್ಟಿರ್ದ ಕೊಣಸುಮಂ ಬಿಟ್ಟು ಬರಲಾಱದೆ . . . ತೊರೆದ ಮೊಲೆಯುಂ ಸಾರ್ಚಿ ತಣಿಯೂಡದೆ ನಡೆ ಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೬ವ). ೨. ಹೋಗುವಂತೆ ಮಾಡು; ತಳ್ಳು; ಅಟ್ಟು: ಭೂಪನ ಸೈನ್ಯಸಾಗರವ ಸಂದಿಸಿಯೆ ನಿಮಿಷಾ ರ್ಧದಲಿ ಯಮಮಂದಿರಕೆ ನಡೆಗೊಳಿಸಿ ಮುಖಜರ ಮಂದಿಗಿತ್ತನು ಸಕಲ ಭೂಮಿಯ ಜಾಮದಗ್ನಿಕನು (ಸಂಭಪ. ೨೬-೪೭) ; ರಿಪುಪರಿವಾರವನು ನಡೆಗೊಳಿಸಿದನು ಯಮರಾಜನಾಲಯಕೆ (ಕುಮ್ಯಾದ್ರೋ. ೫-೦೨).
[ ನಡೆಗೊಳ್ + – ಇಸು$_3$ ]

ನಡೆಗೊಳು 'ನಡೆಗೊಳ್' ನೋ.

ನಡೆಗೊಳ್ಳಿ (ನಾ). ನಡೆದಾಡುವ ಕೊಳ್ಳಿ ; ಚಲಿಸುವ ಕೊಳ್ಳಿ : ಅಡೆ ವೊತ್ತುವ ಬೇಸಗೆಯೊಳ್ ಪೆಡೆವಣ ಬಿಡೆ ಕಾಯ್ದು ನೆತ್ತಿ ಛಟಛಟಿಲೆನುತುಂ ನಡೆಗೊಳ್ಳಿಯಂತೆ ನಡೆದುದು ಗಿಡುಗಳ ನೆಟಲಾಸೆಗಹಿಪನಸುವಿಡುತುಸಿರು (ಸೂಕ್ತಿಸು. ೦೦-೧೦೦). [ ನಡೆ$_1$ + ಕೊಳ್ಳಿ$_1$ ]

ನಡೆಗೋಂಟೆ, ನಡೆಗೋಟೆ (ನಾ). ೧. ಯುದ್ಧದಲ್ಲಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸುವ (ಸೈನ್ಯದಿಂದ ರಚಿಸಿರುವ) ರಕ್ಷಣೆಯ ವ್ಯೂಹ : "ಜಂಗಮಃ 'ಪ್ರಾಕಾರಃ – ನಡೆಗೋಂಟೆ" (ನೀತಿಪಾ. ೨೧-೭) ; ಸಂಗರಭೂಮಿಯೊಳೊಡ್ಡಿ ನಿಂದಡ್ಡಮಾಗಿ ಬಗ್ಗಿಸಿ ಮೊಗ್ಗರಿ ಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು (ಗಿರಿಕ. ೬-೫೫ವ) ; ಕಟ್ಟಿದಲಗಿನ ಕನ್ನಡಿಯ ತೊಲಗದ ಕಂಬದ ವೀರಘಂಟೆಯ ನಡೆಗೋಂಟೆಯ ಜಾಯಿಲದ ಪೊಂಬಟ್ಟೆಯ . . . ಬೆಳಗುಗಳ್ ಮಾರ್ತಂಡಂಗೆ ಮಾರ್ಪೊ ಳೆಯೆ (ಮಹಾನೇ. ೧೨-೧೯ವ); ಬಿಡದೆ ನಡೆಗೋಂಟೆಗಳ ಮೊಗ್ಗರಂ ನೂಂಕಿ ದವು ಪುರದ ಪೊಱಬಳಿಸಿನೊಳ್ ಪಡಿಯಟ್ಟಣೆಗಳಿದ್ದುವು (ಚಬಪು. ೪೨-೨೪). ೨. ರಕ್ಷಣೆಯ ಸಾಧನ : ಮಂಟಪದೊಳು ಸುತ್ತಿ ಸುಳಿದರೊಲ್ಮೆಯ ನಡೆಗೋಂಟೆಯೊಯೆಂಬ ರೀತಿಯೊಳು (ಭರತ. ೧೩-೭೯). ನಡೆಗೋಟೆ : ೧. ತಾಟಿಸಿದರೊಡನೊಡನೆ ಕುಲಗಿರಿ ದೂಟ ಬಿದ್ದವು ಚಿತ್ರದಲಿ ನಡೆಗೋಟೆ ಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಮ್ಯಾಭೀ. ೪-೨೫) ; ಈ 'ನಡೆಗೋಟೆ'ಗಳು 'ತಳಿ' 'ಮುಳುವೇಲಿ'ಗಳಂತೆ ಪಾಳೆಯದ ಸಂರಕ್ಷಣೆ ಗಾಗಿಯೂ ಇದ್ದಿರಬಹುದು (ಕರ್ನಾಜ. ೨೯).

ನಡೆಗೋಂಟೆಮಲ್ಲ, ನಡೆಗೋಟೆಮಲ್ಲ = ನಡೆಗೋಟೆಯಂತೆ ರಕ್ಷಿಸುವ ವನು; ಏಕಾಂಗವೀರ; ಮಹಾ ಪರಾಕ್ರಮಿ; ಒಂದು ಬಿರುದು: ಮಾಱ್ಬಲಕ್ಕೆ ನಿಜಸೇನೆಗೆ ವಜ್ರದ ಕೋಂಟೆಯಾಗಿ ತೋಱುಗು ನಡೆಗೋಂಟೆ ಮಲ್ಲನ ಭುಜಾಬಳಮೀ ಅವನೀತಳಾಗ್ರದೊಳೂ (ಎಕ XI, ಚಿತ್ರದು. ೨-೦೬; 1355) ; ಸುಭಟರಾಚಾರ್ಯ (೦) ಸತ್ಯರತ್ನಾಕರಂ ನಡೆಗೋಟೆಮಲ್ಲಂ ಗ (೦) ಣ್ಡರಗೋವಂ ಮಣ್ಡಳೀಕ ನಾರಾಯಣಂ (ಸಾಇಇ. XI-1. ೫೭-೨೦ ; 1019) ; ಶ್ರೀಮತು ಮಹಾಮಂಡಳೇಶ್ವರಂ ಉಭಯದ[ಳ]ಪಿತಾಮಹ ನಡೆಗೋಟೆ ಮಲ್ಲ ಸೆಟ್ಟಿ ಸಾ[ಹಸ]ಭೀಮ ಗುಂಡರಸನು ತಂನಾಳ್ಕೆಯೊಳು ಕಾ[ಳ್ದ] ಗೆಯಲ್ಲಿ ಕೊಟ್ಟ ಮ ೧೨ ಮನೆ ೧ (ಸಾಇಇ. XX, ೨೨೬-೨೪ ; 1306).
[ ನಡೆ$_1$ + ಕೋಂಟೆ ]

ನಡೆಗೋಟೆ 'ನಡೆಗೋಂಟೆ' ನೋ.

ನಡೆಗೋಟೆಕಾಱ (ನಾ). ಸೈನ್ಯದಿಂದ ರಚಿಸಿರುವ ರಕ್ಷಣೆಯ ವ್ಯೂಹದ ಲ್ಲಿರುವ ಮುಂದಾಳು,-ಪರಾಕ್ರಮಿ : ನಡೆಗೋಟೆಕಾಱರು ಕೆಣಕಿದರು ಕಪಿರಾಜಸೈನಿಕವ (ತೊರರಾ. ೬ ೩೩-೨).
[ ನಡೆಗೋಟೆ (<ನಡೆಗೋಂಟೆ) + – ಕಾಱ ]

ನಡೆಗೋಲು, ನಡೆಕೋಲು (ನಾ). ನಡೆಯುವಾಗ ಊರಿಕೊಳ್ಳಲು ಹಿಡಿದುಕೊಳ್ಳುವ ಕೋಲು; ಊರುಗೋಲು ; ಬೆತ್ತ : ಆ ವ್ಯಕ್ತಿ ಮಿರುಮಿರನೆ ಮಿಂಚುತ್ತಿದ್ದ ಹಿಡಿಕೆಯುನ್ನುಳ್ಳ ನಡೆಗೋಲನ್ನು . . . ನೆಲದ ಮೇಲೂರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪುನರು. ೨೭೩); ಕಡೆಗೆ ಬಾದೇ ಬಂದ ಒಬ್ಬ ಮುದುಕ, ನಡೆಗೋಲು ಅವನೆತ್ತರ (ಶಿರಾಂ. ೮೭-೧೭). ಏ, ನನ್ನ ನಡೆಗೋಲು ಎಲ್ಲಿ ? (ಉದಮ್ಮ. ೫೯). ನಡೆಕೋಲು :

ವ್ಯಾಸಸ್ಮೃತಿಗೆ ನಡೆಕೋಲಾದನೆ ಮರುಳ್ಗಳ ಹುರುಳೇ ಎಡರಾಳುವನೇ ಏ ಬಿನದಕೆ ನನ್ನಡೆಗೈತೆಂದೆ (ಗಣೇಶ. ೨-೪೭).

[ ನಡೆ$_1$ + ಕೋಲು$_1$ (<ಕೋಲ್$_1$) ]

**ನಡೆಗೋಳ** (ನಾ). (ಅಲಂ) (ಆತ್ಮನಿಗೆ) ನಡೆದಾಡುವ ಬಂಧನ; ದೇಹ : ಕೂಳು ನೀರನ್ನು ಕೊಂಡು ತನುವಿದು ಮೇಲೆಮೇಲುಬ್ಬರಿಸಿ ಬೆಳೆವುದು . . . ಬೀಳುವುದು ಕೊಡದಿರ್ದಡೀ ನಡೆಗೋಳದಲ್ಲಿ ನೀ ಸಿಲುಕಿ ಬಳಲದೇ ಬೇಳಗೊಳ್ಳದಿರು (ನಿಭಾಗ. ೯-೧೮-೧೨). [ ನಡೆ$_1$ + ಕೋಳ$_1$ ]

**ನಡೆಗೌಡ** (ನಾ). (?) : ಮುನಿಭದ್ರಗೌಡರ ಮಕ್ಕಳು . . . ರೇಗರೇವಂತ ನಡೆಗೌಡ ಸುರಿತಂಣ ಹಿರಿಯತಮ್ಮಗೌಡರು ಮುಖ್ಯವಾದ ಆತನ ಅನುಜ ಪದ್ಮಯನು (ಎಕ. VII, ಶಿವಮೊ. ೧೦೭-೦೫ ; 950 ?).

[ಇದು 'ನಾಡಗೌಡ' ಎಂಬುದರ ಅಪಲಿಖಿತವಿರಬಹುದೆ ? ]

**ನಡೆಚಪ್ಪರ** (ನಾ). ೧. ದಾರಿಯುದ್ದಕ್ಕೂ ಹಾಕಿರುವ ಚಪ್ಪರ : ಅಂಬರ ಸ್ಥಳವಂ ಮುಸುಕಿದಾಡಂಬರದ ನಡೆಚಪ್ಪರಂಗಳು ಬಿಂಬಿಸುವ ಧವಳಾತ ಪತ್ರವು ಚಾಮರಾದಿಗಳು (ಬಸಪು. ೬-೨೨). ೨. ಕೆಲವು ವಿಶೇಷ ಸಂದರ್ಭ ಗಳಲ್ಲಿ, ಮರ್ಯಾದೆಗಾಗಿ ಜನರು ಹಿಡಿದು ತರುವ ನಾಲ್ಕು ಕೋಲು ಗಳುಳ್ಳ ಚಪ್ಪರದಾಕಾರದ ವಿತಾನ; ಸಿಂಧೂಪ : ನೃಪತಿಲಕರ ಪಲವು ಕೊಡೆಯಾಗಸವಂ ಪಂದಲಿಸುತ್ತಂ ನಡೆತರೆ ನನೆವಿಲ್ಲಂ ರಿಪುದುರ್ಗಕೆ ನಡೆಯಿಪ ಗಡಣದ ನಡೆಚಪ್ಪರಮನಲೆಸಕವಡೆದುದಾಗ (ಜಯನೃ. ೮-೨೭); ಪಟ್ಟಾವಳಿಯ ನಡೆಚಪ್ಪರದ . . . ಚಾಮರದ ಘನಸಂಕುಳದಲವನಿಯನಂ ಬರವನೆಡಗಲಸಿ ನಡೆದುದು ಕೊಡೆ ಯಮುನಾನದಿಗೆ ಜನನಿವಹ (ನಿಭಾಗ. ೧೦-೧೦೦೦-೦೧) ; ರಾಜಮರ್ಯಾದೆಗಳಾದ ರಾಜದಂಡ ಛತ್ರಿ ಚಾಮರ . . . ನಡೆಚಪ್ಪರ-ಇತ್ಯಾದಿ ಬಿರುದುಗಳು ಬಂದ ಮೇಲೆ . . . ಅತ್ಯಂತ ಗೌರವದಿಂದ ಕರೆದುಕೊಂಡು ಬರುತ್ತಾನೆ (ತಾಂಗಳ. ೭೦). ೩. ಯುದ್ಧ ಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ರಕ್ಷಣೆಯ ಸಾಧನ: ಡೆಂಕಣೆಗಳಂ ಮೇಳೈಸಿ ನಡೆಚಪ್ಪರವನ್ನು ನಡೆಯಿಸಿ . . . ದೂಳಿ ಗೋಂಟೆಯ ಕೊಳ್ಳಬೇಕೆಂಬ ಪಡಿಯಬಿರ ಕಲಕಲಂ ಕರಮೊಪ್ಪಿತು (ಸಮ್ಯಕ್ತ್ವ. ೮-೩೦) ; ನಡೆಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪೆಟಲು ಕೋಟೆಯನು ಕೆಡಪುವ ಡೆಗ್ಗೆ ಹತ್ತುವ ನಿಚ್ಚಣಗೆಗಳಂದೊಡನೈದಿದ ವಸಂಪ್ರಾತ (ಕುರಾಸಾಂ. ೩೭-೭೭). [ ನಡೆ$_1$ + ಚಪ್ಪರ ]

**ನಡೆಜಂತ್ರ** (ನಾ). ಚಲಿಸುವ ಯಂತ್ರ; ನಡೆದಾಡುವ ಯಂತ್ರ : ಆದಿತ್ಯ ವಿರಹದೊಳಮಕ್ಕೋದತಮಂ ಪರ್ವುವಂತೆ ಜಗಮಂ ಜೀವಂ ಪೋದೊಡ ಮದಂಗರಂಚಿ ಬೀಜಾದುದು ನಡೆಜಂತ್ರಮಲ್ತೆ ನರರ ಶರೀರಂ (ಶಾಂತಿಪು. ೬-೯೭) ; ಕುಸುಮಾವಳಿದೇವಿ ಬರುತ್ತುಮಿರ್ದಳಾ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ (ಕುಸುಮಾ. ೧೩-೧೩೫).

[ ನಡೆ$_1$ + ಜಂತ್ರ ]

**ನಡೆಜಾಣ** (ನಾ). ನಡವಳಿಕೆಯನ್ನು ಚೆನ್ನಾಗಿ ತಿಳಿದವನು ; ರೀತಿನೀತಿ ಗಳನ್ನು ಬಲ್ಲವನು : ನುಡಿಜಾಣ ನಡೆಜಾಣ ನೆಟಜಾಣ ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರ ಪುರುಪಾ (ಭರತ. ೭-೭೭). 'ನುಡಿಜಾಣ' ಪರಾ. [ ನಡೆ$_2$ + ಜಾಣ ]

**ನಡೆಜಾಣ್ಮೆ** (ನಾ). ವ್ಯವಹಾರದಲ್ಲಿ ಜಾಣತನ,–ಬುದ್ಧಿವಂತಿಕೆ : ನುಡಿ ಜಾಣ್ಮೆ ನಡೆಜಾಣ್ಮೆ ನನಗೊ ದೇವರಿಗೊ ಸಂಗಡದ ಭೂಪರು ಪೇಳ ಲೆಂದ (ಭರತ. ೩೯-೦೦೭). 'ನುಡಿಜಾಣ್ಮೆ' ಪರಾ.

[ ನಡೆ$_2$ + ಜಾಣ್ಮೆ ]

**ನಡೆಜೋಡು** (ನಾ). ನಡಿಗೆಗೆ ಹೊಂದಿಕೊಳ್ಳುವ ಜೋಡಿ,–ಜೊತೆ : ಕೂಡೆ ಸಂಜಯನಟಿಸಿದನು ನಡೆಜೋಡಿನವು [ಪಾಠಾಂ.ಪಯಪಾಡಿನಲಿ] ವಾನೂಱು ಕುದುರೆಯ ಕೂಡಿ ಕೌರವನೃಪನ ಕಾಣದೆ ಕಳನ ಚೌಕದಲಿ (ಕುವ್ಯಾಗ. ೨-೩). [ ನಡೆ$_2$ + ಜೋಡು ]

**ನಡೆಡೆಂಕಣಿ** (ನಾ). ಕೋಟೆಯ ಬುರುಜಿನ ಮೇಲೆ ಚಲಿಸುವಂತೆ ಏರ್ಪಡಿಸಿರುವ ಒಂದು ಬಗೆಯ ಆಯುಧ ; ಚಲಿಸುವ ಡೆಂಕಣಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಕುರಾಸಾಂ. ೪೨-೩೯). 'ಡೆಂಕಣಿ' ಪರಾ. [ ನಡೆ$_1$ + ಡೆಂಕಣಿ ]

**ನಡೆತ** (ನಾ). ನಡೆಯುವಿಕೆ ; ನಡಗೆ. [ ನಡೆ$_1$ +-ತ$_2$ ]

**ನಡೆತರ್**, ನಡೆತರು (ಕ್ರಿ). ಬರು ; ಆಗಮಿಸು : ಕೆಯ್ಮಿಕ್ಕು ಕಾದಲ್ ನಡೆತರ್ಪಾವೇಗದೊಳ್ ಮುಮ್ಮಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದುದೇಂ ಕಣ್ಗೊಳಿಸಿದುದೊ ಚಳಚ್ಚಂದ್ರ ಕಚ್ಛತ್ರ ಪಿಂಡಂ (ಪಂಪಭಾ. ೧೩-೩೮) ; ಚೆಲ್ವನಾಳ್ದು ಮೆಲ್ಲನೆ ನಡೆತರ್ಪ ನೀಲಮಣಿ ಪುತ್ರಿಕೆಯೆಂದದಿನಾದಮೊಪ್ಪಿದಳ್ (ಕಾದಂಪೂ. ೩೮): ಸಾಯಂಕಾಲ ಶೃಂಗಾರಸಮಯಮೆಂದು ಮಧುರಾಪುರಾಧೀಶ್ವರನಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸೈರಂಧ್ರಿ ನಡೆತರೆ (ಜಗವಿ. ೬-೧೮ವ) ; ಉರವಣಿಸಿ ನಡೆ ತರುತ್ತುಂ ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿ ದಕ್ಷಿಣೋತ್ತರಾಯಣನಾದಂ (ಗಿರಿಕ. ೧-೩೩) ; ಕಡುಸೊರ್ಕಿಂದಲರಂಬನಾನೆಯೆನಿಪೀ ತೆಂಗಾಳಿ ತನ್ನಿಚ್ಛೆಯಿಂ ನಡೆ ತಂದಪ್ಪುದು ಬೇಗದಿಂ ಬಿರಯಿ ನೀಂ ಪೋ ಪೋಗು (ಕಬ್ಬಿಗಕಾ. ೩೩).

**ನಡೆತರು** : ಕಪ್ಪಡಿಯ ಸಂಗಮುಮಂ ಪೊಕ್ಕು ಕೇರಿ ಕೇರಿಯೊಳು ನಡೆ ತಪ್ಪಾಗಳು ಶಂಕರಾಲಯಮುಮಂ ಭೋಂಕನೆ ಕಂಡು (ಬಸರ. ೨-೩೦) ; ಆ ಸಮುದ್ರದಲ್ಲಿ ರಾಯವೇದವ್ಯಾಸಮುನಿ ನಡೆತಂದು ಗತಪರಿತೋಷನನು ಸಂತೈಸಿ ಕರಸಿದನಂದು ಸಂಜಯನ (ಕುವ್ಯಾಭೀ. ೧-೫೫) ; ತೆಗೆದ ತೊಟಿ ಕಾಲುವೆಗಳುದ್ಯಾನಗಳ ಕಳವೆ ದ್ರಾಕ್ಷೆ ಧವಳೇಕ್ಷುಗಳ ವನವೀಥಿಗಳನೀಕ್ಷಿ ಸುತರಸ ನಡೆತಂದ [ಪಾಠಾಂ. ನೈತಂದ] (ತೊರರಾ. ೧-೬-೧೦) ; ಸತಿಯರ ಗಡಣದಲಿ ನಡೆತಂದಳಿಂದುಮುಖಿ (ನಳಚ. ೩-೫೫) ; ಪರಿಪರಿ ಪಾತ್ರವೆ ಗಳು ಸಿಂಗರಿಸಿಯೆ ಹರುಷದೊಳಗೆ ನಡೆತಂದು (ಕಂನವಿ. ೬-೦೦೭).

[ ನಡೆ$_1$ + ತರ್ ]

**ನಡೆತರು** 'ನಡೆತರ್' ನೋ.

**ನಡೆತೋರಣ** 'ನಡೆದೋರಣ' ನೋ.

**ನಡೆದಾಣ** (ನಾ). ನಡೆದಾಡುವ ಸ್ಥಳ ; ಓಡಾಡುವ ಜಾಗ ; ದಾರಿ : ಪೊಂಬೆಟ್ಟಂ ಪೊಂಬಸಿರಂಗಿಂಬುವಸದಿಯುಮಲರ್ಪೊಡೆಯಂಗೆ ನಡೆ ದಾಣಮುಂ . . . ಬೋಟಿಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೭-೫). [ ನಡೆ$_1$ + ತಾಣ ]

**ನಡೆದಾರಿ** (ನಾ). ನಡೆದಾಡುವ ದಾರಿ ; ಓಡಾಡುವ ಮಾರ್ಗ : ಆಚೀಚೆ ಹುಡುಕುತ್ತ ಜಾನೂ ಅಮ್ಮನ ಕೋಣೆಯ ಪಾರ್ಶ್ವಭಾಗದ ಇಕ್ಕಟ್ಟಾ ದೊಂದು ನಡೆದಾರಿಯನ್ನು ಸೇರಿದನು (ಕಾಬರ್ಘಾ. ೨೫) ; ತೋಟಗಳು ಸಾಮಾನ್ಯವಾಗಿ ಚೌಕ ಇಲ್ಲ, ನಿಡುಚೌಕ ಇದ್ದು . . . ಒಳಗೆ ತಿರುಗಾಡಲು ನಡೆದಾರಿಗಳು ಇದ್ದವು (ಇಸ್ಲಾಂಸಂ. ೧೮೯). [ ನಡೆ$_1$ + ದಾರಿ ]

**ನಡೆದುಳಿ** (ಕ್ರಿ). ದಾರಿಯನ್ನು ತುಳಿ; ದಾರಿ ಸವೆಸು : ಅಡಿಯ ನೆಲದೊಳ್ ಬಿಸಿಲ್ ಕಡೆಸಾಲ ಬರೆಯುತಿರೆ ನಡೆದುಳಿದು ನೆಲ್ಲೂರ ಮನೆಗೆ ನಡೆತಂದಂ (ಕಾಲೂರ. ೧೧೨-೩೩೦). [ ನಡೆ$_2$ + ತುಳಿ$_1$ ( < ತುಟಿ$_1$ ) ]

**ನಡೆದೇಗುಲ** (ನಾ). ಚಲಿಸುವ ದೇವಸ್ಥಾನ ; (ಒಂದೆಡೆ ಸ್ಥಿರವಾಗಿರದೆ) ಉತ್ಸವದಲ್ಲಿ ಎಳೆಯುವ ದೇವರ ವಿಗ್ರಹವಿರುವ ಮಂಟಪ, ತೇರು,–ರಥ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನೆಲ್ಲಮಱಿಯೆ ಚಟ್ಟಂ ನೆಲದೇಗುಲಮುಮನಿದೊಂದನೊಲ್ದೆತ್ತಿಸಿದಂ (ಎಕ. V, ಬೇಲೂರು. ೧೯೩-೯೪ ; 1160). [ ನಡೆ$_1$ + ದೇಗುಲ ]

**ನಡೆದೋರಣ, ನಡೆತೋರಣ** (ನಾ). ಎರಡು ಕಡೆ ಹಿಡಿದಿರುವ ಕೋಲುಗಳ ತುದಿಗಳಿಗೆ ಕಟ್ಟಿ, ಉತ್ಸವಾದಿಗಳ ಮುಂದೆ ಹಿಡಿದುಕೊಂಡು ಹೋಗುವ ತೋರಣ; ಚಲಿಸುವ ತೋರಣ; ಮಕರ ತೋರಣ : ಸಿರಿವತ್ತ ಕ ನ ಕ ದ ಂ ಡ ದ ಚಾಮರ ಸೀಗುರಿ ನಡೆದೋರಣನಿಚಯ ಪರಿಶವಿಸಿರ್ದ ನಾನಾವಿಧ ಟೆಕ್ಕೆಯ ತೆರಳಿತು ಸಭವನಲ್ಲಿಟಿಂದು (ಮೋಹತ. ೧೫-೩೧). ನಡೆತೋರಣ : ನುಡಿವ ನಾನಾವಾದ್ಯಘೋಷಣೆ ಕಲಶ ಕನ್ನಡಿಯ ಪೆಣ್ಗಳ ರಾಗರಚನೆ ಇಡಿಕಿರಿದುದು ಸೆಟ್ಟಿಸಮಯರುಗಳ ಕೆಯ್ಯ ಗುಡಿ ನಡೆತೋರಣನಿಚಯ (ಮೋಹತ. ೧೧-೩೮); ರಾಜವೀಧಿಯೊಳೆತ್ತಿದ ಪತಾಕೆಗಳ ಸೂಸುವ ಸೀಗುರಿಗಳ ಬೀಸುವ ಚಾಮರಂಗಳ ಸೊಗಯಿಪ ಧವಳ ಪತ್ರಂಗಳ ನವರತ್ನದ ನಡೆತೋರಣಂಗಳ . . . ಸಿರಿ ಕಂಗೊಳಿಸೆ (ವೃಷವಿ. ೫-೧೧೭). [ ನಡೆ$_1$ + ತೋರಣ ]

**ನಡೆನಿಱಿಗೆ** (ನಾ). ಓಡಾಟದ ರೀತಿ,-ಸೊಗಸು; ನಡಗೆಯ ಸೊಬಗು : ನೆರೆವನೆಯಂ ಪೋಪ ಬರ್ಪ ಜವ್ವನಿಗರ ನಡೆನಿಱಿಗೆಯಿನಿಡಿಕಿಱಿದ ಪಂತಿಯಿಂ (ರಾಮಾಶ್ವ. ೨೩-೭). [ ನಡೆ$_2$ + ನಿಱಿಗೆ ]

**ನಡೆಪಾಡಿಸು** (ಕ್ರಿ). ನಡೆದಾಡಿಸು; ನಡೆಯುವಂತೆ ಮಾಡು; ಚಲಿಸುವಂತೆ ಮಾಡು; ಓಡಾಡಿಸು : ಹಂಸಾವಳಿಯುಂ ನಡೆಪಾಡಿಸು ಕೋಕಿಳನಾದವನಾಲಿಸುಸಿರದಿರ್ಪರೆ ಮದನಾ (ಗಿರಿಕ. ೮-೭೦); ವಾರುವಮಂ ನಡೆಪಾಡಿಸಲ್ಕೆ ನೋಡುವ ಮಱಿಗಳ್ಗೆ ಪಾಲನೆಱಿವುಪ್ಪುಗವಂ ತಳೆದಿರ್ಪನಾವಗಂ (ನಳಚಂ. ೬೧೯). [ ನಡೆಪಾಡು ( <ನಡವಾಡು) + – ಇಸು$_3$ ]

**ನಡೆಪಾಡು** 'ನಡಪಾಡು' ನೋ.

**ನಡೆಪು$_1$** 'ನಡಪು$_1$' ನೋ.

**ನಡೆಪು$_2$** 'ನಡಪು$_2$' ನೋ.

**ನಡೆಬಾವಿ, ನಡಬಾವಿ, ನಡಭಾವಿ, ನಡೆಭಾವಿ** (ನಾ). ಇಳಿದು ನೀರು ತುಂಬಿಕೊಳ್ಳುವಂತೆ ಸೋಪಾನಗಳಿರುವ ಬಾವಿ,-ಮೆಟ್ಟಿಲುಗಳುಳ್ಳ ಬಾವಿ,-ಕೊಳ : ಪೊಸದುರ್ಗವಂ ಪಾಟಿಸಿ ಪಿರಿಯ ನಡೆ [ಪಾಠಾಂ. ಡ] ಬಾವಿಗಳನಗುಳಿಸಿದನದಱೊಳಗೆ (ಬಸಪು. ೧೫-೧೧). ನಡಬಾವಿ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ನಡಭಾವಿ : ಅಮೃತರಸ ಪರಿಪೂರ್ಣವಾದಮೃತಸಂಜೀವಿನಿ ಎಂಬ ಹೆಸರುಳ್ಳ ಒಂದು ನಡಭಾವಿಯು ಉಂಟಾಗಬೇಕೆಂದು ದೇವರನ್ನು ಬೇಡಿ (ಕೃವಾಕ. ೩೪). ನಡೆಭಾವಿ : ನೂರು ಸೇದೋ ಭಾವಿ ಕಟ್ಟಸುವುದಕ್ಕಿಂತಲೂ ಒಂದು ನಡೆಭಾವಿ ಕಟ್ಟಸುವುದುತ್ತಮ (ಕೃವಾಳ. ೧೭೦).
[ ನಡೆ$_1$+ ಬಾವಿ. / ತಮಿ. ನಟ್ಟೆವಾವಿ, ನಟ್ಟೆಪಾವಿ, ನಟಪಾವಿ; ತೆಲು. ನಡಬಾವಿ ]

**ನಡೆಬೆಡಗು** (ನಾ). ನಡಗೆಯ ಸೊಗಸು,-ಒಯ್ಯಾರ : ನಡೆಬೆಡಗೋ ನಿಲುಬಗೆಯೋ ನಗುವೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೧೩-೧೧). [ ನಡೆ$_2$ + ಬೆಡಗು ( <ಬೆಡಂಗು ) ]

**ನಡೆಭಾವಿ** 'ನಡೆಬಾವಿ' ನೋ.

**ನಡೆಮಂದಸ** (ನಾ). ಚಲಿಸುವ ಪೆಟ್ಟಿಗೆ : ರಿಪುವೆಟ್ಟಱಿದಿಟ್ಟ ಕೈದುವೆನ್ನುದರದೊಳೆಯ್ದ ತಳ್ಳಿಡಿದಿರಲ್ ಯುವರಾಜನ ಶ ಸ್ತ್ರ ಕೋ ಟ ಿ ತೀವಿದ ನಡೆಮಂದಸಂಬಿನೆಗವಿರ್ಪನದೆಂದೊ ಮಹಾಜಿರಂಗದೊಳ್ (ಜಗವಿ. ೧೭-೮೭).
[ ನಡೆ$_1$ + ಮಂದಸ ]

**ನಡೆಮುಡಿ, ನಡೆಮುಡಿ** (ನಾ). ದೇವರ ಕಾರ್ಯ ಮುಂತಾದ ಶುಭ ಸಂದರ್ಭದಲ್ಲಿ ಉತ್ಸವಗಳು ನಡೆಯುವಾಗ ಉತ್ಸವದ ದಾರಿಯಲ್ಲಿ ಗೌರವಾರ್ಥವಾಗಿ ಹಾಸುವ ಮಡಿಯಾದ ವಸ್ತ್ರ,-ಬಟ್ಟೆ : ಹಡದಿ : ದೇವಾಂಗಪಟ್ಟಕೂಲದ ಸೆಱಗಿನ ಸೆರೆಯಂ ನಡೆಮುಡಿಯ ಹಾಸಿ . . . ಧೂಪಾರತಿ ಘಂಟೆ ಸಹವಾಗಿ ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲು (ಶೂನ್ಯಸಂ. ೯೯-೨೨); ನಡೆಮುಡಿ ಗಂಧದಕ್ಷತೆ ಫಲಾವಳಿ ಪೂವಿನ ಮಾಳೆ ಮುತ್ತು ಕನ್ನಡಿ ಕಳಸಂ . . . ಚಾಮರಮೆಂಬಿವೊಪ್ಪಮಂ ಕುಡೆ ಜನದತ್ತೆಯೋಂ ನಡೆದಳೋ (ಅರ್ಧನೇ. ೧-೮೮); ಆ ನಗೆಗಣ್ಗಳ ಕಡೆಯ ಬೆಳಂತಿಗೆವೆಳಗು ಪರಿದ್ದು ಮುಂಗುಡಿಯೊಳ್ ಪಸರಿಸಲೆಸೆದುದು ನಡೆಮುಡಿಯಂಪಾಸಿದ ತೆಱದಿ (ಜಯುಕಾ. ೫-೩೭); ಕಟ್ಟಿದ ಗುಡಿ ತೋರಣ ನಡೆಮುಡಿ ಮೇಲ್ಗಟ್ಟು ಪಟ್ಟಕೂಲಕರಂಗವಲ್ಲಿಯಿಂ ಅಲಂಕೃತವಾದ ನಿಜಾಲಯದೊಳು . . . ಕುಳ್ಳಿರಿಸಿ (ಶಾಂತೀಶ. ೯-೨೨); ನಡೆಮುಡಿಗಳ ಪಾಸುತ್ತುಂ ಸಡಗರದಿಂ ಶೋಭನಂಗಳಂ ಪಾಡುತ್ತುಂ ಮಡದಿಯರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ (ವೀರವಿ. ೯-೭೫); ನಡೆಮುಡಿ ನಾಲ್ಕೆಂಟುವಾರ್ಕೆದಲಲ್ಲಲ್ಲಿಗೊಡನೆತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಗಳಿಂದಡಿಯಿಡಿಸಿದರು ಯೋಗಿಗಳ (ಭರಚ. ೩-೮೧); ಸುರರಂ ಸಮಂತು ಪೊರೆದ ಭವಂಗೀಧರೆ ಪಾಸಿದ ನಡೆಮುಡಿಯೆನೆ ಕರಮೆಸೆದುದು ವಿಮಳಗುಣದಿನಾ ನದಿ ಪದಪಿಂ (ರಾಜಶೇ. ೨-೫); ಹರಿಹರದೇವರು ನಡೆದು ಬರುವ ಹಾದಿಯುದ್ದಕ್ಕೂ ನಡೆಮುಡಿಯನ್ನು ಹಾಸಿ ಹೂವುಗಳನ್ನು ಚೆಲ್ಲುತ್ತಿರುವರು (ತುಂಗಭ. ೭೦). ನಡೆಮುಡಿ: ಬಿಳಿಯ ಚತ್ರಿ ನಡೆಮುಡಿ ಕಲಶ ಕನ್ನಡಿಗಳು ಇಲ್ಲದ ಮೆರವಣಿಗೆಯೇ ಇಲ್ಲ (ಚಿದೇವ. ೧೯೩); ಯಾವ ಮೋತೀಭಾಯಿಗಾಗಿ ರಾಜನು ನಡೆಮುಡಿಯನ್ನು ಹಾಸುತ್ತಿದ್ದನೋ ಅವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ (ಬೂದಿಗಿ. ೦೦೫); ಊರಿನ ಅಗಸ "ನಡೆಮುಡಿ" ಹಾಸಿಕೊಂಡು (ದಾರಿಯುದ್ದಕ್ಕೂ ಬಟ್ಟೆ ಹಾಸಿಕೊಂಡು) ಅವರನ್ನು ನಡೆಸಿಕೊಂಡು ಬರುತ್ತಾನೆ (ಸರ್ವಮಂ. ೧೯೨). [ ನಡೆ$_1$ + ಮಡಿ$_5$ ]

**ನಡೆಮಾಡ** (ನಾ). ಚಲಿಸುವಂತೆ ರಚಿಸಿರುವ ಒಂದು ಬಗೆಯ ಮನೆ; ವಿಮಾನ; ವ್ಯೋಮಯಾನ : "ನಡೆಮಾಡಮೆಂದುಂ ವಿಮಾನಂ" (ಕಶಸಾ. ೨೮-೫೮೫); ನಡೆಮಾಡ [ಪಾಠಾಂ. ಡು] ಪಾಱಿನೆ ವ್ಯೋಮಯಾನನಾಮಂ (ಶಬ್ದಮಂ. ೧೧); "ನಡೆಮಾಡಮೆನೆ ಸುರವಿಮಾನಂ" (ಕಶರ. ೫೨); ಗಜೇಂದ್ರಂ ತುರಂಗಂ ನಡೆಮಾಡಂ ದಣ್ಣನಾಥೋತ್ತಮಪದವಿ ಮಹಾತೂರ್ಯಮೆಂಬಿಂತಿವಂತುಂ ಪಡೆದಂ ಚೆಲ್ವಿಂದೆ ವೀಸೋತ್ತರವಿದಿತಧರಾಧೇವನಿಪ್ಪಪ್ರಭಾವಂ (ಎಇ. XIII, ೩೩೦-೦೩; 929); ಅವಱ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನೆಗಳ್ಗೆದು ನಿಱಿಸಿದ ನಡೆಮಾಡಸಾಲೆಗಳಿಂದು (ಶಾಂತಿಪು. ೧೧-೧೧೭೭); ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪರ್ವಿಡಿ ವೇರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್ (ಮಲ್ಲಿಪು. ೫-೭೭); ತನತು ವಿಚಿತ್ರ ಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮಂ ತನತು ಸುರರಮ್ಯಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮಂ . . . ಇಂತು ಕನಸು ಪದಿನಾಱು ಮನಂಬುಜವದನೆ ಕಂಡಳ್ (ಪುಷ್ಪಪು. ೯-೧೦೧೦); ನಡೆಮಾಡದೊಳಗಿರ್ದ ರಾತ್ರಿಂಚರನೋಡಿ ಮುಡಿದು ತಂತಮ್ಮ ಬಿಲ್ಲನೆಚ್ಚೆದೆ ಗರ್ಜಿಸುತೆ (ಶೀಪರಾ. ೧೪-೩೪); ಪಡೆವಳರೆಲ್ಲರ್ . . . ನಡೆಮಾಡಮನಡರ್ದು ಹಯಮನುಯ್ವ ಮಾರ್ಗಿಗನಂ ತಱುಬಿ ಅಱಿಪಡೆಯಂ ಬಱಿಕೆಯ್ವ ಪವಣರಾಯನ ಕಟ್ಟಾಣತಿಯಂ ಪಾಱುತಿರ್ಪುದು (ರಾಮಾಶ್ವ. ೧೧೧-೧೭); ಆಕಾಶದೊಳಗಿಂದ ಅಥವಾ ಹವೆಯೊಳಗಿಂದ ಹೋಗುವ ವಾಹನಕ್ಕೆ ವಿಮಾನ ಅಥವಾ ನಡೆಮಾಡೆಂದೆನ್ನುತ್ತಾರೆ (ಮುಂಬಯಿ. ೫-೯೨). [ ನಡೆ$_1$ + ಮಾಡ$_2$ ]

**ನಡೆಮುಡಿ** 'ನಡಮುಡಿ' ನೋ.

**ನಡೆಯಡಿ** (ನಾ). ನಡೆಯುವ ಕಾಲು; ಚಲಿಸುವ ಪಾದ : ಕಂದರ್ಪವಂಗನೆಯು . . . ಪ್ರಳಾಪಿಸುತ ನಡೆಯಡಿಗಳಿಂದ ಬರವರಲ್ (ನವಮೋ. ೭-೫). [ ನಡೆ$_1$ + ಅಡಿ$_1$ ]

**ನಡೆಯಿಸು, ನಡಯಿಸು, ನಡಸು$_1$, ನಡಿಸು$_1$, ನಡೆಸು,** (ಕ್ರಿ). ೧. ನಡೆಯುವಂತೆ ಮಾಡು; ಚಲಿಸುವಂತೆ ಮಾಡು : ಜಯದ್ರಥನಂ

ಕೋಡಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಱಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೧ ವ) ; ಮ್ಲೇಚ್ಛಖಂಡಮಂ ಬಾಯ್ಕೇಳಿಸಿ ಚಕ್ರಪೂಜೆಗೆಯ್ದು ಕಟಕಮಂ ನಡೆಯಿಸಿ (ಚಾವುಂಪು. ೪೧) ; ನಡೆನಡೆಯೆಂದು ನಡೆಯಿಸಿದರ್, ಕೊಯ್ ಕೊಯ್. ಎಂದು ಕೊಯಿಸಿದರ್ (ಭಾಷಾಭೂ. ೨೧೭ ಉದಾ) ; ಪುರವರದ ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯುವರ (ಕುರಾಸಾಂ. ೩೭-೬೨). ೨. ಮುಂದುವರಿಸು ; ಮುಂದೆ ಸಾಗಿಸು ; ಸಾಗಿಸಿಕೊಂಡು ಹೋಗು : ನೆಗಟ್ದೀ ಕ್ರಿಯಾವಿಶೇಷಂಗಳನಿಲ್ಲಿಂದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೧೫-೧೬ವ); ಇದನ್ ತಪ್ಪದೆ ನಡೆಯಿಸಿದಾತವ್ ಸಾಸಿರವ್ ಕವಿಲೆಯ ಕೋಡುವ್ . . . ಸಹಶ್ರ(ಸ್ರ)ಭೋಜನವ್ ಮಾಡಿದ ಫಲವ್ ಅಕ್ಕುಂ (ಇಅ. XII, ೨೫೭-೧೬ ; 951) ; ಇದು ಕಯ್ಕೊಂಡು ನಡೆಯಿಸಿದಾತಂಗೆ ಅನಂತ ಪುಣ್ಯ (ಎಕ. IV, ನಾಗಮಂ. ೫೧-೨೪ ; 972) ; ಇನ್ತೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಗ್ಘ್ಯತೀರ್ತ್ಥಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ . . . ಕೊಟ್ಟ ಫಲವಕ್ಕು (ಸಾಇಇ. XI-I, ೪೭-೧೯ ; 994). ೩. ಹೋಗುವಂತೆ ಮಾಡು; ಕಳಿಸು: ಅಡಿವಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜರ್ ಸಡೆಯ ಹಯಾದಿಗಳಿಂದಂ ನಡೆಯಿಸಿದು ಕಲಿಸಿ ವಾಹನಾರೋಹಣಮಂ (ಪಂರಾಮಾ. ೧-೭೬). ೪. (ರಥ ಮೊದಲಾದುವನ್ನು) ಚೋದಿಸು ; ಹೊಡೆ : ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ (ಜಗವಿ. ೪-೪೧ವ). ೫. ಆಚರಿಸು ; ನಿರ್ವಹಿಸು ; ಜರುಗಿಸು ; ಮಾಡು : ಅವರಿಬ್ಬರೂ ನಡೆಯಿಸಿದ ಜೀವನದ ಅದ್ಭುತರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ (ನನಲ್ಲ. ೬ ಕವಿಪರಿಚಯ). ೬. ಈಡೇರಿಸು ; ನೆರವೇರಿಸು ; ಪಾಲಿಸು: ಚಕ್ರವರ್ತಿಯೇ ತಮ್ಮ ಅಪ್ಪಣೆಯನ್ನು ನಡೆಯಿಸಿರುವೆನು (ಮಣಿಸ. ೫೬) ; ದಂದುಗದ ಬಿಡುಗಡೆಗೆ ಮನೆಯೊಡವೆಗಳ ತೆತ್ತು ಪೊಂದಿದೊಸಗೆಯ ನಡೆಯಿಪುದು ಕೊರಗನೆಣಿಕೆ (ಕಾಲೂರ. ೦೬೯-೩೭೬). ೭. ಪಾಲನೆ ಮಾಡು ; ರಕ್ಷಿಸು ; ಕಾಪಾಡು : ಎಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದು ಸೆಱಗೊಡ್ಡಿ ಬೇಡಿದೆಂ (ಚಂದ್ರಪು. ೭-೮೬). ೮. (ಆಸಕ್ತಿ ಮುಂತಾದುವನ್ನು) ಉಂಟುಮಾಡು ; ಒದಗಿಸು ; ದೊರಕುವಂತೆ ಮಾಡು : ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ (ಆದಿಪು. ೫-೩೨) ; ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸಂಪಗೆಯ ಮುಗುಳ ನಾವೆಯಂತೊಪ್ಪುವ ನಾಸಿಕದ . . ರೂಪುಸೌಂದರ್ಯದಿಂ (ಬಸರ. ೨-೨೬). **ನಡಯಿಸು** : ೧. ಮುಂದಕೆ ನಡಯಿಸಿ ಪುಲಿಮೊಗವಿಕ್ಕುವ ಬಂದರ ಕೂಡೆ ದೂರದೊಳು ನಿಂದಿಱಿದಾಡುವ ಬಲುಭದ್ರುವೆಸಗುವರಿಂದ ಕಣ್ಗೆಸೆದುದಾ ದುರ್ಗ (ಕುರಾಸಾಂ. ೩೭-೬೩). ೨. ಧರ್ಮ್ಮಂಗಳಂ ನಮಸ್ಕಂ ನಡಯಿಸಿ ಬಱಿಯುಮೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೫೯-೧೦೯ ; 974). ೯. ವ್ಯವಹರಿಸುವಂತೆ ಮಾಡು ; ವರ್ತಿಸುವಂತೆ ಮಾಡು. ೧, ೯ : ದೇವನಂ ತನಗೆ ಕುಂಟಣಿಮಾಡಿ ನಡಯಿಸುವ ತೆಱನೀ ತೆಱನೆಂಬುದಂ ತೋಱುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ (ನಂಬಿರ. ೨-೭). **ನಡಸು**₁ : ೧. ಛೈತ್ರಮನೇಱಿಸಿ ನಡಸೆ ಕೆಲವು ದಿನಕ್ಕೆ ತಿಳಕದ್ವೀಪಮನೆಯ್ದಿ (ಪುಣ್ಯಾಸ್ರ. ೮-೮ವ) ; ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಕುವ ಸುತ್ತಲೊತ್ತುವ ತಡೆವ ನಡಸುವ ಸೆಳೆವ ತಿರುಹುವ ಹದಿರ ಜೋಕೆಯಲಿ ಗಡಣಿಸಿದನು (ಕುವ್ಯಾದ್ರೋ. ೩-೧೧); ಮೊಗಕೆ ಮುತ್ತುಗದೆಲೆಯ ಮಱೆವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯) ; ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡಸೆನ್ನನು (ಇಂಗೀತ. ೯೭-೨). ೨. ಧರ್ಮ್ಮವಱವವರೆಲ್ಲರು ಪೊಡೆಯರಾಗಿ ಪರಿರಕ್ಷೆಗೆಯ್ದು ಸ್ವಧರ್ಮ್ಮದಿವ್ ನಡಸುವುದು (ಇಅ. XVIII, ೩೯-೨೬ ; 999) ; ಇದವ್ ನಡಸಿದರ್ಗ್ಗೆ ಅನನ್ತಪುಣ್ಯ[ಂ] (ಇಅ. XII, ೨೨೫-೦೭ ; ಸು.12ನೆಯ ಶತ) ; ಆಚಂದ್ರಾರ್ಕ್ಕ ನಿತ್ಯಪಡಿ ೩ ಯಮಾನ ಹಲ ನಡಸುವುದು (ಎಕ. II, ೨೪೪-೨೫ ; ಸು.1274) ; ಶಿವಾರ್ಪಿತವಾಗಿ ನಡಸುವ ಅಗ್ರಹಾರದ ಧರ್ಮಕೆ ಉತ್ತಾರವ ಮಾಡಿಸಿಕೊಟ್ಟ ಕಾಶೀನಾಥಪುರದ ಗ್ರಾಮಕ್ಕೆ ಶಿಲಾಸ್ಥಾಪಿತ ಮಾಡಿಸಿ ಅದೆ (ಎಕ. VII, ಶಿವಮೊ. ೧೮-೧೦ ; 1714). ೫. ಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ ನೀನಾ ಮುನೀಂದ್ರನ ಬರಸಿ ಕ್ರತುವನು ನಡಸಿದರೆ ಸುತರಹರು ನಿನಗೆಂದ (ತೊರರಾ. ೧-೫-೫೯) ; ಎಮ್ಮ ಲಿಂಗವು ಕೊಟ್ಟ ಕಾಯಕವ ನಡುಸುತಿಹೆವಂತಾಗಿಯುಂ ಭವಿಯೊಡನೆ ಮಾತಾಡೆವು (ಬಸಪು. ೪೦-೩೭) ; ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೇ ? (ಆಶ್ರಮ. ೧೨) : ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡುವ ಪ್ರಜ್ಞೆ ಇತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ (ದ್ರಾವಿವಿ. ೧೧ ಹಿನ್ನಲೆ). ೬. ಫಡಫಡರ್ಜುನ ಹೋಗುಹೋಗೆಳವಡದು ಸೈಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುವ್ಯಾದ್ರೋ. ೧೪-೩೧). ೯. ದುರ್ಜನಸ್ವಭಾವಮಂ ಕೂಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು (ಪಂಚತಂ. ೧೦೫-೧) ; ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ (ಸರ್ವವ. ೮೬-೪೮೦). ೧೦., ಪ್ರಯೋಗಿಸು ; ಬಳಸು ; ಉಪಯೋಗಿಸು : ಮಡದಿ ಪಕ್ಷದಿಯರಿಯದಲೆ ಮದದೊಡಗಿ ಕಾಣನು ಇನ್ನು ಬುದ್ಧಿಯ ನಡಸು ಸ್ವಾಮಿದ್ರೋಹಿ ಬಸವನೆಯೆಂದನಾ ಮಂತ್ರಿ (ಬಿಜ್ಜಪು. ೬೩-೫೮). ೧೧. ರೂಪಿಸು ; ಹೊಂದಿಸು ; ಸಾಧಿಸು ; ಅಳವಡಿಸು ; ಸಿದ್ಧಪಡಿಸು: ಋಕಾರಾಂತಗಳಾದ 'ಕರ್ತೃ' ಮೊದಲಾದುವನ್ನು 'ಗುರು' ಎಂಬುದರಂತೆ ನಡಸಬಹುದು (ಮಧ್ಯಮ. ೬೮) **ನಡಿಸು**₁ : ೬. ಯಿನ್ನು ತಂನ ಮಾತು ನಡಿಸಬೇಕು (ಎಕ. VII, ಶಿವಮೊ. ೧೦೮-೨೫ ; 1558). ೯. ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚೆಲುವರೆಱೆಯನ ಮೇರೆಯಱಿತು ನಡಿಸೆಂದಾಗ ಸಖಿಯುಪಚಾರವ ಪೇಳ್ದಳಂಗನೆಗೆ (ಕಂನವಿ. ೧೦-೫೬). **ನಡೆಸು** : ೧. ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸಪ. ೨೬೫) : ಪೊಡವಿಯಲಿ ಕೈಗೊಟ್ಟು ಭೋಗಂ ನಡೆಸಲಡಿಯಿಡ ಕಲಿತೆನು (ಬಸಪು. ೨೫-೮) ; ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಹಿಡಿಸುವ ಹಲ್ಲಿಲ್ಲದೆ ಮೆಲಿಸುವ (ಪುರಂದ. ೩-೧೧೯-೧) ; ದಿವಿಜರು ಪೆತ್ತ ರತ್ನವಿಮಾನಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮) ; ಪೊಡೆಸು ಭೇರಿಯ ನಿಂದೆ ನಡೆಸು ಮತ್ಸೈನ್ಯಮಂ (ಚಬಪು. ೪೭-೨೨) ; ಆ ಕುದುರೆ . . . ಲೋಕಮಂ ತಣಿಸುತ್ತೆತರಲಖಿಳದೆಸೆಯೊಳದನಾಕೆವಾಳರ್ತಡೆಯ ಬಿಡಿಸಬೇಕನಿಬರಿಂ ನೂಕದೊಡೆ ಕರ್ತೃ ತಾನಾದೊಡಂ ಪೋಗಿ ನಡೆಸುವುದು ಬಳಿಕಾ ಹಯವನು (ಜೈಮಿಭಾ. ೨-೨೯). ೨. ಈ ಧರ್ಮವ[ಂ] ನಡೆಸಿದವರಿಗಕ್ಷೆ(ಕ್ಷ)ಯಪುಣ್ಯ[ಂ] (ಇಅ. XII, ೨೨೫-೧೯ ; ಸು. 11ನೆಯ ಶತ) ; ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೫) ; ವೊಡೆಯರು ನಡಸಿ ××× ನಡೆಸುವ ಯೆಂಣೆ ವರುಶ ೧ ಕಂ ಹಾನೆ ೨ ಡನೂ ನಡೆಸುವಂತಾಗಿ (ಸಾಇಇ. IX-ii, ೪೦೫-೧೧ ; 1357) ; ಅಲ್ಲಿ ಇಂಗ್ಲಿಷ್‌ನಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಿದವರೂ ಕೂಡ ಮಾತೃಭಾಷೆಯಲ್ಲಿ ಸಂಭಾಷಣೆಯನ್ನು ನಡೆಸುತ್ತಿದ್ದುದನು

ನೋಡಿದೆ (ಚೆಂಗಾಳ್ವ. ೨ ಮುನ್ನುಡಿ). ೫. ಸಕಳಮುಂ ಕೌತುಕದಿ ನಡೆಸುತ ಸಕಳದೊಳು ನಡೆಯುದ ಸುಜಾಣನು ಸಕಳವಳಿಯಲು ಸಕಳದೊಳು ತಾನಳಿಯದಿಹ ನಿತ್ಯ (ಬಸಪು. ೫೧-೪೪); ತೊಡಿಗೆಯಿಂದಿರ್ವರು ದೇವಪೂಜೆಯ ಮಾಡಿ ನಡೆಸಿದರಾಗಮೋಕ್ತಿಯಲಿ (ಮೋಹತ. ೩೧-೪); ದೇವರನ್ನು ಮೂಲ ದೇವರ ಗುಡಿಯ ಮುಂದೆ ಬಿಳೀಬಟ್ಟೆಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡೆಸುತ್ತಾರೆ (ನನ್ನೂರು. ೫೧). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸಪು. ೩೭-೨೬); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲೆಬಾಗಿ ನಡೆಸುವುದು (ಚೆಂಗಾಳ್ವ. ೪೭). ೭. ಸಟೆಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡೆಸಯ್ಯಾ (ಬಸವ. ೬೧); ನಿಮ್ಮ ನೆಂದೂ ಅಗಲದಂತೆಮಾಡಿ ನಡೆಸಯ್ಯ (ಮಹಾದೇ. ಬ. ೧೫-೧೯); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ತೆವಿರ್ ದೇವಕೀ ದೇವಿಯರ್ (ಜಗವಿ. ೧೨-೧೧೬); ಅರಸೊಲಿದು ನಡೆಸಿದರೆ ಸಿರಿಯಕ್ಕು ಜಸವಕ್ಕು ಕರಿತುರಗ ಬಲವು ಪಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೬೩೨). ೮. ಘಡ ತೊಲಗು ಕೌರವಕೃತಾಂತನ ಪಡೆಗೆ ಪಾರಣೆ ಯಿೂಗಳೀಗಳೆ ನಡೆಸುವೆನು (ಕುಮಾದ್ರೋ. ಪರಿ. ೨೮೮). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರೆ ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್ (ಕಾದಂಪೂ. ೫೫೩); ಇನಿತುಂ ಮೋಹಂ ಕೇಳೀತನಮೇಲಿಂ ಪಿರಿದುಮೆನ್ನೊಳುಂಟಪ್ಪುದಱಿಂದನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). ೧೨. ಅಟ್ಟು ; ತಳ್ಳು : ಪೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾಆ. ೮-೮). P ಈ ಧಾತು ಅನೇಕ ಕಡೆ ನಾಮ ಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥ ಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸಂ', 'ಶಾಲೆ ನಡೆಸು' ಇತ್ಯಾದಿ.

ನಡೆಸಿಕೊಡು, ನಡಸಿಕೊಡು = ೧. ಮಾಡಿಕೊಡು ; ಮಾಡು : ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಭಾ. ೪). ೨. ಪಾಲಿಸು ; ಈಡೇರಿಸು : ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡಸಿಕೊಡಬೇಕು (ವಚಭಾ. ೬). [ ನಡೆ$_1$ + – ಇಸು$_3$ ]

**ನಡೆಯುಡುಗು** (ಕ್ರಿ). ನಡೆಯಲಾರದಾಗು ; ಚಲನೆ ಇಲ್ಲದಂತಾಗು : ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಱೊಂದೆಸೆಯ ಕಡೆಯೊಳಳಿವಂತಾದುದೀಗ (ಹಚಕಾ. ೩-೭೪) ; ಭಕ್ತಿ ಚಿತ್ತಮನೋವೆ ಕಂಪಿಸುತೆ ನಡೆಯುಡುಗೆ ಮಾನವಕ್ಕಱಿಂ ಕರಗೆ (ಬಸರ. ೩-೧೧೧) ; ನಡೆನಡೆದು ಕಡೆಕಡೆಗೆ ನುಡಿಯುಡಗೆ ನಡೆಯುಡುಗೆ (ಕಾಲೂರ. ೧೫೧-೩೩೧). [ ನಡೆ$_2$ + ಉಡುಗು$_1$ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸು: ನಡೆಯೂಡೆ ಮದ್ದು ವಿಷವೂಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪುಣ್ಯವುಂಟುಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹಚಕಾ. ೧೦-೩೫). [ ನಡೆ$_3$ + ಊಡು$_1$ ]

**ನಡೆಲಿಂಗ** (ನಾ). [ವೀಶೈ] ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ : ಬಡವರೆಂದನಬೇಡಾ ಲಾಂಛನಧಾರಿಯನು ಕಂಡು ಸ್ನೇಹ ದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ಮಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ$_1$ + ಲಿಂಗ ]

**ನಡೆವಕ್ಕಿ** (ನಾ). (ಚಿತ್ತಾಕರ್ಷಕವಾಗಿ) ನಡೆಯುವ ಹಕ್ಕಿ : (ಮನೋಹರವಾಗಿ) ಚಲಿಸುವ ಪಕ್ಷಿ ; ಹಂಸ : ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪಸತಿಯಾ (ಜಯಕಾ. ೨-೧೮) ; ನಡೆವಕ್ಕಿ ನುಡಿವಕ್ಕಿ ... ಗಱಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುರಾಸಾಂ. ೨-೩೧); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವನತ್ವವನೈದಿ ಜೀವಿಪುವು ಭಯವಸುಳಿದು (ಪ್ರಭುಪು. ೩-೧೪). 'ನುಡಿವಕ್ಕಿ' ಪರಾ. [ ನಡೆ$_1$ + ಹಕ್ಕಿ$_1$ (<ಪಕ್ಕಿ$_1$) ]

**ನಡೆವಡು** (ಕ್ರಿ). ಹೋಗು ; ಚಲಿಸು ; ಗಮಿಸು : ತಾಂ ತನಗೆ ಹಯಂ ತಡೆವಿಟ್ಟ ಪಾಮೆಂತಂತು ನಡೆವಟ್ಟು ತನ್ನಿಚ್ಛೆಯಿಂ ಪೋಗೆ (ರಾಮಾಶ್ವ. ೧೩೮-೧೩). [ ನಡೆ$_2$ + ಪಡು$_1$ ]

**ನಡೆವಣಿಗ** (ನಾ). ಪಾದಚಾರಿ ; ಕಾಲಾಳು : ನಡೆವಣಿಗ ಘೋಳಾಯ್ಲ ಸೂಳಾಯ್ತಡಪವಳ ಬಳಿಗಾಱ ಕಮ್ಮಱ ನುಡಿಗ ಕುಂಬಱ ಕಂಚುಗಾಱರ ಕೇರಿ ಮೆಱೆದಿಹವು (ಸಾಳ್ವಭಾ. ೨-೮). [ ನಡೆ$_1$ + – ವಣಿಗ ]

**ನಡೆವಲೆ** (ನಾ). ಒಂದು ಬಗೆಯ ಬಲೆ : ಇಡುವಲೆ ಸಿಡಿವಲೆ ಕಿಱುವಲೆ ನಡೆವಲೆ . . . ಬಿಡುಂವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ (ಶಬಶಂ. ೩-೨೪). [ ನಡೆ ? + ಬಲೆ$_1$ ]

**ನಡೆವಳಿ$_1$, ನಡವಣೆ, ನಡವಳಿ, ನಡಾವಳಿ** (ನಾ). ೧. ನಡೆಯುವಿಕೆ ; ನಡಿಗೆ : ನಡೆವಳಿಗಳಿಂದೆ ಪೊಡವಿಯನು ಸಗ್ಗಿಪ ಹಸ್ತಿಗಡಣ (ನವಮೋ. ೩೧-೨೬). ೨. ನಡವಳಿಕೆ ; ವ್ಯವಹಾರ ; ನಡತೆ ; ವರ್ತನೆ : ಬಿಕ್ಕೆಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯೆತ್ತೆತ್ತ ಯುವತಿ ಜನದನುರಾಗಂ (ಕಾದಂಪೂ. ೮೧೮) ; ಪಱಿಯಂ ಕೇಳ್ದನೊ ಮೇಣ್ನಡೆವ ಟ[ಳಿ]ಯಂ ತಪ್ಪಿದನೊ ಕಾಣೆ ಕಣ್ಣಿಂದಂ ಕೂರ್ತಟಲ್ದಿವರಂ ಬಗೆದನೊ ಪಚ್ಚಱಿದನೊ ಪೇಱ್ಕೂಡಿ ನಿನ್ನೊಳಂಗಾಧಿಪತೀ (ಗದಾಯು. ೫-೧೪); P ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು ; ಹಗಲಿರುಳು ಉದಯ ಬೈಗುಗಳು ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿವುವು (ಪಂಚತಂ. ೧೭೨-೧೧) ; ಪರವಧುಗಳಿಪುವುದು ಮಿಹಂ ಪರವಱಿಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಪಂರಾಮಾ. ೯-೧೪೫) ; ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೧-೨೯) ; ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ (ಕುಮಾಭೀ. ೧-೪೧) ; ನಡೆವಳಿಯ ನೋಡಿದಿರ ಲೋಗರ ಮಡದಿಯರು ತನ್ನವರು ಠಕ್ಕಿನ ಕಡಲು ಕೃಷ್ಣನ ನಂಬಲಿಹಪರವಿಲ್ಲ (ಕುಮಾದ್ರೋ. ೧೪-೧೮) ; ನುಡಿಗೆ ನಾಚಿದನರಸ ಹಂಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨-೨೧). ೩. ಸಂಪ್ರದಾಯ ; ಪದ್ಧತಿ ; ರೂಢಿ : ಪಿರಿಯರೆಲ್ಲರ್ನಡೆದ ನಡೆ[ಪಾಠಾ. ಡ]ವಳಿಯನೊಲ್ಲೆನೆಂಬುದು ಬಲ್ಲತನಮಲ್ತು (ವೃಷವಿ. ೩-೫೨೪.) ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, – ಕಾರ್ಯಕ್ರಮ ಮತ್ತು ಅದರ ವರದಿ : "ಕಾರ್ಯ ; ವರ್ತನೆ ; ನಡೆವಳಿ" (Proceeding. ಇಂಕನಿ). **ನಡವಣೆ :** ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವು ಕೆಡದವೊಲು ರಕ್ಷಿಸಿದೆ (ತಿಮ್ಮಆ. ೧-೬೪). **ನಡವಳಿ :** ೨. ಅವರವರ ದಯ್ವದಂದಮನವರ ವರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುವಡವೆ ದೂಷಿಸಿದಪುವಿನ್ನವರನ್ನರ್ಮಡಿಯೆ ಮುಳಿವರಾ ಸಮಯದವರ್ (ಸಮಪ ೮-೨೧೭) ; ಅಳವಟ್ಟ ಪಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಪು . . . ಮನಂಗೊಳ್ವುತಿರೆ ಪಲಕಾಲಮರಸುಗೆಯ್ಯುತ್ತಿರ್ದ್ಯ (ವರ್ಧಪು. ೧೧-೬೯) ; ಕುಲವಧುವಿನ ನಡವಳಿಯೊಳ್ ಕುಲಮುಮ್ ಚಲಮುಮ್ ಪತಿಬ್ರತಾಗುಣದಿಂದಂ ನೆಲಸಿಕ್ಕುಮ್ (ಸೌಇಇ. XX, ೨೪೮-೪೯ ; 1228) ; ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸೈರಣೆಯನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧-೩-೨೬). **ನಡಾವಳಿ :** ೨. ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯ (ಸಿದ್ಧವ. ೪. ೨೭೧-೮೫೭) : ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿವೆ (ಪರಿಣೀ. ೪೫) : ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ಮಲೆಯ ನಡಾವಳಿ (ತೀವೋಡ. ೧೦೮) ; ಅವರಿಗೆ ಒಳ್ಳೇ ನಡಾವಳಿಯ ಬಯಕೆಯೂ ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಮುಂಬಯಿ. ೫-೪೫) ; ಕ್ರಮಬದ್ಧಜೀವನವೂ ನೀತಿ ನಡಾವಳಿಗಳೂ ಮೊಳೆಯುವಂತೆ ಪ್ರೋತ್ಸಾಹಿಸಿದರು (ಕಪವು. ೬-೧೩೦); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಭಾಗ. ೫೪) ; ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ಮಾಳಿಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೪-೧೦೫). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಡಕ್ಕೆಬಲಿ, ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).

[ ನಡೆ₁ + – ವಳ್ಳಿ₁. / ತಮಿ. ನಟವಟ, ನಟ್ಪಿಪಟ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳ್ಳಿ₂** (ನಾ). ನಡೆಮಡಿ ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯೆನೆ ಕುಳಿರಗಸ ನಡೆವಳಿಯ ಹಿಗ್ಗಿನಿಂ ಬಿಡಿಸುವನು ತೊಳೆದೆಡೆಯ ಕೊಳೆಯಂ (ಕಾಲೂರ. ೬೪-೧೩೪) : "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಲೂರ. ಅಡಿಟಿ).

[ ನಡೆ₁ + ವಳ್ಳಿ₆ (<ವಟ್ಟಿ₆) ]

**ನಡೆವಳಿಕಾರ** 'ನಡೆವಳಿಕಾಱ' ನೋ.

**ನಡೆವಳಿಕಾರತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? ಓಲಗದ ನಡೆವಳಿಕಾರತನವಿದು (ಬಟ್ಟಅ.೩೪-೧೬).

[ ನಡೆವಳಿಕಾರ (<ನಡೆವಳಿಕಾಱ) + – ತನ ]

(ನಾ). ನಡವಳಿಕೆಯನ್ನು ತಿಳಿದವಳು ; ಆಚಾರ ವಿಚಾರಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಕ್ಕ. ೨೪೬).

[ ನಡೆವಳಿಕಾರ (<ನಡೆವಳಿಕಾಱ) + – ತಿ₁ (< – ಇತ್ತಿ) ]

**ನಡೆವಳಿಕಾಱ, ನಡವಳಿಕಾರ, ನಡವಳಿಕಾಱ, ನಡೆವಳಿಕಾರ** (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಱಿಕ್ಕೆ-ನಡೆವಳಿಕಾಱಂ, ನುಡಿವಳಿಕಾಱಂ . . . ಪಗೆಕಾಱಂ, ಬಗೆಕಾಱಂ (ಶಮದ. ೧೯೯ ಪ್ರಯೋ). ನಡವಳಿಕಾರ : ೧. "ನರನ್, ನರ್ತಾ, ನ್ನಃ, ನರಃ, ಈ ೪ ನಡವಳಿಕಾರಂ" (ಕಾಶಕ್ಕ. ೨೪೬). ನಡವಳಿಕಾಱ : ೨. (ದೇವಸ್ಥಾನ, ಮನೆ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು : ಪೂಜಾರಿಗ ಪರಿಚಾರಕರೊಳಗಾದ ನಡವಳಿಕಾಱರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಪ್ಯಾಆರಿ. ೧೯೩೨, ೪೬-೩೫ ; 1181) ; ರಾಜಾರ್ತ್ಥವನೂ ತೀಱಿಸಿಕೊಡುವರು ನಡವಳಿಕಾಱ ಪ್ರಭುಗಳು (ಸೌಇಇ. IX-ii, ೪೩೩-೬೩ ; 1408) ; ತಿಂಮಣರಾಯರ ಮನೆಯ ನಡವಳಿಕಾಱಂ ಹೊಂನಪ್ಪನಾಯಕರು (ಪ್ಯಾಆರಿ. ೧೯೩೫, ೨೩-೨ ; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ" (ಕಾಶಕ್ಕ. ೬೩).

[ ನಡೆವಳ್ಳಿ₁ + – ಕಾಱ ]

**ನಡೆವಳಿಕೆ, ನಡವಳಿಕೆ, ನಡಾವಳಿಕೆ** (ನಾ). ೧. ನಡತೆ; ನಡೆನುಡಿ ; ಆಚಾರ, ವ್ಯವಹಾರ ; ವರ್ತನೆ: ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೨) : ಅಂದೆ ನೆಲವು ಪಡೆದೀತು ಅಮರಜೀವಂತಶಾಂತಿಯನ್ನು ಎಂದು ಸಾದ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೮೫-೨) ; ನಡೆವಳಿಕೆಗಳು ಮತ್ತೂ ಉತ್ತಮಗೊಂಡು (ಮುನಿಮಾ. ೬೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆಗೆ ಬಂದಿರುವ ಆಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೧). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ,-ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ೩೦೫೧). ನಡವಳಿಕೆ : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುರುಕು. ೩೭) ; ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪುಮಾಡುತ್ತವೆ (ಶಾಲಿಮ. ೧೯೩) ; ಅರ್ಥವಾಗದ ನಡವಳಿಕೆಯ ಠಕ್ಕೆ (ವಾತ್ಸಲ್ಯ. ೪೮) ; ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೮). ೩. ನಡವಳಿಕೆಗಳು (Proceedings. ಪತ್ರಿನಿ. ೬೪). ನಡಾವಳಿಕೆ : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ರೂಢಿ).

[ ನಡೆವಳ್ಳಿ₁ + – ಕೆ./ತಮಿ.ನಟವಟಿಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,-ಮೇಲ್ವಿಚಾರಣೆ ನಡೆಸುವವನು ; ಪಾರುಪತ್ಯಗಾರ : ಪಡೆವಳ್ಳರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ಮೊತ್ತಂ ಕಣ್ಗೊಪ್ಪಿದುದಾವುದಯದೊಳು (ಜಯಚಾ. ೧೨-೧೩). [ ನಡೆವಳ್ಳಿ₁ + – ಗ₂ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಮಯುಗಿರದು (ಗಗತಾ. ೧೬-೪೬). [ ನಡೆವಳ್ಳಿ₁ + ತಪ್ಪು₂ ]

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸವ. ೧೫೭) ; ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚರ. ೪೩-೧೭೦) ; ಕೇಳು ನಡೆವೆಣನೇ ವಂದ್ರುನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೪೩) ; ತೊಡೆಯನೇಱಲು ಬಂದ ಮಗನನು ಮಡದಿ ಪಾತಕಿ ಬೈದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದೆನು ಕಾಣದವನಂತೆ ನಡೆವೆಣನನಿನ್ನೇನ ಕೇಳುವೆ (ನಿಭಾಗ. ೪-೭-೩೦) ; ಸತ್ತೆಡೆ ಯಾಡುವ ನಡೆವೆಣನೊಲು ಕೈಹೊತ್ತುಕೊಂಡಿದೆ ತೆರಳಿದನು (ಮೋಹತ. ೯-೩೦) ; ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹದಿಬ. ೫-೧೭). 'ನುಡಿವೆಣ' ಪರಾ. [ ನಡೆ₁ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದು ; ಚಲನೆಯನ್ನು ಪಡೆ : ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ ! ಜಗದೆ ನೀವೆ ಬಲ್ಲುಳ್ಳರ್ ! ಅಂ ನಡೆವೆತ್ತ ಸೀರ್ಪುಟಿಗಳಾಗಿವೆ ! (ರಾಮಾಶ್ವ. ೧೫೪-೩೦).

[ ನಡೆ₂ + ಪೆಱು₁ ]

**ನಡೆಸರ** 'ನಡೆಸಾರ' ನೋ.

**ನಡೆಸಾರ, ನಡೆಸರ** (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವುಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಆಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ರಿದ್ದವು (ಕರ್ಣಾಜ. ೫೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು ನಡೆಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧-೮೩) ; ನಡೆಸಾರಂ ನೆಲವಾಳಿಗೆ ಪೆಡಕೆಡಪುವ ಡೆಗ್ಗೆ ಬದ್ದಿರಂಗಳಿನಾರ್ದಂದೆಡೆಗುಡದಧಟಂ ಕೋಂಟೆಯುನಡದರ್ದ ರಿಪುಭಟರನಿಕ್ಕಿದಂ ಕಲಿಕಾವಂ (ತ್ರಿಪುವಿ. ೫-೧೧). ನಡೆಸರ : ೨. ಭೈರವ ಬದ್ದರದ ನಡೆಸ [ವಾಕಾಂ. ನ]ರದ ಡಬ್ಬುಕ ಡೆಂಕಣಿ ಗಳನು ತೂಱಿದರು ನಭಕೆ (ತೊರರಾ. ೬-೧೧-೧೪). 'ನಡೆಸೇತು', 'ಸಾರವಾರಿ' ಪರಾ. [ ನಡೆ$_1$ + ಸಾರ$_1$ ]

ನಡೆಸು 'ನಡೆಯಿಸು' ನೋ.

ನಡೆಸೇತು (ನಾ). ನಡೆಯುವ ಸೇತುವೆ ; ಚಲಿಸುವ ಸೇತುವೆ : ಕೇತನಾವಳಿಯೆತ್ತೆ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪಾಯ್ದಳ ಬರೆ ಬಂದು ವಿನೀತಪುರದೊಳಾಗ ಹೊಕ್ಕ (ಭರತ. ೫೮-೩೭). 'ನಡೆಸಾರ' ಪರಾ. [ ನಡೆ$_1$ + ಸೇತು ]

ನಡೆಸೊಡರು (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ಬೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ವಚಸಂ. ೧೯೬-೪೮). [ ನಡೆ$_1$ + ಸೊಡರು (<ಸೊಡರ್) ]

ನಡೆಹ, ನಡಹ (ನಾ). ೧. ನಡೆಯುವಿಕೆ ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ–ಈ ೫ ನಡೆಹ" (ಹಲಾಯು. ೧೨೦-೪೧). ನಡಹ : ೨. ನಡೆದುಕೊಳ್ಳುವಿಕೆ ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತ್ಯಾಸಂ ವಿವೃತ್ತಿಯೆನಲೋಲಿದಂತೆ ನಡಹಮಕ್ಕುಂ (ಮಂಗರಾ. ೧೩೩-೩೦). [ ನಡೆ$_1$ + – ಹ$_2$ ]

ನಡ್ಡಿಮೂಗು (ನಾ). ಚಪ್ಪಟೆಯಾದ ಮೂಗು ; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಬ್ರಟಃ, ನತನಾಸಿಕಃ – ೪ ಕುಳಿಮೂಗಿನ ವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ←ತೆಲು. ನಡ್ಡಿಮುಕ್ಕು ]

ನಡ್ಯ (ನಾ). ಜೊಂಡು ಹುಲ್ಲಿನ ರಾಶಿ : "ನಡ್ಯಾ, ನಡಸಂಹತಿಃ – ಹೊಲ ಗದ್ದೆಗಳ ಬದುವುಗಳಲ್ಲಿಯೂ, ತೋಟದ ಸಾರಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂತಿ. ೧೩೩). [ ಸಂ. ನಡ್ಯಾ ]

ನಡ್ವಲ, ನಡ್ವಳ (ನಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆದ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ,–ಶತ್ತ್ರಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂತಿ. ೮೪). ನಡ್ವಳ : "ನಡ್ವಳಂ, ನಳಸಂಯುತಂ–ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೮-೨). [ ಸಂ. ]

ನಡ್ವಳ 'ನಡ್ವಲ' ನೋ.

ನಣ್ಕೆ (ನಾ). ನಂಟತನ ; ಬಾಂಧವ್ಯ : ಸಂಸಾರದಪಾಯಮುಮಂ ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ನಣ್ಕೆಯುಮಂ ಕಂಡಂ (ಜೀವಸಂ. ೨೬-೪೭ವ). [ <ನಣ್ಪು ? ]

ನಣ್ಪು (ನಾ). ೧. ನಂಟು ; ಬಾಂಧವ್ಯ ; ಸಂಬಂಧ : "ನಣ್ಪು ನಂಟು" (ಕರ್ಣಾನಿ. ೨೩) ; ಕುಲಜನುಮಲ್ಲಂ ನಣ್ಪನ ಬಲಮುಂ ತನಗಿಲ್ಲ ಕಣ್ಗಮೋಳಿದನಾರೊಳ್ ನೆಲಸಿರನೆಲ್ಲಿಯುಮ[ವನ]ಂ ಚಲವೆಂದುಂ ಪತ್ತುವಿಡದದೊಂದುಂಟು ಗುಣಂ (ಕವಿರಾ. ೩-೧೭೨) ; ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಱಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲ ದವರೊಡನೆ ಮದುವೆಯೊಳ್ ತೊಟ್ಟ ನಣ್ಪುಗಳಕ್ಕುಂ (ವಡ್ಡಾರಾ. ೮೭-೧೬); ಸುಯೋಧನನೆನಗೊಳ್ಳಿಕೆಯ್ದ ಕೃತವಂ ಪೆಱಗಿಕ್ಕಿ ನೆಗೞ್ತೆ ಮಹಾಸೆ ನಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇೞಿರೇ (ಪಂಪಭಾ. ೯-೭೮) : ರಾಗದಿಂದಿನ್ನಿವರ್ಗೆ ಮದುವೆಯಂ ಮಾೞ್ಪುದೆಂದಟ್ಟಿದಂ ನಿಮ್ಮನುಜನ್ಮಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದೆಮ್ಮ ವಿದ್ಯಾಧರೇಂದ್ರಂ (ಪಂರಾಮಾ. ೧೦-೧೧೪) ; ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪು ನಾಡೆ ನೋವಂ ನಿನಗುಂಟುಮಾಡೆ (ಜೀವಸಂ ೬೮-೧೨) ; ಪೆಂಪಿನ ಸೊಂಪಿನ ನಣ್ಪನಾಳ್ದ ಪೊಂಗೊಡನನಮರ್ಚಿದಂತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಕೆ ಒಡಮಱುಗಿದೆನಾನ್ ಎಮ್ಮಯ ನಣ್ಪಂದಾನ್ ಸೆಳೆಗೊಂಡೆನ್ (ಬದ್ಧಪ್ರ. ೧೭.೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜನಧರ್ಮಂ (ಆದಿಪು. ೨-೨೦); ಪಗೆಗೆ ಕಣೆಯೊಂದುಂಟೇ ನಣ್ಪಂಗಮಾಗರ ಮುಂಟೆ ನೀಂ ಬಗೆಯ ಪಗೆಯುಂ ನಣ್ಪುಂ ಕೆಯ್ಕೊಂಡ ಕಜ್ಜದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೧೩-೧೧): ಒರ್ಮೆ ಬಂದೆನಗೆ ಮಾೞ್ಪುದು ಪೆರ್ಮೆಯ ನಿಮ್ಮ ನಣ್ಪನಿಂ ಜನಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಬ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪಿನ್ನೀದಮಱದು ದೆಂಬುದು ಲೋಕಂ (ಪಂರಾಮಾ. ೧೦-೧೬೨): ಮತ್ತೊರ್ವಂ ನೀನೀಗಳಾಕೆಯ ನಣ್ಪನೇಕೆ ಮಾಣ್ದಯೆಂದಾ ಕೆಳೆಯಂಗಿಂತೆಂದಂ (ಲೀಲಾವ. ೨-೧೦೦ವ). ೩. ನಂಬಿಕೆ ; ವಿಶ್ವಾಸ : ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಚಿದೇವನಾರ್ಪಿಂ ಸದೆಯೆ ಭಕ್ತಪ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತಮಿರೆ (ವೃಷವಿ. ೧೨-೩೮ವ). ೪. ಪ್ರೀತಿ; ಅನುರಾಗ: "ನಣ್ಪನಲ್ಲಿಯುಂ ಪ್ರಸರವೆಂಬುದು" (ಹಲಾಯು. ೧೩೫-೨೪) ; ಪಾಂಡುರ ಕೀರ್ತಿಯ ನೆಗೞ್ಗಂ ಪಾಂಡುತನೂಭವರ ನಣ್ಪಂ ನೆಗೞ್ಗಮೆ ಬೞಿಯಂ (ಜಗವಿ. ೧೫-೫೩) ; ಪಡೆಯದೆ ಬರ್ಕುಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೈವ ನಣ್ಪಿಡಿದನುರಾಗದಿಂ ನಗಿಸುವಳ್ಕಱೊಳಪ್ಪುವ . . . ಅಡಿಗಡಿಗಂ ತೊದಳ್ನುಡಿಯನಾಲಿಪ ಸೈಪು ಸರೋರುಹೇಕ್ಷಣೇ (ವೃಷವಿ. ೨-೩೩) : ತಾರೇಶಂ ನಣ್ಪಂ ಮು[ಮ]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ನರಚ. ೫೨-೧೨೧). [ ನಂಟು$_1$ + – ಪು$_3$./ತಮಿ. ನಣ್ಪು; ತೆಲು. ನನ್ಪು, ನನುಪು, ನನುವು ]

ನಣ್ಪುಗೆ ? (ಕ್ರಿ). (?) : ಅನ್ನೆಗಂ ಮುಂಬಯ್ತರಿರ್ವರುಂ ಬಂದದಂ ಕಾಣದೆ ಮಾಣದೆ ತಮ್ಮೊಳೋರೊರ್ವರಂ ನಣ್ಪುಗೆ ಕಣ್ಬರಿಗೆಟ್ಟು ಇಱಿಯಱಿದು ತಮ್ಮೊಳಿರ್ವರುಮಱಿಯಮೆಯಿಂ ಬಿಟ್ಟಿರಲ್ಕೆ (ನೇಮಿಪು. ೩-೭೦ವ). [ P ಇದು 'ನಣ್ಪುಗೆಟ್ಟು' ಎಂಬುದರ ಸ್ಖಲಿತ ರೂಪವಿರ ಬಹುದು ]

ನಣ್ಪುಗೆಯ್ (ಕ್ರಿ). ಸಂಬಂಧವನ್ನುಂಟುಮಾಡು, –ಅಳವಡಿಸು : ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ನುಣ್ಪಂ ನಣ್ಪುಗೆಯ್ದಂಪನಿರ್ಕಾಳಿ ಗೊಂಡೊಟ್ಟಜೆಯಂ ನಿಮಿರ್ಚಿ . . . ಗೋವಳರಾಯಂ ಕೊಟಲೂದಿದಂ ನೆಗೞ್ವನಂ ಮಾಧುರ್ಯತೂರ್ಯಸ್ವನಂ (ಜಗವಿ. ೫-೨). [ ನಣ್ಪು + ಕೆಯ್$_1$ ]

ನಣ್ಪುನೆತ್ತರ್ (ನಾ). ನಂಟಿನ ರಕ್ತ ; ಸಂಬಂಧಿಗಳ ನೆತ್ತರು : ನೆನೆಯೆಮ್ಮ ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಗಿದು. ಓರೊರ್ವರಾ ಕಯ್ಮನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೪೭). [ ನಣ್ಪು + ನೆತ್ತರ್ ]

ನಣ್ಪುವೆಱು (ಕ್ರಿ). ವಿಶ್ವಾಸವನ್ನು ಹೊಂದು ; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ಮಿಗೆ ಕೊಟ್ಟು ನಣ್ಪುವೆತ್ತೆಸೆವನ ನೊರ್ವನಂ ಚರನನೊಲ್ದನುಯಾಯಿಯನಿತ್ತು . . . ಕಳುಪಿದಂ (ವೃಷವಿ. ೯-೫). [ ನಣ್ಪು + ಪೆಱು$_1$ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚಂಚು' ಪರಾ. ೨. ಎರಗಿದ ; ನಮಸ್ಕರಿಸಿದ ; ಮಣಿದ : ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮುಖ ಸದೃಶಾನುಭಾವನೊಲವಿಂ ಪೆತ್ತಂ (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಾನಾನಾಪ್ಸರಃಕೇಕರದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ತೊಪ್ಪಿಯ್ಕಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) : ನತನಾನಾವನಿಪಾಲಮೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುವ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚವಿಂತರಸುಗೆಯ್ಯುತ್ತಿರ್ಪಂ . . . ತತ್ಪೇಚರಾಧೀಶ್ವರಂ (ಶಾಂತೀಶ್ವ. ೭-೫) ; ನತಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೩-೫೧). ೩. ಕುಗ್ಗಿದ ; ತಗ್ಗಿದ. 'ನತನಾಸಿಕ' ಪರಾ. ೪. ಶರಣಾದ. 'ನತಜನ' ಪರಾ. (ನಾ). ೫. ಬಾಗಿದುದು ; ವಕ್ರವಾದುದು : ''ವಕ್ರಂ, ವೃಜಿನಂ, ಭಂಗುರಂ, ಅವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ವಿರ್ಮತ್–ಈ ೧೨ ಕೊಂಕಿದುದು" (ಹಲಾಯು. ೧೧೬-೧೧) : "ನತಂ, ನಮ್ರಂ, ಬಂಧುರಂ–ಈ ೩ ಎಱಗಿರ್ದುದು" (ಹಲಾಯು. ೧೨೫-೭೫) ; "ನಮ್ರಮೆನೆ ನತಮೆನಲ್ಕೆಱಗುವುದು" (ಮಂಗರಾ. ೦೩೪-೩೨). ೬. ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದಂ (ನೇಮಿಪು. ೧೧-೨೩) ; ನತನಾದನಲ್ತೆ ಕಾಣಾತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) : ಬೇಡಿದುದನಿತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನಂದು (ನಂಬಿರ. ೭-೧೪೬); ಮಂದರಗಿರಿ ಧೈರ್ಯನೆಂದೆನಿಪ ಪ್ರಭೇಂದುಮುನಿಪಗೆ ನತನಹೆನೂ (ಧನ್ಯಜ. ೮): ಹರುಷದಿಂ ಮುಳುಗೆ ಗರ್ಭಂ ಜಾಱೆ ಪುರುಷತ್ವ ತ್ವರಿತದಿಂದ ವರನಾವರಿಸೆ ಸುರಜಾಲತ್ರ್ಯಂಬಕೆ ನತರಾದರು (ಏಕೋಪು. ೧೩-೫೭). ೭. ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ಇಂಕನಿ).
[ ನತ + ಕೋನ (<ಕೋಣ್ ) ]

**ನತಚಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳುದು: ಕುಡಿದಳಿರನುಗುರ ಮೊನೆಯೊಳ್ ಪಿಡಿದುದು ನತಚಂಚು ನೀಡಿ ಗಳಕಂದಳಮಂ ಮಡಗೆದಱೆ ನವಾಮ್ರದ ಪೂಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು$_2$ ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರತಿಮನೆನಿಪ್ಪಭವಸುತನೆ ಚಿತ್ತೈಸು (ತ್ರಿಪುವಿ. ೩೨-೪೬) : ನತಜನವರದಂ ಶ್ರುತಿನುತಶುಭಗಂ . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳ್ ನಿಂದಂ (ಹಮ್ಮಿರ. ೨-೧೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱೆಯದೆ (ಜೈಮಿಭಾ. ೧೧-೩೭). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನ ವ್ಯಕ್ತಿ; ದುರ್ದೈವಿ; ದುರದೃಷ್ಟಶಾಲಿ: ಒಟ್ಟಿನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಚಿ. ೩೩); ನನ್ನಂತಹ ನತದೃಷ್ಟಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೯೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ವಚಭಾ. ೭೭) : ನಾನು ನತದೃಷ್ಟ (ದೀಪದ. ೧೫೨).
[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).
[ ನತದೃಷ್ಟ + –ಎ$_2$ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಛಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಶೈಪು. ೪-೭-೩).
[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ–೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೭). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧನ ಕೊಲಿಸಿದನಲಾ ನತಬಂಧುವನು ನಾವಗಲಿದುಳಿವೆವದೆಂತು (ನಿಭಾಗ. ೧-೧೦-೫೨).
[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸಲ್ಪಡುವವನು,–ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿನಿಧಾನಂ ಧೃತಪರಶುಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಟ್ಕೆ ನಿರ್ವಿಘ್ನತೆಯಂ (ಲೋಕೋಪ. ಪೀಠಿಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ತಾಕಲಾಡಿದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).
[ ಸಂ. ನತಮುಖೀ (ನತ+ಮುಖ+–) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು ; ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲನಾದವನು : ಶ್ರೀಚಂಡಿಕಾಮುಖೇಂದುವಿಲೋಚನರುಚಿಚಂದ್ರಿಕಾಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೧೧-೧). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶ್ರೋಣಿ ಕಾಳಾಹಿವೇಣಿ (ಕರ್ನಾಕ. ೨೨೪). [ ನತ + ವಾಣಿ$_1$ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿದವನು : ನಯದಿಂದೆಳ್ದು ನತಾಸ್ಯನಾಗಿ . . . ದಿಟ್ಟವಾರಿಯ ಧೀರು ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ (ಗಿರಿಕ. ೧೦-೭೮).
[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ ; ವಕ್ರವಾಗಿರುವಿಕೆ. ೨. ನಮಸ್ಕಾರ; ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಟ್ದಿರೆ (ಶಾಂತಿಪು. ೭-೮೦) ; ನಿರ್ಮಳಮೌಕ್ತಿಕಾಕ್ಷತೋತ್ಕರಮನುಪೇಂದ್ರಪಾದದುಪಭೂಮಿಗೆ ಸೂಸಿದನುತ್ಸಹಂ ಪೊದಟ್ದಿರೆ ವನಪಾಳಕಂ ನತಿಚಳಾಳಕ[ಪಾಠಾಂ. ವಿನತಜಾಲಕ]ನುದ್ಗತರೋಮಜಾಳಕಂ (ಜಗವಿ. ೧೪-೪೩) ; ನತಿ ನುತಿಪೂಜೆಗಳಂ ಸನ್ಮತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದೆ ಸಮವಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೮೬) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸೃತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದದೊಳ್ ಮತಿವಂತಂ ಮಾಟ್ಪುದರ್ಥಿಯಿಂ ಸ್ವಾರ್ಥಪರಂ (ಉಸಾರ. ೫೧) ; ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯ ಉಪಕೃತಿಯ ಒಪ್ಪಿಸುವೆವು ಇವಗೆ (ಅರಳು. ೨೪೩-೨). ೩. "(ನಕ್ಷತ್ರ. ಮೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . ನತಕೋನ" (Depression. ಇಂಕನಿ). [ಸಂ.]

**ನತಿಗೆಯ್, ನತಿಗೈ** (ಕ್ರಿ). ನಮಸ್ಕರಿಸು ; ಪೊಡಮಡು ; ಕೈಮುಗಿ : ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮುಗುಳ್ದೆಳ್ದು ನಿಂದು ಕರಯುಗವ ಮುಗಿದು (ಕುಮಾಪು. ೨-೫೧). ನತಿಗೈ : ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲವೇಳುವಂತೆ ಪತಿಯ ರೂಪದೆ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹದಿಬ. ೩-೭).
[ ನತಿ + ಕೆಯ್$_{1}$ ]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು : ನತೆಯಾಗಿ ತತ್ಪ್ರಪಶ್ರುತ ಯುತೆಯರ ಪಕ್ಕದೊಳೆ ಪರಮನಿಷೆ ಯಿನರ್ಹನ್ಮತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತು ನೋನುತ್ತುಮಿರಲ್ (ಮಹಾನೇ. ೧೭-೧೩).
[ ಸಂ. ನತಾ ]

**ನತೋನ್ನತ** (ಗು). ಏರು ತಗ್ಗುಗಳುಳ್ಳ ; ಹಳ್ಳತಿಟ್ಟುಗಳಿಂದ ಕೂಡಿದ : ಇಳಿದೇರಿ ಮುರ ಪೊದೆಯ ಚೆಲ್ವಿನ ನತೋನ್ನತವನಾದ್ರಿಸೀಮೆಯನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೧೭-೧೮೨). 'ನಿಮ್ನೋನ್ನತ' ಪರಾ. [ ನತ + ಉನ್ನತ ]

**ನತ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು ; ಸುಮಂಗಲಿ : ನಜಭಜಜಂಲಗಂ ಬರೆ ಸುಮಂಗಲಿಯೆಂಬರದಂ ಇದಕ್ಕೆ ನತ್ಕುಟಕ ಎಂದು ಮತ್ತೊಂದು ಹೆಸರು (ಕೈಪಿಡಿ. ೮೫). 'ನರ್ಕುಟಕ' ಪರಾ. [ ? ]

**ನತ್ತ** (ನಾ). (?) : ಪೂರು ನತ್ತದ ಸುತ್ತಲೂ ಮತ್ತು ಇತರ ಕಿಷ್ಕಿಂಧವಾದ ಕುರುಮಂದೆ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಅ. ೨೪). [ ? ]

**ನತ್ತಿ** 'ನತ್ತು$_{2}$' ನೋ.

**ನತ್ತು$_{1}$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು ; ಉಗ್ಗು ; ತೊದಲು.

ನತ್ತಿ ಮಾತಾಡು = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,-ಮಾತಾಡು, ಹೇಳು" (Stammer. ಇಂಕನಿ) ; ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ ? (ಗಾದ). [ ದೇ. ‖ ಮಲ. ತೆಲು. ನತ್ತು ]

**ನತ್ತು$_{2}$, ನತ್ತಿ** (ನಾ). ಉಗ್ಗುವಿಕೆ ; ಬಿಕ್ಕುತ್ತ ಮಾತನಾಡುವಿಕೆ ; ಬಿಕ್ಕಲು : "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನಿ). ನತ್ತಿ : "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one's speech. ಇಂಕನಿ) ; ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಜ್ಞಾಪಕ. ೧೩೮) ; ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಜ್ಞಾಪಕ. ೧೪೨).
[ <ನತ್ತು$_{1}$./ತೆಲು. ನತ್ತಿ ]

**ನತ್ತು$_{3}$** (ನಾ). ಮೂಗಿನಲ್ಲಿ ಧರಿಸುವ ಆಭರಣ : ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಲೆ ಬಹುಭೂಷಣಂಗಳ ನಿಡುತ್ತೆ (ಚತುಪು. ೧-೭-೯) ; ರಜಪೂತ ಹೆಂಗಸಿನ ಮುಖ್ಯ ಕುರುಹು ಆಕೆಯ ನತ್ತು (ಕಥಾಗೆ. ೧೧೪) ; ಮುತ್ತೈದೆರೆಲ್ಲರು ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪು. ೧-೬೮) ; ಮನವು ಮುತ್ತಾಗಿಹುದು ನತ್ತಾಗಿ ಧರಿಸಿಕೋ ಸಿಂಪು ತೆರೆಯುವ ಮುನ್ನ (ಕಲಿಪ್ಪೀಲ. ೯-೭) ; ಮೊಗಕ್ಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕರಿಹಾ. ೧) ; ನತ್ತಿಗೆ ಯೋಗ್ಯಳಾದವಳು ಮುತ್ತು ಬಯಸಿದ ಹಾಗೆ (ಗಾದ).

ನತ್ತಿನೋರು = ಸೂಳೆಯರು ; ವೇಶ್ಯೆಯರು : ℙ ಕೆಲವು ಪ್ರದೇಶ ಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿ ಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿ ನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ : ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೦೯).
[ ←ಅರ. ನತ್ಥ್ : ಹಿಂ. ನತ್ಥ್, ನಥ್, ನಾಥ್ ; ಮರಾ. ನಥ್./ಪ್ರಾ. ಣತ್ಥಾ ]

**ನತ್ತು$_{4}$** (ನಾ). ೧. ಹೇನಿನ ಸಣ್ಣ ಮರಿ ; ಸಣ್ಣಹೇನು : ಸೀರು ಸಿರಘಸು ತಿಂತು ನತ್ತು ನರವನು ತಿಂತು ಚಿಂತೆಯು ಜನುಮವ ತಿಂತು (ಇಂಪಾಪ. ೧೭೧-೪೪) ; ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ ; ಹುಳು. [ ದೇ. ‖ ತಮಿ. ನತ್ತು, ನತ್ತೈ = ಶಂಖದ ಹುಳು ; ಮಲ. ನನ್ನಿ ; ತೆಲು. ನತ್ತ = ಶಂಖದ ಹುಳು ]

**ನತ್ವ** (ನಾ). ನ ಎಂಬ ಅಕ್ಷರ : ಪರದೊಳ್ ಸ್ವರವಿರೆ ಬಿಂದುಗೆ ದೊರೆ ಕೊಳ್ಗುಂ ನತ್ವಮತ್ವಂ (ಶಮದ. ೧೦೪). [ ಸಂ. ]

**ನದ** (ನಾ). ೧. ಶಬ್ದ ಮಾಡುವಿಕೆ ; ಗದ್ದಲ ಮಾಡುವಿಕೆ ; ಸಪ್ಪಳ ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ ; ಗಂಡುತೊರೆ ; ಗಂಡುನದಿ ; ℙ ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ : "ಭಿದ್ಯಃ, ಉದ್ಯಃ, ನದಃ – ಈ ೩ ಗಂಡುದೊಱೆ" (ಹಲಾಯು. ೦೦೦-೪೪) ; " ನದಮುಂದ್ಯಮೆನೆ ಭಿದ್ಯಮೆನೆ ಗಂಡುದೊಱೆಯದು "( ಮಂಗರಾ. ೧೨೨-೧೦) ; ಪುಣ್ಯನದೀನದನಗ[ಲಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಪಂಪಭಾ. ೩-೩೭) ; ಪೊಱಮಟ್ಟಿಭಂ ಬನದದಿಂ ನದದಿಂ ನದದಿಂದ್ರವಜ್ರನಿಷ್ಠುರವೆಱಗಿತ್ತಿಭಾಪಘನವಂ ಘನವಂ ಘನವಂಶ ಜಾಲವಂ (ಜಗವಿ. ೧೭-೯) ; ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದೆ . . . ರಾಗದೆಯ್ದಿದನಿರದಾ ಸುಧರ್ಮಮುನಿಪೋತ್ತಮನಾಶ್ರಮಮಂ ನೃಪೋತ್ತಮಂ (ಕುಸುಮಾ. ೪-೯೪) ; ಅಲ್ಲಿಗಲ್ಲಿಗೆ ಗವಾಸ್ಪದಗಳಿಂ ನದ ಗಳಿಂದಾ ದೇಶಮೊಪ್ಪಿದರ್ದುದು (ಚಿಬಪು. ೦೦-೪). ೩. ಸಮುದ್ರ ; ಸಾಗರ. ೪. ಮೋಡ ; ಮೇಘ.

ನದನದಿ = ಗಂಡು ಮತ್ತು ಹೆಣ್ಣು ಹೊಳೆಗಳು : ನದ[ನ] ದ್ಯುದ್ಭೂತವಾರಿಪ್ರಸರಮೆಸ[ರ] ನೀರಂದದಿಂ ಕಾಯ್ದುದಾಕಾಶದಿಶೌಘಂ . . . ಎಂಬ ವೈಶಾಖದೊಳಾ ಯೋಗೀಶ್ವರಂ ಕಲ್ಮಲೆ ನೆಲಸಿ ಹಿಮಾದ್ರೀಂದ್ರ ವಿರ್ಪಂತಿರಿರ್ದಂ (ಸುಕುಮಾ. ೪-೧೩) ; ನದನದೀಕುಳದೊಳ್ ಪರಿ ವರ್ಧಿಕುಂ ಜಗಜ್ಜೀವನಜೀವನಂ ಮುಱಿಗಳಿಂ ಮುಱಿಯುಂ ಕಱಿವಂ ಹಿತಾರ್ಥಮಿಾ ಭೂವಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರನಂ ಜನಂ (ಜಗವಿ. ೪-೭೭) ; ನದನದ್ಯೌಘಾಂಬುವಂ ಪೀರ್ದೆಳೆ ನೆಱೆಯದೆ ಬಾಯ್ಬಿಟ್ಟ ವೋಲ್ ಬೀಡೆಗಳ್ ಪರ್ವಿದುವು (ಚಂದ್ರಪು. ೯-೬೭). [ ಸಂ. ]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ : ವಿದಲಿತ ನಲಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜ ಮದಸಲಿಲಸದನಮಟವೀನಿಕಟಂ (ಮಲ್ಲಿಪು. ೨-೧೦). [ ನದ + ನಿಕಟ ]

**ನದರಿಡು, ನೆಜರಿಡು, ನೆದರಿಡು** (ಕ್ರಿ). ೧. ಲಕ್ಷಿಸು ; ಗಮನವಿಡು

ರಾತ್ರಿವುದಯ ಸಾಯಂಕಾಲ ನದರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವಾರುಯನ್ನಂತ ಮುದಿಮೂರ್ತಿಗಾರು ಮನ್ನಿಪರು (ದೀದಕಾ. ೯-೧೫) ; ಸದಮಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿನ್ನೊಳು ಸಧಮಲ ತತ್ವದಿ ತಿಳಕೋ ಬರಕೋ (ಶರೀಫ. ೭೭ ಕವಿಕಾವ್ಯ ಪರಿಚಯ). **ನೆದರಿಡು :** ೧. ಒಂದೀಟು ನೆದರಿಟ್ಟು ನಡಿ. ನಮ್ಮ ಬಿಚ್ಚು ನಾಥಪ್ಪ . . . ಕೂದಲೆಳೀಲೆ ಉರುಲು ಹಾಕಾಂವ (ಪತಿತೋ. ೭೭).

**ನೆದರಿಡು :** ೧. ಸದ್ಯ ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶರೀಫ. ೩೫-೧೦). ೨. ಬಯಸು ; ಕಾಮಿಸು ; ಅಪೇಕ್ಷಿಪಡು : ಮಾವಿನ ಹಣ್ಣು ಮನಿಯಾಗ ಇಟಗೊಂಡು ನೀರಲಕ್ಕಾಕ ನೆದರಿಟ್ಟ (ಗರತಿ. ೧೨೮).

[ ನದರು (<ನಜರು) + ಇಡು$_1$ ]

**ನದರಿಸು** 'ನಜ್ರಿಸು' ನೋ.

**ನದರು** 'ನಜರು' ನೋ.

**ನದರುಕಾಣಿಕೆ** 'ನಜರುಗಾಣಿಕೆ' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದರುಗೆಡು** (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ಮಾಂದಳಿರಿಗೆದೆಬೆದರುತಳಿವಿಂಡುಗಳ ರಭಸಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತೈದಿದ ಬನದೊಳಗಜೆಯು ಕಾಬ ತವಕದಲಿ (ಅಂಬಿಕಾ. ೧೮-೮). [ ನದರು (<ನಜರು) + ಕೆಡು$_1$ ]

**ನದಿ** (ನಾ). ಹೊಳೆ ; ತೊರೆ ; ☞ ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧುಃ, ಸ್ರವಂತೀ, ತಟಿನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ತೊಱೆ" (ಹಲಾಯು. ೧೧೦-೪೩) ; "ನದಿ ತರಂಗಿಣಿ ತಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಹೆಸೆ ತೊಱೆಗೆ ನಾಮಂ" (ಮಂಗರಾ. ೧೨೨-೧೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆದಿಪು ೩-೫೨) : ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅವಹಂ. ೧೭೨-೭೭೫) ; ನದಿಯಂ ನಾವಿಕನಂತೆ ಪೊಕ್ಕು ಗುಱಿಯಂ ಧಾನುಷ್ಕನಂಬಂತೆ ತಪ್ಪದಿದಂ ಕಂಬಮನೆಚ್ಚುದು (ಪಾರ್ಶ್ವಪು. ೧೦-೧೨೦) ; ನದಿ ಕಣ್ದೆಱೆದಂತೆ ಪೊಳಂಕಿದ ಮಾನು ಮೊಸಳೆ ಪಾಯ್ದು ನರಪತಿಯ ವಿನೋದದ ಗುಜ್ಜುಸಿಕ್ಕೆ ಪಿಡಿದತ್ತದನಧಿಪತಿ ಜಾಲಗಾಱಿರಿಂ ತೆಗೆಯಿಸಿದಂ (ಯಶೋಚ. ೩-೪೮) ; ಮಱುದಿವಸ ವೇದಾವತಿಯ ಸಾರ್ದರು ಬಳಿಕ್ಕವರಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂಱನೆಯ ದಿವಸ (ತೊರರಾ. ೨-೮-೯) ; ನದೀ ದಾಟ ಬದೀಲಿ ಬಿದ್ದ ಹಾಗೆ (ಗಾದೆ).

**ನದಿನದ, ನದೀನದ** = ಹೆಣ್ಣು ಮತ್ತು ಗಂಡು ಹೊಳೆಗಳು : ಮೂತೆಱೆದ ಗಾಳಂಗಳಿಂ . . . ಸೊಗಡುಗೂಳುಂಗಳ ಮದ್ದುಗಳ ಮುಸಕದಿಂದಂ ನದಿನದಾಳಿಯೊಳು ಮಿಾನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಡಕಾ. ೫-೪೪) ; ಅಂತವರಿರ್ವರುಂ ನಾನಾನದೀನದಾಂತರಾಳಸಂಪಜ್ಜನಪದಂಗಳಂ ಕಳೆದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೪೫೭) ; ನದೀನದಾಫುಮಾಗಳೆ ಬ ಱು ಗ ೦ ಪ ಲಾ ಯ್ತು ಕುಱಿಯುಂ ತೆವರುಂ ಸಮನಾಯ್ತುದೆತ್ತಲುಂ (ಪುಷ್ಪಪು. ೫-೪೭) ; ಕಾಮಿತಾರ್ಥವನೀವಪಂದಿನ ಭೂಮಿ ಬಿತ್ತದೆ ಜನಿಪ ವಸ್ತುಸ್ತೋಮವನು ತಂದೀವುದದ್ರಿನದೀನದಾದಿಗಳು (ನಿಭಾಗ. ೧-೭-೮) ; ಅಕ್ಷಯವಾದ ಸರೋವರ ಪೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ವಪ್ರಾ. ೧೨೯). **ನದಿಯ ಮಗ** = (ಗಂಗಾ) ನದಿಯ ಸುತ ; ಗಾಂಗೇಯಂ ; ಭೀಷ್ಮ : "ನಾದೇಯಃ, ನದೀಸುತಃ– ಈ ೨ ನದಿಯ ಮಗಂ" (ಹಲಾಯು. ೮೩-೩೪೭) ; ಇದು ಮಹಾಮುಖವಿಲ್ಲಿ ಪೂಜ್ಯನು ಯದುಂಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುವ್ಯಾಸ. ೧೦-೩೯) ; ನದಿಯ ಮಗ ಗುರು ಗುರುತನೂಜನು ವಿದುರಭಾರದ್ವಾಜಮುಖ್ಯರು . . . ಬಹಳಾಭ್ಯುದಿತಬಲ ನೆರೆದೆದ್ದು ನಡೆದುದು ಭರದ ಪಯಣದಲಿ (ಕುವ್ಯಾಆ. ೬೧೩. ३೫-೬). **ನದಿ ಹಾಯು** = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂನಾ. ೯೪). [ ಸಂ. ನದೀ ]

**ನದಿಗವುಂಡ** (ನಾ). ಒಬ್ಬಾತನ ಹೆಸರು : ಸದೆಯನೂರ ನದಿಗವ್ಣಣ್ಣನು ತಿಬ್ಬೂರ ಮಾರಗವುಣ್ಣ (ಮೈಆರಿ. ೧೯೧೯, ೧೦-೬೩ ; ೨೦೦).

[ ನದಿ + ಗವುಂಡ (<ಗಾವುಂಡ) ]

**ನದಿಜ** (ನಾ). = ನದೀಜ ೩ : ಇದಿರುಗೊಂಡರು ಹಿರಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹದನನೆಲ್ಲವ ಕೇಳಿದರು (ಕುವ್ಯಾಆ. ೧-೧೫).

[ <ಸಂ. ನದೀಜ ]

**ನದಿಪು** (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುವನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರ ಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ನರಕತ ಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದಂ ತಿಳಿನೀರಂ (ಆದಿಪು. ೧೪-೧೧೫) ; ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದು ಮಧುರವಚನರಚನಾಜಲಂಗಳಂ ತಳಿದು ನದಿಪಿದುದು (ಪಂಪಭಾ. ೩-೨೨ವ) : ಮದನದಾವಾಗ್ನಿಯುಂ ನದಿಪೆ ಮಾಡಿದ ಕಾಮನದಿಯೆನಿಸುವವು ದಿವಿಜದಂಪತಿಶತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮಿ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆಱದಿಂದಂ ಕಣ್ಗಳಿಂದುಣ್ಮಿ ಪೊಣ್ಮುವ ನೇತ್ರಾಂಜನಮಿಶ್ರ ಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿಪು. ೧೦-೪೫) ; ಅಳವಿಗಱಿದ ಉರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯಂ ತಳಿವಂತೆ ದಂತರುಚಿಗಳ್ ತುಳುಂಕೆ ನೃಪಸುತನನಾರ್ಯಾಸುತನಿಂತೆಂದಂ (ಲೀಲಾವ. ೯-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತಿಂ ಹರನ ಕಣ್ಣುರಿಯುಂ ನದಿಪಲ್ ಸಮರ್ಥನೋ (ಚಂದ್ರಪು. ೭-೪೭).

**ನದನದಿಪು** (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತದೊಱೆಪಂ ಪಡೆದಾ ಕಿಚ್ಚ ನದ[ದ]ನದಿಪೆ [ ಪಾಠಾಂ. ನದನದಿಸಿ, ಸದನಡಿಸಿ] ಮಾಡುಗುಮುಚ್ಚರಿಯಂ ಪಗಲುಮಿರುಳುಮಿಾ ವಿಜಯಾರ್ಧಂ (ಅಜಿಪು. ೯-೨೨). [<ನಂದು ? ]

**ನದಿಮೊಗ** (ನಾ). ಹೊಳೆಯಪಾತ್ರ,–ಪ್ರವಾಹ: ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಧಿಲ್ಲಿ! (ಕಎಪು. ೫೫). [ ನದಿ + ಮೊಗ ]

**ನದಿಯಮರ** (ನಾ). ಒಂದು ಬಗೆಯ ಮರ : "ಬೃಹತ್ಪತ್ರಿಃ, ಬೃಹಸ್ಪತ್ರಿ ಈಯೆರಡು ನದಿಯಮರ, ನೇಱಿಲ್" (ಒಷಧಿ. ೧೯೯).

[ ನದಿ + ಮರ$_1$ ]

**ನದಿವಾಸಿ** (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮರುಳುಗಳೆಲ್ಲಾ ಲಿಂಗ ಪ್ರಾಣಿಗಳಿಗೆ ಪ್ರಾಣಲಿಂಗಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಸಿದ್ಧೇವ. ೧೧೭-೩೫೯). [ ನದಿ + ವಾಸಿ$_1$ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊೞ್ತುಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ಕಾವಣಮಂ ಪುಗೆ (ಶಾಂತಿಪು. ೮-೨೩ವ). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ಗೋಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ ರಾಮಂ ನದೀಜಂ (ಎಕ. VI, ಚಿಕ್ಕಮ. ೭೭-೩೪ ; 1180) ; ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚಿರ್ದಟವೀಪ್ರತಾನಮುರಿಯುತ್ತಿರ್ದಪ್ಪುದೆಂಬಂದಮಂ ಗೆಲೆ ಮಾಡಿತ್ತು ನದೀಜನುಗ್ರಶರಪಾತೋದ್ಭೂತಜಾತಾದ್ಭುತಂ (ಮಹಾನೇ. ೧೨-೧೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುವ್ಯಾಉ. ೮-೧). ೪. ಅರ್ಜುನವೃಕ್ಷ ; ನೀರುಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೊ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕೆನೆ ಕೆಯ್ಯಾರೆ ಮನಕ್ಕಿಂಗಳಾ ನದೀಜಾತಂ ಸಂಸಾರಕ್ಕೇವೈಸಿ ದಯಾಧಾರು ಪರಮಾತ್ಮತತ್ತ್ವನಿಷ್ಠಿತನಾದಂ (ಮಹಾನೇ. ೧೨-೧೬೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನೞಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪಸವಿಂದ್ರಜಾಲಮೆಣಿಕಂ ... ಅಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೫೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ,–ತೀರ : ಬಾಳೆಯ ಗರ್ಭದೊಳಿರ್ದ ಬಾಳೆಯುಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಮಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳಿರ್ಪನ್ನೆಗಂ (ಪಂಪಭಾ. ೧-೬೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೇ. ೧೬-೧೦ ವ) ; ನದೀತೀರದ ರಮ್ಯಸ್ಥಾನ (ದಾಸಹು. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನಂ ವಾರಣಾಸಿಯಂ ಪೊಱಮಟ್ಟೇಕೆ ಬಂದಿರೆಲ್ಲಿರ್ದಿರೆಂದುಂ ಬೆಸಗೊಳ್ವುದುಂ (ಮಹಾನೇ. ೯-೧೧೧ ವ) : ಈ ನದೀನಂದನನ ಬಲದಲಿ ಸೇನೆ ಶಿವಗಂಜುವುದೆ (ಕುವ್ಯಾಭೀ. ೧-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ತತ್ಕಲ್ಪ ಷೋಡಶ ನದಿ[ದೀ]. ನಾಥೋಪಮಾಯುಷ್ಯಂಬರಂ ದಿ ವ್ಯ ಸು ಖ ಮ ನು ಂ ಡು (ಮಹಾನೇ. ೧೫-೧೪೬ವ). [ ಸಂ. ]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತವಿಲ್ಲದ ಬನವಂಚೆಯಿಲ್ಲದ ನದೀನಿಕಟಂ ... ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೧). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರುನದೀಪೂರಮನುಡುಗಿಪುದಿನತೇಜವಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪ್ರ. ೫-೧೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ,–ಹರಿವು : "ಒಟ್ಟು–ನದೀಪ್ರವಾಹಂ" (ಶಮದ. ಪರಿ. ೧) : ತೊಲಗಿರ್ಕೆ ಮುನಿವರರು ಒಱಿದೇ ಹೊಳೆಯೊಳಗೆ ಹೋಗದಿರಿ ದಿಪದಿಂದಿಳಿದ ದಿವ್ಯನದೀಪ್ರವಾಹದ ಸತ್ಕೃತವುಮೆನಲು ಅಲಘುಮತಿ ಕೇಳುತ್ತ ಘುಳುಘುಳುಘುಳು ಮಿಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜನ್ಹುಮುನಿ ನಗುತ (ನಿಭಾಗ. ೯-೮-೪೬). [ ಸಂ. ]

**ನದೀಬೂಡು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳುಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂಡು' ಜಮೀನು. ನಾಡಗೌಡರ 'ಮಡಿಗದ್ದೆ'. ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಾರವೆ? (ಹಬ್ಬಬ. ೫೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಹಲಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮಂಗರಾ. ೨೯-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪ್ರ. ೧-೯೦) ; ಅದಲ್ಲದೆಯುದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪಪು. ೨-೦೪ವ); ನೂತನ ನಾರಿಕೇಳಜಲದಿಂ ಧವಳೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಪಂಗುಳಿದೊಳ್ಳಿಳಸಾಗಿ ರಂಜಿಕುಂ (ತ್ರಿಪುವಿ. ೨-೩೭); ಬೆಳೆವುವು ಶಾಲಿ ಪಾಮರಿಯರ ಮೊಗಸಸಿವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃಕಗಳ ಬಗೆಗೊಳದಾ ನಾಡೊಳು (ತ್ರಿಭುತಿ. ೨-೧೪). ೨. ಗದ್ದೆ ; ತರೀ ಜಮೀನಂ. 'ದೇವಮಾತೃಕ' ಪಲಾ. [ ಸಂ. ]

**ನದೀಮಾತೃಕೆ** (ನಾ).=ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯಸಂದೋಹಕಾವಾಸವಾಗಿರುತಿಹುದು (ನಾಗಕು. ೨-೦೮).

[ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ಶ್ರಾವಕಾ. ೦೨೩) : ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೧೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿಗಳವರೆಗೂ ಜಹಜುಗಳು ಹೋಗುತ್ತವೆ (ನಕದ. ೨೦) : ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪನಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡೆಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೦೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಯನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾಕಾರವಾಗಿ ಏರ್ಪಟ್ಟ ಮೆಕ್ಕಲು ಭೂಮಿ : ನದೀಮುಖಜಭೂಮಿ; ಕುದುರು" (Delta. ಇಂಕನಿ) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳೆಂದು ಪೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರ ಕೃ ತಿ ಯ ಲ್ಲಿ ಯೇ ನಡೆದಿರುವ ಘಟನೆಗಳು

(ಧಾಇಪ್ರ. ೬) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ನನದಿ. ೨೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಎಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೮೩) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ರೂಢಿ). ▶ ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳೂ, ಅಪಾಯ ಪ್ರಸಂಗಗಳೂ ಉಂಟಾಗುತ್ತವೆ ಎಂಬುದು ರೂಢಿವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ,–ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ನನದಿ. ೩೪). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ ; ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ–ಈ ತೋರಮತ್ತೀಗಿಡ, ಕೆಂಪುಮತ್ತೀಗಿಡ, ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೧೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ–ಈ ೨ ನದಿಯ ಮಗಂ" (ಹಲಾಯು. ೫೨–೩೪೭) ; ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮಹುವಕ್ಕಂ (ಪಂಪಭಾ. ೧೧–೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ . ಕಳಶಸಂಭವನಿಂ ತೀರದ ೨ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩–೭೦) ; ಆ ನದೀಸುತನಡಿಗೆಋಗಿ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲ್ಲೆದಿದನು ಕುರುರಾಯನೋಲಗವ (ಕುಮಾದ್ರೋ. ೧–೩೩). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಬಿಡಿಂಬುಳಿಕ್ಕೆ ಪೆಜಿರನಗಿಲ್ಲೆಂದಾನೆ ಗಳಿತಾಶ್ರುಜಲದಿಂ ಸೇನಾಪತ್ಯಾಭಿಷೇಕಮಂ ಮಾಡಿದಪೆಂ (ಗದಾಯು. ೩–೬೬). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡುವು : ಜಳಾವಗಾಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟಿ ನುಣ್ಮಣಲಂ ಮಣಲ್ದಿಂಟೆಗೆತ್ತಿದಱ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸೈರಿಸದೆ ನದೀಹ್ರದಮಂ ಪುಗುವುದುಂ (ಶಾಂತಿಪು. ೬–೯೨ವ). [ ಸಂ. ]

**ನದುಗು₁** (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ದಿಡಿದೊಡಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪ್ಪದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಬ. ೬೬). [ ? ]

**ನದುಗು₂** (ನಾ). ಗುನುಗು : ಮಾವನ ಕಡೆಯಿಂದ ಎಲ್ಲಾ ಬಂದಿದೆ ಅವನಿಗೇನು ನದುಗು ? (ರೂಢಿ). [ ? ]

**ನದುರು** 'ನಜರು' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಂಚ್ಚಿಟ್ಟಿರುವ : ಕಿದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದೌಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹೃಂಹೆಯ ಸುಯ್ಲ ಹೊಯ್ಲುಗಳ ಎದೆಯ ನಾಮದ ಬದಿಯ ರೋಮದ ತ್ರಿದಳ ಕರ್ಣದ ಕದಳಿವರ್ಣದ ಮದದ ಕೇಸರಿಯುದಿಸಿ ರೋಷದಿ ಕವಿದವರಿಭಟನ (ಅಂಬಿಕಾ. ೩೨–೩೪). (ನಾ). ೨. ಮುಂಚ್ಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹ ಸ ರಿ ಕೆ ಯ ಚೂರಿಸುವ ಜಿಹ್ವಾಪ್ರಸರದುರುಪೂತ್ಕಾರದಹಿಪಂಜರದ ಮಧ್ಯದಲಿ ಎಸೆದನ್ಯೆ ಲವ (ತೊರರಾ. ೬–೧೬–೯). 'ನದುಳುನಗೆ' ಪರ್ಯಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದಖಿಳಖಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರೆಮುಸುಕುಗಳಲಿದ್ದುದು (ತೊರರಾ. ೩–೭–೧೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ (ತೊರರಾ. ೬–೨೭–೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ, ಸಂಯುತಃ–ಈ ೩ ಕಟ್ಟುಪಟ್ಟವಂ" (ಹಲಾಯು. ೫೬–೦೮೫) ; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನನೋಚ್ಚುಂಬ್ಯಮಾನಾಂಬರಚಕ್ರಂ (ಆದಿಪು. ೪–೨೪). [ ಸಂ. ]

**ನದ್ಧ್ರಿ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವಧ್ರೀ ಸಂಜ್ಞೆಯದು ವರತ್ರೆಯೆನಿಕ್ಕುಂ" (ವಸ್ತುಕೋ. ೫೦–೩೭) ; ನದ್ಧ್ರೀ, ವಧ್ರೀ, ವರತ್ರಾ–೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೯೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ರ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ–ನದ್ಯಾಮ್ರ" (ಓಷಧಿ. ೧೬). [ <ಸಂ. ನದ್ಯಾಮ್ರ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ,–ದಾಟುವಿಕೆ ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೧೩–೫೦ವ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕಿಱುವಳಿ ನನವತಿ ಸಾಗಲ ತಟಾಕಸ್ವಾತ್ (ಮೈಆರಿ. ೧೯೩೪, ೩೦–೨೯ : 670). [ ? ]

**ನನವರಿಕೆ** 'ನೆನವರಿಕೆ' ನೋ.

**ನನಸು, ನೆನಸು₃** (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಶಮದ. ಪರಿ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನ.[ಪಾಠಾಂ. ನೆ]ನಸು, ದಿಟಂ–ಈ ೬ ಸತ್ಯಂ" (ಕಶಸಾ. ೧೩–೨೩೪) ; ಪುಳಿನಪರಿಸರಪ್ರದೇಶದೊಳ್ ಮಱಿದೊಱಗುವೈರಾವತದಂತೆ ಪವಡಿಸಿ ಕಿಱುದಾನುಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪಂಪಭಾ. ೪–೧೦೦ವ) ; ಭೀತಿಯಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯನತಿಭ್ರಾಂತನಂದಿಂದು ನೋಳ್ಪುಂ (ಎಕ. VII, ಶಿವಮೊ. ೬೪–೩ : 1112) ; ಕನಸೆಂದೊಡಂ ನನಸಿದೆಂದಾಳ್ಗಳ್ [ಪಾಠಾಂ. ನೆನಸೆನುತ್ತಾಂತಳ್] ಮಹಾಚಿಂತೆಯಂ (ಜಗವಿ. ೧೭–೧೦೭) ; ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣಿವೇಳುತಿಹುದವರ ಚಾಳಿ (ಚಂದ್ರಸ. ೧೨–೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಜ್ಯೋದ. ೧೮೭). **ನೆನಸು₃** : "ನೆನಸೆಂದು ದಿಟಂ" (ಚತುನಿ. ೧೯೦) ; "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೧೨೧); "ನೆನಸೆನಲ್ ನಿಶ್ಚಯಂ" (ಕಶರ. ೫೭) ; ಕನಸಂ ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೧೯೧–೧೦) ; ಕನಸಿಂದಂ ನೆರೆದವನಂ ನೆನಸಿಂ ನೆರೆದಪ್ಪೆನೆಂದು ತರವೇಟ್ಟಿಪೆ ಕಾಂತನಂ ((ಜಗವಿ. ೧೭–೧೦೨); ದನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜುತಿಪ್ಪರು (ಕಾಶಿರಾ. ೩೩-೮); ಮಱುವಗಲುದಯದೊಳರಸಂ ತುಱುಗಿರೆ ಕಡುಹರಿಸವಿರುಳ ಕನಸಂ ನೆನಸೆಂದಱಿಪಲಳಿಸಿಂಗ ರಾ ರ್ಯ ರ ಸು ಬ ದಿ ಂ ದ ಂ ಕರೆಯಲಟ್ಟಿದಂ ಪಡಿಯಱರಂ (ಚಿಕವಿ. ೩-೧೧೧).

ನನಸಾಗು, ನೆನಸಾಗು = ಪ್ರತ್ಯಕ್ಷವಾಗಿ ಕಾಣುವಂತಾಗು; ವಾಸ್ತವವಾಗು : ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಪದ್ಮರಾ. ೧೧-೧೮೪); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರಮಹೇಶ್ವರನೀಶ್ವರವರಪ್ರಸಾದವೆಲ್ಲಂ ತನಗೆ ನೆನಸಾಗೆಯುಂ ಕನಸಿನಂದವಾಗಿ ತೋಱೆ (ಪಂಪಶಾ. ೧೧-೧೩೧ ವ).

[ ದೇ.॥ ತಮಿ. ನನವು, ನನಾ ]

ನನಸುಗಿರು (ಕ್ರಿ). ದಿಟವೆಂದು ಭಾವಿಸು ; ನಿಜವೆಂದು ಭ್ರಮಿಸು : ಅಹುದೆ! ಬರಿದೆ ಬೆದರಿದೆ, ಅಜ್ಞ, ಕನಸಂ ನನಸುಗೆತ್ತು! (ಚಂದ್ರಿಕ. ೩೭-೩೩).

[ ನನಸು + ಗಿರು (< ಗಿಱು) ]

ನನಾಂದೃ (ನಾ). ಗಂಡನ ಸೋದರಿ ; ನಾದಿನಿ ಅಥವಾ ಅತ್ತಿಗೆ : "ನಾದುನಿ ನನಾಂದೃ ನಂ [ನಾ] ದಿನಿಯೆನಿಕುಂ" (ವಸ್ತುಕೋ. ೫೭-೨೪); ಋಕಾರಾಂತಕ್ಕೆ-ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೪ ಪ್ರಯೋ). [ ಸಂ. ]

ನನೂರು 'ನಾಲ್ನೂಱು' ನೋ.

ನನೆ₁, ನೆನೆ₂ (ಕ್ರಿ). ನನೆತು, ನನೆದು, ನೆಂದು, ನೆನೆದು (ಭೂತನ್ಯೂ). ೧. ಆರ್ದ್ರವಾಗು ; ಒದ್ದೆಯಾಗು ; ತೋಯು: "ನನೆ-ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಶಮಧಾ); ಅಂತೆಟ್ಟುತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೧೫ವ); ನಿರವಧಿಪ್ರೇಯಪ್ರೀತಿವಚನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಆನಂಪು. ೩-೩೩ವ) : ಮೊಮ್ಮಂದಿರುಗಳೆಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುವ್ಯಾಭೀ. ೭-೨೪) ; ಎಲೆ ವನಜಾಕ್ಷ ಬೆಟ್ಟವಮಂ ಕೊಡೆವಿಡಿದು ಪಟ್ಟಿಯಂ ನನೆಯಲೀಯದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಜೈಮಿಭಾ. ೧೩-೪೪). ೨. ನೀರನ್ನು ಹೀರಿ ಮೃದುವಾಗು,-ಮೆತ್ತಗಾಗು : ಕಲ್ಲೆಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌದ್ರವಕ್ಕಿಟಿವವರುಂ ಸಲ್ಲಲಿತಮಪ್ಪ ಧರ್ಮಕ್ಕೆಲ್ಲಿ ಯುಮೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೧-೧೭೭) ; ಉತ್ತಮದ ಸೊಜ್ಜಿಗೆಯ ಬಟ್ಟವಾಲೊಳು ನನೆಹಿ ಮತ್ತೆ ನನೆ [ಪಾಠಾಂ. ಮೆತ್ತನಾ]ದಾಗ ತೆಗೆದದನು ಪಿಟ್ಟಿಯು ಹಿಟ್ಟನೊತ್ತಿ (ಸೂಪಶಾ. ೧-೧೧). ನೆನೆ₂ : ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೭) ; ಚಿತ್ರಜಾಂತಕನೊಂದುದಿನವುದ್ವೃತ್ತಪೋಧನ ವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸವು. ೨೭-೪೭); ಸೂ ಕ್ತಿ ಸು ಧಾ ರ ಸ ದಿ ನೆಱೆ ನೆನೆದುದಾತನ ಮೈ ವಿಲೋಚನವಾರಿಪೂರದಲಿ (ಕುವ್ಯಾಕ. ೧೭.೩೩) ; ಮೊದಲೇ ಸೀಮೆಎಣ್ಣೆ ಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೪೪) ; ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಿಯುದಕದಲ್ಲಿ ನೆನೆವನೆ (ಬಸವ. ೧೮೪) : ಧರಣಿ ನೆನೆದುದು ಗಂಧರಸಕಸ್ತೂರಿಯ ಪನ್ನೀರುಗಳ ಹೊನಲೊಡವೆರಸಿ (ಕುವ್ಯಾವಿ. ೧೧-೮೩). 'ನೆನೆಗಡಲೆ', 'ನೆನೆಯಂಕ್ಕಿ₁' ಪರಾ. [ ದೇ.॥ ತಮಿ. ನನ್ಯ; ಮಲ. ನನ, ನನೆ; ತುಳು. ನನೆ; ಕೊಡ; ನೆಲಿ, ನೆಲ ]

ನನೆ₂ (ಕ್ರಿ). ೧. ಹೂವು ಬಿಡು; ಮೊಗ್ಗಾಗು ; ಮುಗುಳಾಗು : "ನನೆತುದೆಂದು ನನೆವೆತ್ತುದು" (ಕಶಸಾ. ೯-೧೮೯); "ನನೆತುದು ನನೆಯೇಱದುದು" (ಕವಿಕಂ. ೭೭) ; "ನನೆತುದೆನೆ ಮೊಗ್ಗೇರಿದುದು" (ಕಶಂ. ೫೩) ; ತಳಿತರ್ಗ ಬಿಗುವಶೋಕೆಗಳುಂ ನನೆತೆಬಲ್ಲ ಜಾದಿಗಳುಂ ಮುಗುಳ್ತ ಮುಱಿವ ಮೊಲ್ಲೆಗಳುಂ (ಲೀಲಾವ. ೭-೬೦ ವ); ಬೆಳಕು ಬೆಂಕಿ ಬೆರೆತುಕೊಂಡು ಭಾವವು ಹೊರದೂಡಿರೆ ಬಾಳು ಮೊಳೆತು ಸುಗ್ಗಿ ನನೆತು ಹೂವಿಸಂತೆ ಮಾಡಿರೆ (ಗಂಗಾತ. ೩೩-೭). ೨. ಚಿಗುರು ಬಿಡು ; ಅಂಕುರಿಸು. 'ನನೆವೊಯ್' ಪರಾ. [ ದೇ.॥ತಮಿ. ನನ್ಯ; ತೆಲು. ನನಯು, ನನಚು, ನನುಚು ]

ನನೆ₃ (ನಾ). ೧. ಅರಳದ ಹೂವು ; ಮೊಗ್ಗು ; ಕುಟ್ಮಲ : "ನನೆ-ಆರ್ದ್ರಭಾವೇ. ಪುಷ್ಪಕುಟ್ಮಲೇ ಚ" (ಶಮಧಾ) ; "ನನೆ ಕುಟ್ಮಲಂ" (ಕಶಸಾ. ೯-೧೮೫) ; "ನನೆಯೆನಲು ಕುಟ್ಮಳಮಕ್ಕು" (ಕಶಂ. ೫೩) ; ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಪಂಪಭಾ. ೧-೫೮ ರಗಳೆ) ; ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬಿರಯಿಗಳರ್ದೆ ಪೌವನೆ ಪಾಱಿ ಪಾಱುಗುಂ ಕಾಮನಿಕಾಮಶಿಲೀಮುಖಂ ಶಿಲೀಮುಖನಿವಹಂ (ಮಲ್ಲಿಪು. ೩-೪೧) ; ತುಱುಗಿದ ತಳಿರಿಂ ನನೆಯಿಂ ಕಿಱು ವಿಡಿಯಿಂದೆಸೆದುದಸದಳಂ ಮಾಕಂದಂ (ಕಾವ್ಯಾವ. ೨೩೨) ; ಸಣ್ಣ ನನೆಯೊಳಗಣ ಪರಿಮಳವ ಹೊ ಱ ಸೂ ಸಿ ಇದಿರಿಂಗೞುಹಿಸಬಲ್ಲುದೇ ವಾಯು (ದೇದಾವ. ೭೩-೧೨೫) ; ಸಂಪಗೆಯ ನನೆಗೆಯ್ದಿ ಬಱಿಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಕಾ. ೫೮) ; ತನುಪುಳಕ ತಲೆದೋಱಿ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾನ (ಕುವ್ಯಾದ್ರೋ. ೧-೨೨) ; ಪೂವಲ್ಲಿಗಳ್ ನನೆಕೊನೆ ಮುಗುಳರೆ ಮುಗುಳ್ ಬಿರಿಮುಗುಳುಂಬ್ಬಲರ್ದ ಪೊಸವಲರ್ಗಳಿಂದೆ ಸೊಗಯಿಸೆಯುಂ, ಮನೋಹರವಮಾಯ್ತು ಪೊಸಸುಗ್ಗಿ (ರಾಮಾಶ್ವ. ೧೭-೧). ೨. ಹೂವು ; ಪುಷ್ಪ ; ಕಂಸುಮಂ : ನನೆಯನ ಪೇಱಿ ಕಂದಲರೆರೊಳೆಯ್ದೆ ಬಟಲ್ದೆಳಮಾವು (ಆದಿಪು. ೧-೭೪). 'ನನೆಗಣೆ', 'ನನೆವಾಸ್ಮ₂' ಪರಾ.

ನನೆಯ ಕೋಲ್=ಹೂಬಾಣ ; ಪುಷ್ಪಬಾಣ ನೀಂ ನಾಲ್ಕೆರಡು ಪಗಲೊಳೆಮ್ಮೊಡೆಯನ ಕೈಯ ನನೆಯ ಕೋಲ ಕಾಲಾಟಮಂ ಕಾಣ್ಬರೆನುತೋಲಗ ಸಾಲೆಯಂ ಪೊಱಮಟ್ಟು (ಕಬ್ಬಿಕಾ. ೧೮೮).' ನನೆಯ ಶಿಶು = ಮೊಗ್ಗು ; ಮುಗುಳು : ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ರಾವಿನಂತಿರಬೇಕು (ಮೋಳಿಮಾ. ೯೭-೩೮೫). ನನೆಯ ಸರ = ಪುಷ್ಪಬಾಣವನ್ನುಳ್ಳವನು ; ಕಾಮ ; ಮನ್ಮಥ : ನನೆಯ ಸರಂಗೆ ಚಿತ್ತದೆಡೆಯಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸೆದಿರ್ಪುದು (ಶಾಂತೀಶ್ವ. ೬-೬೨). ನನೆಯ ಸರಲ್=ನನೆಯ ಕೋಲ್: ನನೆಯ ಸರಲ್ಗಳುಮಂ ಕ ಬ್ಬಿ ನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದೆ ಕಾಣ್ಬ ವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱಿದರ್ (ಶಾಂತಿಪು. ೫-೯೪) ; ನನೆಯ ಸರಲ್ಗಳಂತೆ ನೆಱೆದಿಂಗಳ ತಣ್ಣದಿರಂತೆ . . . ಲೋಲ ಲೋ ೕ ಚ ನ ರು ಚಿ . ಸುತ್ತಿಮುತ್ತಿದುದಶೇಷನೃಪಾಲಸಭಾಂತರಾಳಮಂ (ಪಂರಾಮಾ. ೫-೭೦) ; ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಡಪಮತಿ ಶೋಭಿಸಿದುದು ನನೆಯ ಸ ರ ಲ ನೀಱನ ಕೇಳೀವನದಂದದಮನನಾಕರಿಸಿ (ಜಯಕಾ. ೪-೫೦).

[ <ನನೆ₃./ತಮಿ. ನನ್ಯ, ನಕ್ಕೆ ; ಕೊಡ. ತೊದ. ನನ್; ತೆಲು. ನನ ]

ನನೆಕೇರ್ (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ : ನನೆಕೇರಿಂ ಕಂಪಿನಣ್ಪಿಂ ಕುಸುಮಿತ ಲತಿಕಾದುಂಡಸಂದೋಹದಿಂ . . . ಒಪ್ಪುವ ನವಸುಮನೋ ಮಂಡಪಕ್ಕೆಯ್ದೆ ವಂದಲ್ (ಲೀಲಾವ. ೧೧-೫೯). [ ನನೆ₃ + ಕೇರ್₁ ]

ನನೆಕೊನೆ (ನಾ). ೧. ಚಿಗುರಿದ ಕಂಡಿ; ಅಂಕುರ; ಮೊಳಕೆ: ನನೆಕೊನೆಯ ತಳಿರ ಪೂವಿನ ಬನವಮನಿತುಂ ಶಿಪೆಗಳಳುರೆ ಬೆಂಕಿಯ ಪೊಯ್ಮುರ್ವಿನೊಳೆ ಕೊರಗಿರ್ದ ಲತೆಗಳ ಕೊನೆಗೊನೆಯುನ ದಹನನಳುರ್ದ ಕೊನೆಗೊನೆಗೋಡಂ (ಪಂಪಭಾ. ೫-೮೭) ; ಇಂದೊ ನಾಳೆಯೊ ಮತ್ತೆ ಮೈಯೆಲ್ಲ ನನೆಕೊನೆಯು

ಎಲೆಯುದುರಿ ನಿಂತರೂ ಒಣಗಿಲ್ಲ ವಸವು (ಕರುಶ್ರಾ. ೪೧-೨೩). ೨. (ಆಲಂ) ಹಿಗ್ಗು; ಸಂತೋಷ; ಆನಂದ: ನೆನಹು ನೆಮ್ಮಿತು ಶಿವನನಿತರದ ನನೆಕೊನೆಯ ತೆರಳಿಕೆಯ ತೊಡಚಿಯ ಮನದ ಸಂಚಲವೀಚುವೋದುದು ಕಲಿಧನಂಜಯನ (ಕುವ್ಯಾಅ. ೪-೪೩); ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದರೇನೆ ವಿಜಯಯಾತ್ರೆಯು ನನೆಕೊನೆ! (ಚಿಂತನ. ೬೭-೪). 'ನನೆಕೊನೆವೋಗು' ಪರಾ..

ನನೆಕೊನೆಯಾಗು = ವಿಕಸಿತವಾಗು; ಅರಳು: ನಲ್ಲನೆ ನಗೆನುಡಿಗಾಟಿನೆ ಪೆಣ್ಗಲರ್ವಿಲ್ಲನೆ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸುಫ[ಫು]ಲ್ಲವಲ್ಲರಿ ಬಗೆಗಾಟಿ (ವರ್ಧಚ. ೯-೨); ಭರತೇಶ-ಕುಸುಮಾಜಿಯರ ದಿವ್ಯಪ್ರಣಯವು ಸುರತದಲ್ಲಿ ನನೆಕೊನೆಯಾಗುತ್ತದೆ (ಕಸಾಢ. ೩೭೦). [ನನೆ₃ + ಕೊನೆ₂]

ನನೆಕೊನೆಯೇರು 'ನನೆಕೊನೆಯೇಱು' ನೋ.

ನನೆಕೊನೆಯೇಱು, ನನೆಕೊನೆಯೇರು (ಕ್ರಿ). ಚಿಗುರು; ಕೊನರು; ಮೊಳೆ; ಅಂಕುರಿಸು: ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ನರೇಂದ್ರನಂದನರ್ಗೆ ಮನೋವಿಕಾರದೊಡನಂಗವಿಕಾರವಂದೇಂ ಪೊದಟ್ಟುದೋ ನನೆಕೊನೆಯೇಱುವಂತೆ ವನರಾಜಿ ಮಧುಪ್ರಥಮಪ್ರವೇಶದೊಳ್ (ಪಂರಾಮಾ. ೩-೫೦). ನನೆಕೊನೆಯೇರು: ಇಂತಹರ ನೆನಹು ನನೆಕೊನೆಯೇರಿ ದ್ವಾರಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ನಲಮು. ೭೦-೯). [ನನೆಕೊನೆ + ಏಱು₁ (<ಏಱ್₁)]

ನನೆಕೊನೆವೋಗಿಸು (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು; ಹರ್ಷಪಡಿಸು: ವನದೊಳು ಚರಿಸಿ ವಸಂತನಾ ವನವ ಭೋಂಕನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಭರಚ. ೨೦-೧೩). ೧, ೨: ಮನಸಿಜಕಲ್ಪಲತಾನಂದನಮೆನೆ ಬಿಂಕಕ್ಕೆ ಕೊಂಕಿದಬಳಾಜನವಂ ನನೆಕೊನೆವೋಗಿಸುತಿರ್ಪುದು ಮನುಜಮನೋಭವ ಭವದ್ವಿಲಾಸವಸಂತಂ (ಯಶೋಚ. ೩-೩). [ನನೆಕೊನೆವೋಗು + – ಇಸು₃]

ನನೆಕೊನೆವೋಗು (ಕ್ರಿ). ೧. ಚಿಗುರು; ಪಲ್ಲವಿಸು; ಅಂಕುರಿಸು: ನನೆಕೊನೆವೋಯ್ತು ತನ್ನ ನನೆಯಿಂ ಮುದವಂರ್ವಿಗೆ ತನ್ನ ಪುಷ್ಪದಿಂ ಮನಸಿಶಯಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗವಿ. ೧೪-೬೨): ಮನಸಿಜಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇಟಿನೆ ರಂಜಿಸಿದತ್ತು ಮಾಮರಂ (ದಶಕು. ೪-೬೭); ಬೀದಿ ವರಿದುದು ಬಿಂಕ ನನೆಕೊನೆವೋದುದಾಶಾಬೀಜ ಲಜ್ಜೆಯ ಹೋದ ಮೂಗಿಗೆ ಕದಪ ಹೊಯ್ದನು (ಕುವ್ಯಾಶ. ೧-೨೫); ನನೆಕೊನೆವೋದ ನವಾವ್ರದ ನೆಳಲೊಳ್ ಮನವಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭೂವರನು (ಜಯುಕಾ. ೯-೪೧). ೨. ಉಬ್ಬು; ಉತ್ಸಾಹಿಸು; ಹಿಗ್ಗು; ಸಂತೋಷಗೊಳ್ಳು: ಅಂತು ಮೂರ್ಧಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಟ್ಟು ಸಂಜಯನಿರವಂ ತತ್ಪುರಿಜನಂ ಕಂಡು ಪೇಟೆ ಗಾಂಧಾರಿ ಮನದೊಳಳ್ಕಿ ಬಳ್ಕಿ ನನೆಕೊನೆವೋಗಿ (ಗದಾಯು. ೩-೭೭ ವ); ಪುತ್ರದೋಹಳದಿಂ ಸಮನಿಸಿದುದ್ದೀಪನಭಾರ[ವ]ವೆಂಬವರ್ದಿನ ಮಟಿಯಿಂ ಮಡಲ್ತು ನನೆಕೊನೆವೋಗೆ (ಅರ್ಧನೇ. ೧-೯೨ ವ); ತನತನಗುರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ ಹಂಪೆಯಾಳ್ದನೇ (ಪಂಪಾಶ. ೭೮); ಅನುಪಮಚಿಧ್ವನಾರ್ಯರುಗಳ್ ಪಿರಿದುತ್ಸವದಿಂದೆ ಬಂದು ತಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆ ನೋಡಿ ಚಿತ್ರದೊಳ್ ನನೆಕೊನೆವೋಗಿ (ರಾಜಶೇ. ೪-೮೩); ನುಡಿಗಬ್ಬದ ಗಬ್ಬ ದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೫೨-೬).

[ನನೆಕೊನೆ + ಪೋಗು₁]

ನನೆಗಣೆ (ನಾ). ಹೂವಿನ ಬಾಣ; ಪುಷ್ಪಬಾಣ; ಹೂಬಾಣ: ಅಂತು ತಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆತಂದರ್ ಸಂತಸದೆ (ಪಂಪಭಾ. ೯-೧೦೧); ಬಾಲೆಯ ಕಡೆಗಣ್ನೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಂ ಪೀಲಿಯ ಕಣ್ಣಿಂಬಂ (ಪಂರಾಮಾ. ೫-೪೪); ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳದಂತೆವೊಲಿರ್ದುದಚ್ಚ ಮಿಂಚಿನ ಸುಲಿಪಲ್ಗಳ್ (ಅರ್ಧನೇ. ೨-೧೪); ನನೆಗಣೆ ನಡುಗುಂ ಕಾಮಿಗಳನೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ ನನೆಯ ಮೊನೆಯಂಬು ಮಲರಲಗಿನಂಬುಮಾ ಬಸದೊಳಂರ್ಚಿ ನೋಯಿಪುದು ದಿಟಂ (ವರ್ಧಪು. ೧೧-೨೬); ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪವಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ); ಜಕ್ಕುಲಿಪ ಮನದ ನನೆಗಣೆಯನರಸಿಗೆ ನೋಡೆ ಸಕ್ಕ ಸಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಚ್ಚಿದೆರಳೆಗಣ್ಮರಲ ಪೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೬೭). [ನನೆ₃ + ಕಣೆ₁]

ನನೆಗಣೆಗೊನೆ (ನಾ). ಹೂಬಾಣಗಳ ತುದಿ; ಪುಷ್ಪಬಾಣಗಳ ಮೊನೆ: ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಕುರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯುಕಾ. ೪-೪೩).

[ನನೆಗಣೆ + ಕೊನೆ₂]

ನನೆಗಣೆದೊಡು (ಕ್ರಿ). ಪುಷ್ಪಬಾಣವನ್ನು ತೊಡು; ಹೂಬಾಣವನ್ನು ಹೂಡು: ಕವಿದೆನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).

[ನನೆಗಣೆ + ತೊಡು₁]

ನನೆಗಣೆಯ (ನಾ). ಹೂವಿನ ಬಾಣಗಳನ್ನು ಹೊಂದಿದವನು; ಕಾಮ; ಮನ್ಮಥ: ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ಕಯನಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜಚ. ೨-೭೩): ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಕಾ. ೧೩೭); ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲು ಗಾಱನೆ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಸಾಕ್ಕಥಾ. ೨-೨೫); ನನೆಗಣೆಯನ ನೇಹದ ಜಾಳವೊ ಪೇಳೆನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಭದೇ. ೪-೧೯). [ನನೆಗಣೆ + – ಅ₇]

ನನೆಗಪ್ಪಡ (ನಾ). ತೊಯ್ದ ವಸ್ತ್ರ; ಒದ್ದೆಯಾದ ಬಟ್ಟೆ: ಮನಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದಾ ನನೆಗಪ್ಪಡ ಮನುಟಿದು ಪೊಸಸೀರೆಯಂ ನಿಱಿವಿಡಿದಿಟ್ಟು (ರಾಮಾಶ್ವ. ೧೨೪-೨).

[ನನೆ₁ + ಕಪ್ಪಡ]

ನನೆಗುದಿ, ನೆನೆಗುದಿ (ನಾ). ೧. ಅರ್ಧ ಬೇಯಿಂವುದು; ಹೆಚ್ಚಾಗಿ ನೆನೆದಂ ಪೂರ್ತಿ ಬೇಯಂದಿರುಂವುದು: ಹೊತ್ತುವುದು ಸರಿಯುಹುದು ನನೆಗುದಿಯುಹುದು . . . ಒಣಗಿಹುದು ದೋಷಮಶನಕ್ಕೆಂಟು ತೆಱನಪ್ಪುದು (ಸೂಪಶಾ. ೩-೧). 'ನೆನೆಗುದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚಂ; ತಳಮಳ: ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

ನೆನೆಗುದಿಗೆ ಬೀಳು = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು: ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಿಟ್ಟಿ ಕಂಗಾಲಾದನು (ಗಂಮಾಯಿ. ೯೯): ಸದ್ಯದ ಪುಟ್ಟಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತಂ (ಸ್ಕೂಲವಿ. ೩೯); ಆಮೇಲೆ ವಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜಂ ಸೇರಿದ್ದು (ದಾಸಹು. ೮೪).

[ನನೆ₁ + ಕುದಿ₃]

**ನನೆಗುದಿಗೊಳ್** (ಕ್ರಿ). ತಳಮಳ ಹೊಂದು : ಮನಸಿಜಕರೇಂದ್ರಕಟದೊಳ್ ಸೊನೆ ತೊಟ್ಟನೆ ಪುಟ್ಟುವಂತೆ ವಕುಳಕ್ಕೆ ಪಸುರ್ಗನೆ ಪುಟ್ಟೆ ಬಿರಿಯಯೆರ್ದೆಗಳ್ ನನೆಗುದಿ[ಪಾಠಾಂ. ಡಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೫-೧೬). [ ನನೆಗುದಿ + ಕೊಳ್$_1$ ]

**ನನೆಗೈದುಗಾಱ** (ನಾ). ನನೆಯೆಂಬ ಆಯುಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಱನೆಂದೆನಿಪ ಧೀವರ ದಿವಿಜ ದನುಜ ಮನುಜರ ಧೈರ್ಯಮೆಂಬ ಮತ್ಸ್ಯಂಗಳಂ ತನಗೆ ವಸಮಾಡಿಕೊಳಲು (ಸೌಂದಪು. ೧೨-೩೩). [ ನನೆ$_3$ + ಕೈದುಗಾಱ (<ಕೆಯ್ದುಗಾಱ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂಡನುಂಡು ನನೆಗೊಂಬುಗಳಂ ಮೊರೆದೆಟ್ಟ ಭೃಂಗರಝಂಕಾರಮೆ ಮಾಱ್ಪುದಾರ ಬಗೆಗಂ . . . ಹರ್ಷಭಾರಮಂ (ಪಂರಾಮಾ. ೧-೧೧೮) ; ನನೆಗೊಂಬಂ ನೀಳ್ಕೆ ಚಂದ್ರಾತಪಮ ಪುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ៦-೭೬) ; ನನೆಗೊಂಬಾಣತಿಮಾಡಿ ಪಾಡುವಪೊಲಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೧೦-೩೧). [ ನನೆ$_3$ + ಕೊಂಬು$_1$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ತಿರಿ : ತೆಗೆದು ನನೆಗೊಯ್ದು ಬಿಡೆ ಮೇಲೊಗೆವೆಳದಳಿಗೊಂಬು ಪೋಲ್ತುದಾ ಪೂವಿನ ಸೂಱಿಗೆ ತೊವಲಂ ಪಿಡಿದು ಮದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯ ಕೈಯಂ (ಚಂದ್ರಪು. ೭-೧೦೦). [ ನನೆ$_3$ + ಕೊಯ್ ]

**ನನೆಗೋಲ್** (ನಾ).=ನನೆಗಣೆ : ನನೆಗೋಲ್ ನಟ್ಟು ಕೊನರ್ತಪೊಲ್ಪಳಕ ಮಣಿಮೃತ್ತಲ್ಲಿ ರಕ್ತಾಂಬುಗಳ್ ಪನಿವಂತೆರ್ದುವು ಘರ್ಮವಾರಿ (ಲೀಲಾವ. ೩-೫೪) ; ಮಿಸುಪೆನ್ನಯ ಪುರ್ವಿನ ಕರ್ವುವಿಲ್ಲ ನೋಟದ ನನೆಗೋಲ ಲೀಲೆಯೊಳೆ ಸೋಲಿಸುಮೆ ಜಿತಕಾಲಶೂಲಿಯಂ (ಗಿರಿಕ. ೭-೭೬) ; ನನೆಗೋಲ್ಕಬ್ಬಿನಬಿಲ್ಮದಾಳಿಕುಳಲೇಖಾಮೌರ್ವಿಯೆಂಬರ್ಮನೋಜನ ಬಿಲ್ಲಂ (ಅನಂಪು. ೯-೧೧) ; ಜೊನ್ನೊಡಲಂ ನಿಮಿರ್ಚಿದಪನಗ್ನಿಯ ತಣ್ಗದಿರಿಂದ ಮೋಹೊ ನೀನುಣ್ಪನೆಗೋಲ್ಗಳಂ ಸಿಡಿಲ್ಗೆ ಸಾಟಿಯನಾಗಿಪೆ ಪಂಚಸಾಯಕಾ (ಶಾಕುಂತ. ៩೨-೫೭). [ ನನೆ$_3$ + ಕೋಲ್$_1$ ]

**ನನೆಗೋಲ** (ನಾ). =ನನೆಗಣೆಯ : ನನೆಗೋಲನಂಪಟಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂಜಿ ತಾಪಸರೆಲೆವನೆಗಾತಿಯರನಪ್ಪಿದರು (ಮೋಹತ. ೭-೧೫) ; ವಿನಯದಿ ಮಾತಾಡು ಖಳರಾಯ ನಿನ್ನಯ ತನಯಾಳಿಗೋಸುಗ ಬಂದ ಮನೆಯಾಳಿಯನ ಕೂಡೆ ಮಚ್ಚರವೇಕೆಂದು ನನೆಗೋಲನಾತ್ಮಜ ನುಡಿದ (ಮೋಹತ. ೩೫-೨೮). [ ನನೆಗೋಲ್ + – ಅ$_7$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗುಳದಾಳಿ, ಅರಿಷಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಜಾ. ೦೨೨). [ ನನೆ$_3$ + ದಂಡೆ$_1$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗಂಚ್ಚ : ನೆಱೆ ಬಸಂತನೆ ಮದನಶರಕೆಂದೆಱಕದೋವಿದ ಚೆಂದಳಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಸಾಳ್ವಭಾ. ೨-೩). [ ನನೆ$_3$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತಿಂ (ಗಿರಿಕ. ೪-೨೦ ವ). [ ನನೆ$_3$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದು; ಮುಗುಳು ಬಿಡು: ಇದಿರೊಳ್ ನನೆದೋಱು ವಸಂತದೂತಿಯೆನೆ ತಾನೆ ನೆಗಟ್ಟ ಮಾಧವಿಯೆನೆ ಸಂದದಿರ್ಮುತ್ತೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱಿದಪುವೇ (ಆದಿಪು. ೧೧-೦೦೮) ; ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸನ್ಮಾನಂಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಸಂ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೭) ; ಕಡವಲಪೊತ್ತು ಪೊಲ್ಲೆ ಮುಗುಳ್ದತ್ತು ಪೊದಟ್ಟು ಪೂಲಂ ಪಸುರ್ತರ್ಮಾಸಡಿ ಕುಡಿಯೋಱಿ ಮುತ್ತೆ ನನೆದೋಱಿ (ಕುಸುಮಾ. ೭-೧೩) ; ಮರುಗ ಮೊನೆ ನನೆದೋಱಿ ಸುರಗಿ ಜಾಜಿಯ ನನೆಗಳರಳಿ ಪರಿಮಳದಲೆಸೆಯಲ್ಕೆ (ಹಠಕಾ. ៩-೩೨) : ಎಲೆ ಸುಲಿದೆಡೆಗಳ [ಕಣ್]ಕಣ್ಗೆಲೆಯೆಡೆ ಗಂಟೊಡೆದು ಮೊನಸಿ ನನೆದೋಱಿ[ಪಾಠಾಂ. ಕೊನೆದು] ಮುಗುಳ್ತಲರ್ದು ಮಱಿದುಂಬಿಗಂ ತಂಬೆಲರ್ಗಂ ಮುದ್ದಾದುವಲ್ಲಿ ಪೊಸಮಲ್ಲಿಗೆಗಳ್ (ಮಹೋಜ. ೪-೫). [ ನನೆ$_3$ + ತೋಱು ]

**ನನೆನಾಱು** (ಕ್ರಿ). ಹೂವಿನಿಂಪ ಗವಂಗವಿಸಂ,-ಸುವಾಸನೆ ಬೀರಂ : ನನೆಯಳೆಗಂಪನೆತ್ತಿಯುಮಣಂ ನನೆನಾಱದರಲ್ದನೇಕಕೋಕಸದವನಂಗಳೊಳ್ ಸುೞಿದು ತಣ್ಣಸಮಾಗದೆ . . . ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪). [ ನನೆ$_3$ + ನಾಱು$_1$ ]

**ನನೆಬಿಜ್ಜಣಿಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಿಗೆಯ ತಣ್ಣೆಲರಿನಾಱದುಯೆನ್ನ ತನುತಾಪ (ಹಠಕಾ. ಪರಿ. ೨೦೦). [ ನನೆ$_3$ + ಬಿಜ್ಜಣಿಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಮುಗುಳ್[ಪಾಠಾಂ. ಗ]ಳ್ ಕೊನೆಮುಗುಳ್ಚಿರಿದಿರೆ ಮುಗುಳ್ಗಳಂ ತನಿಗಂಪು ತೀವಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿವುತಂ ನಡೆತಂದು (ಪುಷ್ಪರ. ಹ. ៩೩೩-೩೭) ; ನನೆಮುಗುಳ್ ನನಕುಸುಮ ನಸುಗಾಯ್ . . . ಕೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ಮೆಸೆದುದಿದಿರಲಿ ಕಪಿಕುಲೇಶ್ವರನ (ತೊರರಾ. ೫-೩ ೧೪). [ ನನೆ$_3$ + ಮುಗುಳ್$_2$ ]

**ನನೆಮೊನೆ** (ನಾ). ಮೊಗ್ಗಿನ ತುದಿ,-ಅಗ್ರಭಾಗ : . ತೋಳಿನೊಳೊಱಗಿ ದಿನಿಯಳ ಕರ್ಣಪೂರದೊಳೆಱೆಯ ಕತ್ತುರಿರಸವ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೦೭-೦).

ನನೆಮೊನೆಯಾಗು = ಚಿಗುರು : ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೦೩೫). [ ನನೆ$_3$ + ಮೊನೆ$_1$ ]

**ನನೆಯಂಬ** (ನಾ). = ನನೆಗಣೆಯಂ : ನನೆಯಂಬಂ ತಾವರೆವೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ವನಿತೆಯ ಸಬಾಷ್ಪಲೋಚನ ಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ៩-೦೬) ; ಹೂವಿನ ಬಿಲ್ಲನೊಚ್ಚತಂಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಱಿಯರಿಂ ನನೆಯಂಬಂ ಕಯ್ಗೆಯ್ವ ಸವಿನೋಟದ ಸಾಧಾರಣೆಯರಿಂ (ಗಿರಿಕ. ೭-೦೦ ವ) ; ನೀನೀ ಪೂವಿನ ಪೊಬಲೊಳ್ ನನೆಯಂಬನೆಂಬರಸಾದೆ (ಕಬ್ಬಿಕಾ. ៩೦೯) ; ಸೊನೆವೆಮರಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಠವ ವಿನಯದೆ ಕೈಕೊಂಡು ಬಂದಳು ಸ್ಮರವರತನಯನ ಶಯನಸ್ಥಳಕೆ (ಮೋಹತ. ೨೯-೫೬). [ ನನೆಯಂಬು + – ಅ$_7$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳೆ ಪೂಣ್ದಪನ ನಿಬರುಮಂ ಕಿಱಿದು ಬೇಗದಿಂ ಹರಿಗನದರ್ಕೆನಗೆಡೆವೇಟ್ಟುಮೆ ಎಂಬವೊಲನಿಬರುಮಂ ಪೂಣ್ದನ[ತನು] ನನೆಯಂಬುಗಳಿಂ (ಪಂಪಭಾ. ៩-೫೨) ; ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ (ಗದಾಯು. ೦-೭) ; ಮನೋಜಂ ನನೆಯಂಬಿನಿಂದಿಸೆ ತದಸ್ತ್ರಾಘಾತಜಾತಾನಿಲಂ ನಿಮಿರ್ದೋರೆಂತಳುರಲ್ಕೆ ಹೃತ್ಕುಟಿಯ ನಾ ಕಂದರ್ಪರಾಜೇಂದ್ರ,ನಾ

(ಕುಸುಮಾ. ೧೧-೧೧೦) ; ಧೈರ್ಯದ ಜೋಡ ತೊಟ್ಟದಿರಾಗಿ ನಿಲೆ ನನೆಯಂಬು ನಾಟುವುವೆ (ಕುವ್ಯಾಅ. ೮-೩೫) ; ಎನ್ನ ನನೆಯಂಬಿನ ಮೊನೆಗೆ ಸುಗಿದಹಲ್ಮೆಯಿಂ ನೀಮೆ ಶರಣ್ಬೊಕ್ಕುದೇನಱಿಯದುದೇ ! (ರಾಮಾಶ್ವ. ೫೬-೧೦). [ ನನೆ$_3$ + ಅಂಬು$_2$ ]

**ನನೆಯಕ್ಕಿ, ನೆನೆಯಕ್ಕಿ$_1$** (ನಾ). ೧. ನೆನೆಯಿಸಿದ ಅಕ್ಕಿ ; ನೀರಿನಿಂದ ಒದ್ದೆ ಮಾಡಿದ ಅಕ್ಕಿ : ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ . . . ನನೆಯಕ್ಕಿ ಕಡಲೆ ಪಣ್ಯಾರದಿ[ಪಾಠಾಂ. ನನೆಯರಳ್ದರಳುಂಬ ಪುಣ್ಯಹರ] ನಿಖಿಲಾರ್ಚನೆಯ ವಸ್ತುಗಳ ಸಾರ್ಚಿದರು (ಮೋಹತ. ೧೮-೮೩). ೨. ಶುಭಕಾರ್ಯಗಳಲ್ಲಿ ಆಶೀರ್ವಾದಕ್ಕಾಗಿ ಉಪಯೋಗಿಸುವ ಅಕ್ಷತೆ : ತಳಿರ ತೊಟ್ಟಿಲೊಳಿಟ್ಟು ಸಣ್ಣ ನನಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನವುನಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (ಗಿರಿಕ. ೨-೭೧ ವ). ನೆನೆಯಕ್ಕಿ$_1$ : ೧. ನೆನೆಯಕ್ಕಿ ನೆನಗಡಲಿ ಗೊನೆಯ ಬಾಳೀಹಣ್ಣು . . . ತಗೊಂಡು ಗಂಗವ್ವ ಪೂಜೆಗ್ಹೈದಾರ (ಲೋಕಗೀ. ೧೩೩). 'ನೆನಗಡಲೆ' ಪರಾ.

[ ನನೆ$_1$ + ಅಕ್ಕಿ$_1$ ]

**ನನೆಯಿಕ್ಕು, ನೆನೆಯಿಕ್ಕು** (ಕ್ರಿ). ತೋಯಿಸು; ಒದ್ದೆ ಮಾಡು; ನೆನೆಹಾಕು : ನನೆಯಿಕ್ಕಿದ ಕಡಲೆಯ ತುರಗನಿಕಾಯಕ್ಕಱಿದು ಕಟ್ಟುವುದು (ಅಶ್ವಶಾ. ೭-೫೭). ನೆನೆಯಿಕ್ಕು : ಗರುಗದ ಸೊಪ್ಪಿನ ರಸದಲ್ಲಿ ಎರಡು ವರಹ ತೂಕ ಚೂರ್ಣವ ನೆನೆಯಿಕ್ಕಿ ಬೆಲ್ಲವ ಬೆರೆಸಿ ಕೊಡಲು ಪಾಂಡುರೋಗ, ಕ್ಷಯರೋಗ ಪರಿಹರ (ವೈದ್ಯಸಾ. I, ೩೩೭). [ ನನೆ$_1$ + ಇಕ್ಕು ]

**ನನೆಯೆಸಟ್** (ನಾ). ೧. ಹೂವಿನ ಎಸಳು,-ದಳ. ೨. ಹೂವಿನ ಚಿತ್ರ, -ಕಸೂತಿ,-ನಕ್ಷೆ : ನನೆಯೆಸಟಿಂದಮಾದ ಗುಟವುಂ ಪೊಳೆಯುತ್ತಿರೆ ನೀಳ್ಪುವೆತ್ತ ಪೂವಿನ ಪೊಸಟಿಕ್ಕೆಯುಂ ಮಿಳಿರೆ . . . ಮೆಲ್ಲನೆ ನಡೆತಂದು ವಂದು ಪೊಸಮಾವಿನಿಪ್ಪುಗ್ಗಡದಗ್ಗದಾನೆಗಳ್ (ಕಬ್ಬಿಕಾ. ೨೧೧).

[ ನನೆ$_3$ + ಎಸಟ್ ]

(ಕ್ರಿ). ಹೂವು ಬಿಡು ; ಹೂವು ತುಂಬು : "ನನೆತುದೆನೆ ನನೆಯೇಱಿದುದು" (ಶಬ್ದಮಂ. ೨೨): "ನನೆತುದು ನನೆಯೇಱಿದುದೆಂದೆನುತಂ" (ಕವಿಕಂ. ೭೭) ; ನನೆಯೇಱಿದ ಮಲ್ಲಿಗೆಯಂತೆ ಪೂರ್ಣಚಂದ್ರನ ಸಿರಿಯಂತೆ ... ರುದ್ರಭಟ್ಟನ ಕವಿತಾರಸಂ ಮನಮನಿರ್ಕುಱಿಗೊಳ್ವುದು ಸಜ್ಜನರ್ಕಳಾ (ಜಗವಿ. ೧-೧೬) ; ವಿಾಱ್ ಮುಗಿಲಿದಿರೇೞ್ ನಿಶಿ ಹರುಷವೇೞ್ ನನೆಯೇೞ್ ಕುಂದವ್ರಜಕೆ ಕಡದಲರ ಸಿರಿಯ ಸೊಂಪೇೞ್ (ಸಾಳ್ವಭಾ. ೨೬-೧೮); ಪಳಿಯೆಲೆಯಿಕ್ಕಿ ಸಣ್ಣನನೆಯೇಱಿದ ಪಾಟಳಿಪೂವನಾಂತು ಕಂಗೊಳಿಸುವ ಕರ್ಣಕಾರ ಮಲರ್ದೀವಿದ ಮುತ್ತುಮದೆತ್ತ ನೋೞ್ಪೊಡಂ (ರಾಜಶೇ. ೯-೪೭) ; ಬನಂ . . . ನನೆಯೇಱಿದ ಸುರಯಿಯಿಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ (ರಾಮಾಶ್ವ. ೫೩-೨೨).

[ ನನೆ$_3$ + ಏಱು$_1$ ( < ಏಱ್$_1$ ) ]

**ನನೆಯೊತ್ತು** (ಕ್ರಿ). ೧. ಅರಳು ; ವಿಕಾಸವಾಗು ; ಮೊಗ್ಗು ಹೊರಬರು : ಶಿವಾಚಾರಲತೆ ನನೆಯೊ[ಪಾಠಾಂ. ವ]ತ್ತೆ (ಸೋಮಚ. ೧-೭೩) ; ನನೆಯೊತ್ತೆ ವಿಸುಪ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಾಭಿನವನದಿ ಸುರಭಿಗಂಧದಿನೆನಸುಂ ತೀವಿದೊಡೆ ತೀವುವುದು ತೊದಳಂಟೇ (ಪಾರ್ಶ್ವಪು. ೯-೫೬). ೨. (ಆಲಂ) ಸಂತಸಗೊಳ್ಳು : ಧರ್ಮಜನು ಸುರಮುನಿ ಸೂಕ್ತಿಸುಧೆಯಭಿಷೇಕದಲಿ ನನೆಯೊತ್ತಿದಂತಃಕರಣನರಮನೆಗಾಗಿ ನಡೆತಂದು (ನಿಭಾಗ. ೧-೯-೪೫). [ ನನೆ$_3$ + ಒತ್ತು$_1$ ]

**ನನೆಲತೆ** (ನಾ). ಹೂವು ಬಿಟ್ಟ ಬಳ್ಳಿ ; ಹೂಬಳ್ಳಿ : ಚಾಮರದಿಂ ಬೀಸುವ ಬೀಸುಗಾಳಿಯ ತಣ್ಪಿನಿಂ ತೊಯ್ದು ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು (ಲೀಲಾವ. ೪-೧೭ ವ). [ ನನೆ$_3$ + ಲತೆ ]

**ನನೆವಾಸು$_1$** (ನಾ). ತೊಯ್ದ ಹಾಸಿಗೆ ; ಆರ್ದ್ರವಾದ, ತಂಪಾದ ಹಾಸಿಗೆ : ತನುವಲ್ಲದತನುತಾಪಂ ತನುವಂ ಸುಡೆ ನಿಲಿಸಲೆಂತುಮಾಱದೆ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩). [ ನನೆ$_1$ + ಪಾಸು$_2$ ]

**ನನೆವಾಸು$_2$** (ನಾ). ಹೂವಿನ ಹಾಸಿಗೆ; ಪುಷ್ಪಶಯ್ಯೆ : ನನೆವಾಸನೆ ಮುತ್ತಿನ ಪಸೆ ಮನಸಿಜನೆನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). [ ನನೆ$_3$ + ಪಾಸು$_2$ ]

**ನನೆವಿಲ್** (ನಾ). ಹೂವಿನ ಬಿಲ್ಲು ; ಹೂಬಿಲ್ಲು ; ಪುಷ್ಪಚಾಪ : ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು (ಮಲ್ಲಿಪು. ೧-೧೯) ; ನನೆವಿಲ್ಲನೆತ್ತುವಂತೆ ನನೆಯ ನಿಡಿಯ ದಂಡೆಗಳಂ . . . ಎತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮಮಾಲೆಗಳಂ ಸೌಂದರ್ಯಧನದಿಂ ಮಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ (ಲೀಲಾವ. ೨-೨೬ ವ) ; ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುವೊಯ್ದಿಂದ್ರ ಕೋದಂಡಮುಂ ಕೊಂಡು . . . ಮೊಲ್ಲೆಯ ನನೆಗಣೆಯುಂ ತೂಗುತ್ತುಂ ಕಂತುವೀಬಂದಂ (ಜಗವಿ. ೪-೨೧) ; ನನೆವಿಲ್ವಿನ್ನಣೆಯೋಪಳೊರ್ವ ವಧುವಾ ಕಾಂತಾಳಕಚಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಾಱೆತ್ತು ತಾಂ ಪಿಂಡಿದಳ್ (ಉದ್ಭಟ. ೮-೨೦) ; ನನೆವಿಲ್ಗಾಱಿಡಿವೆದೆಯೇಱುವ ಪೋಲ್ವ ನಿತಾಮಣಿಯಿಂತೊಪ್ಪುವ ರೂಪಿಗೆ ಮಿನುಗುವ ಮಾಱುಂಜವ್ವನವೇೞ್ ವಿರಾಜಿಸುತಿರೆ (ಜಯಕಾ. ೩-೪೪) ; ನನೆವಾಸೆನೆ ಮುತ್ತಿನ ಪಸೆ ಮನಸಿಜನೆನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೭೧). 'ನನೆವಿಲ್ಲ' ಪರಾ.

ನನೆವಿಲ್ಲ ಬಲ್ಲಹ = ಹೂಬಿಲ್ಲಿಗೆ ಒಡೆಯನಾದವನು ; ಪುಷ್ಪಬಾಣ ಪ್ರಯೋಗದಲ್ಲಿ ಶೂರನಾದವನು ; ಕಾಮ ; ಮನ್ಮಥ : "ನನೆವಿಲ್ಲ ಬಲ್ಲಹನೆನಲ್ ಪೂವಿಲ್ಲ ಕಾಮಂ" (ಕರ್ಣಾನಿ. ೮) ; ಆವನ ಪಜ್ಜೞಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನೀಗಾವಗಮೆನ್ನ ಜಾಣ್ಣುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹಂ (ಕಬ್ಬಿಕಾ. ೧) ; ಜಗದ್ವಳಯಮನದಟಲೆದು ನಲಿದು ಕೋಟಲೆಗೊಳಿಸುವ ನನೆವಿಲ್ಲ ಬಲ್ಲಹನ ದಿಗ್ವಿಜಯಕ್ಕಾಗಿ . . . ಬೆಳಗುವಚ್ಚಬೆಳ್ದಿಂಗಳ್ ಪಿರಿದುಂ ಪೆರ್ಚಿ ಬಿಚ್ಚದೆ ನಿಬಿಡವಾಗಿ ಬಿಡದಡರ್ದು ಕೆದಱಿ ನಾಂದು ಪೊದಱುಗಟ್ಟಿ ಪರಕಲಿಸಿ ಪಸರಿಸುತ್ತುಮಿರೆ (ಚಾಧಪು. ೧೫-೫೦ ವ) ; ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪು ಮನೋಜ ನೋಜೆ ನೋಡಿದು ನನೆವಿಲ್ಲ ಬಲ್ಲಹನ ಚೆಲ್ವಿದು . . . ಎಂದೆನಿಸಿರ್ದುದು ರೂಪು ನೀೞಿಯಾ (ರಾಜಶೇ. ೭-೬೩). ನನೆವಿಲ್ಲ ಬೀರ = ನನೆವಿಲ್ಲ ಬಲ್ಲಹ : ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱಿ ತಲೆದೂಗಿಸಿದಂ ನನೆವಿಲ್ಲ ಬೀರನಾ (ಕಬ್ಬಿಕಾ. ೨೦೧). ನನೆವಿಲ್ಲಾತ = ಪುಷ್ಪಧನುಸ್ಸನ್ನುಳ್ಳವನು ; ಕಾಮ ; ಮನ್ಮಥ : ನನೆವಿಲ್ಲಾತನ ಮುಂತ್ಕಣ್ಣನ ತಕ್ಕಂ ನೋಡ ವೇಟ್ಕುಮೆಂದೊಲವಿಂದಂ ತನತನಗೆ ಬಂದು ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಿಕಾ. ೨೮೯). [ ನನೆ$_3$ + ಬಿಲ್$_2$ ]

**ನನೆವಿಲ್ಲ** (ನಾ). ೧. ಹೂವಿನ ಬಿಲ್ಲುಳ್ಳವನು ; ಕಾಮಂ ; ಮನ್ಮಥ : ನನೆವಿಲ್ಲನೆಸೆವ ಬಿರಿದಿನ ನಾಟಕವ ಬಿಂಕವನೆ ಕಂಡೆನೆಂದು ಕಳವಳಿಸಿ ಮಂಗಳೆ ತನ್ನ ತನುಜೆಯಂ ಪಲ್ಲಕಿಯೊಳಿರಿಸಿ ಶಂಭುವನು ಬೀಳ್ಕೊಂಡು ಮನೆಗೆಯ್ತಂದಳು (ಸೌಂದಪು. ೮-೧೮) ; ಪೊಸ ಕಮ್ಮಂಗಳವೆಯ ತೆನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗದಿನವೞ್ಕೊಳ್ಳುಳ್ಳಿರ್ದಾಱಿ ವಸುಳೆಗಳು ಅನುವಂ ಪಡೆದುವು . . . ನನೆವಿಲ್ಲನ ಪಸುರ್ಗಾವಿನ ಮಿಗಸೊಕ್ಕಿನ ಪೊಸಮಿಂಟೆಯೆನೆ (ಜಯಕಾ. ೧-೩೯) ; ಖಳನೀ ನನೆವಿಲ್ಲಂ . . . ನಲ್ಲಂ ತೊಲಗಿದ ಪದದೊಳಗೆನ್ನೊಡಲಲ್ಲಿ ನಡುವವೊಲೆರಳ್ಕೆಯ್ಗಾಣಸಿ

ನಿಲ್ಲದೆ ಮನವನೆಸುತ್ತಿರ್ದಪನೆಂದಳ್ಕಿರಹಿಣಿ ಸಖಿಯೊಳ್ (ಉದ್ಭದೇ. ೯-೩೫).
೨. [ಜೈನ] ಬಾಹುಬಲಿ; ಕಾಮ: ಎತ್ತಿ ನೀನಣ್ಣನೊಡನೆ ಕಾದಿದಾಗ ತೊಂಭತ್ತಾಱುಸಾವಿರ ಹೆಣ್ಣ ಚಿತ್ತ ನೋಯದೆ ನವುಗೆಂಟುಸಾವಿರಕಳ ಲೊತ್ತಿದಿಹುದೆ ನನೆವಿಲ್ಲಾ (ಭರತ. ೫೦-೪೫). [ ನನೆವಿಲ್ + – ಅ₇ ]

ನನೆವೂ (ನಾ). ಬಿರಿದ ಹೂವು; ವಿಕಸಿತ ಕುಸುಮ: ತೋಳ ಮೊದಲ್ನನೆ ವೂವನೆತ್ತುವಂತಿರೆ ನನೆಯುಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಳಿಗಾರ್ತಿಯರ್ (ಮಲ್ಲಿಪು. ೩-೫೯). [ ನನೆ₂ + ಪೂ₂ ]

ನನೆವೂದುಱುಗಲ್ (ನಾ). ಅರಳಿದ ಹೂವುಗಳ ಗೊಂಚಲು.-ಗುಚ್ಛ: ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫).
[ ನನೆವೂ + ತುಱುಗಲ್ (< ತುಱುಂಗಲ್) ]

ನನೆವೆರಸು₁ (ಕ್ರಿ). ಮೊಗ್ಗುಗಳಿಂದ ಕೂಡಿರು; ಪುಷ್ಪಭರಿತವಾಗಿರು: ನನೆವೆರಸಿದಸುಗೆದಳಿರುಳ್ಳುಡೆಯ ವೇಣುವಿಂ ಜನಿಸಿದ ನವೀನಮುಕ್ತಾಫಲದ ಮೂಗುತಿಯು . . . ನಿತಂಬಿನಿಯರತಿಹರುಷದಿಂ ರಂಜಿಸಿದರು (ಸೌಂದಪು. ೧೮-೧೯). [ ನನೆ₃ + ಬೆರಸು₁ ]

ನನೆವೆರಸು₂ (ಅ). ಹೂವುಗಳಿಂದ ಕೂಡಿಕೊಂಡು; ಪುಷ್ಪಸಹಿತವಾಗಿ: ನನೆವೆರಸು ಗುಜ್ಜುಮಾವಿನ ಕೊನರ್ಗಳನುಡಿದುಡಿದು ನೀಡೆ ಬೇಟದ ಪಿಡಿಯೇಂ ಮನವೊಸೆದು ಮೇವುತಿರ್ದುದೊ ವನಕರಿ ಪರಿದಂತೆ ದಂತಹಸಿತ ಕಟಾಕ್ಷಂ (ಅರ್ಧನೇ. ೫-೯೪); ನನೆವೆರಸುಟ್ಟು ಮಾಂದಳಿರಿನೊಪ್ಪಿರೆ . . . ಓಪನಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ (ಲೀಲಾವ. ೮-೩೦). [ ನನೆ₃ + ಬೆರಸು₃ ]

ನನೆವೆಱು (ಕ್ರಿ). ಮೊಗ್ಗುಗಳನ್ನು ಪಡೆ; ಮುಗುಳು ಬಿಡು: "ನನೆತುದೆಂದು ನನೆವೆತ್ತುದು" (ಕಶಸಾ. ೯-೧೮೯); ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮). [ ನನೆ₃ + ಪೆಱು₁ ]

ನನೆವೊಯ್ (ಕ್ರಿ). ೧. ಚಿಗುರಂ; ಪಲ್ಲವಿಸಂ: ತನಿಗರ್ಬಿನ ಸೋರ್ವ ರಸ ಪ್ರವಾಹದಿಂದಪೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರಂ (ಲೀಲಾವ. ೭-೧೩೪). ೨. ಉಂಟುಮಾಡು; ಹೊಮ್ಮಿಸು: ಪನಿಪುಲ್ಲಂಬು ಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದುಣ್ಮಿಸುತುಂ . . . ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೩). [ ನನೆ₃ + ಪೊಯ್₂ ]

ನನೆವೊಱೆ (ನಾ). ಹೂವುಗಳ ಭಾರ; ಪುಷ್ಪಭಾರ: ನನೆವೊಱೆಯಿಂ ಬಳ್ಕಿದ ಮಾವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತಂ ಪೂವಿನ ಬಿಲ್ಲನತನು ಜೇವೊಡೆದನುಗೆಯ್ದೇಱಿಸುವ ಚೆಲ್ವನೇಂ ಬೀಱಿದುದೋ (ಪಾರ್ಶ್ವಪು. ೯-೩೩). [ ನನೆ₃ + ಪೊಱೆ³ ]

ನನೆವೋಗು (ಕ್ರಿ). ಮೊಗ್ಗು ಬಿಡು; ಮೊಗ್ಗಾಗು: ಆಧೀಶವಚನಕದಂಬಕ ಮಂಬೊಂದು ತೆಂಕಣೆಲರೊಳ್ ನನೆವೋಯ್ತೆಂಬಿನವಾಕೆಯ ತನುಲತೆ ತುಂಬಿದುದತಿಬಹಳಪುಲಕವಿಪುಲಶ್ರೀಯಿಂ (ಆದಿಪು. ೭-೩೦).
[ ನನೆ₃ + ಪೋಗು₁ ]

ನನೆಸು, ನೆನಸು₁, ನೆನಸು₂ (ಕ್ರಿ). ಒದ್ದೆಯಾಗುವಂತೆ ಮಾಡು; ತೋಯಿಸು; ಆರ್ದ್ರಗೊಳಿಸು: ನಾರದ ಕಲಹತಾತ್ಪರ್ಯದೆ ತರಳ ಕುಮಾರನ ಕೊಂದೆ ನೀನೆನುತ ಮಾರಮಾತೃಕೆ ರುಕ್ಮಿಣಿ ಸತ್ಯಭಾಮೆ ಕಣ್ಣೀರಿಂದ ನನೆಸಿದರೊಡಲ (ಮೋಹತ. ೩೭-೩೦). ನೆನಸು₂: ಆಪ್ಲಾವ, ಆಪ್ಲವ, ಸ್ನಾನಂ-೩ ಸ್ನಾನದ ಹೆಸರು. ತಲೆ ಮುಂತಾದ ಸರ್ವಾಂಗವನ್ನು ನೀರಿನಲ್ಲಿ ನೆನಸಿ ತೊಳೆಯುವಿಕೆ (ಸಿದ್ಧಾಂತಿ. ೨೦೬). ನೆನಸು₂: ಭಟ್ಟನಿಯ ಕಣ್ಣುಗಳಲ್ಲಿ ನಾನು ಒಂದು ಅಪೂರ್ವಮಾಧುರಿಯನ್ನು ಕಂಡೆ . . . ಆ ದೃಷ್ಟಿ ನನ್ನನ್ನು ಅಭಿನವರಸದಲ್ಲಿ ನೆನೆಸುತ್ತಾ, . . . ಒಂದು ಅನನುಭೂತ ಜಗತ್ತಿಗೆ ಎಳೆದೊಯ್ಯಿತು (ಬಾಣಆ. ೩೦೪). [ ನನೆ₁ + – ಸು₁ ]

ನನೆಹ (ನಾ). ನೆನೆಯುವಿಕೆ; ಒದ್ದೆಯಾಗುವಿಕೆ; ತೇವಗೊಳ್ಳುವಿಕೆ: "ತೇಮ ಸ್ತೇಮ ಸಮುಂದನ ಈ ಮೂಱು ನನೆಹದ ಹೆಸರು" (ನಾಚಿರಾ. ೪).
[ ನನೆ₁ + – ಹ₂ ]

ನನ್ನಗ (ನಾ). ಒಬ್ಬಾತನ ಹೆಸರು: ನ × ಗರಮುಪ್ಪ ವಯಚಯನ್ ತುರಗಗೊಳ್ಕಾಗಿ ದುಗ್ಗದರಸನುಂ ತೊಡದಳ್ದು ವೇಳೆಯವನಾಳು × ಪಱಿಯುತ್ತುಂ ಬಪ್ಪುದ ನನ್ನಗನ್ನಾದೆ (ಸೌಇಇ. IX-1, ೩೨-೬; 923). [ ? ]

ನನ್ನಪ (ನಾ). ಒಬ್ಬಾತನ ಹೆಸರು: ಆಹವಶೌಣ್ಡವೀರನುದಾರಂ ಕಣ್ಣವ ಭಾರದ ನನ್ನಪನೃಪಂ ಮಹಸಾಮಂತಂ (ಎಕ. IX, ಚನ್ನಪ. ೧೪೦-೦೮; 1007). [ <ನನ್ನಿ? + ಅಪ (<ಅಪ್ಪ₁) ]

ನನ್ನಯ್ಯ (ನಾ). ಒಬ್ಬಾತನ ಹೆಸರು: ಶ್ರಿಮತ್ಕೆರ್ಮ್ಮನಂಗಳ್ಗೆ ವಿದ್ಯಾಧರಯ್ಯಂ ಬಿನ್ನಪಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೆರೆಯು ಪಡೆದು ಕೊಟ್ಟಂ (ಎಕ. III, ನಂಜನ. ೧೫೫-೫; 970).
[ <ನನ್ನಿ ? + ಅಯ್ಯ₁ ]

ನನ್ನಾನನ್ನಿ, ನನ್ನಾನಿನ್ನಿ (ನಾ). ಸಣ್ಣಸಣ್ಣದು; ಚೂರುಚೂರಾದುದು; ಪುಡಿಪುಡಿ: ಸನ್ನಾಹಭೇರಿಗಳುನ್ನಾದದಿಂ ದೆಸೆ ನನ್ನಾನನ್ನಿಯಾಗೊಡೆಯೆ ತನ್ನ ಮೋಹರಗೂಡಿ ಚೆನ್ನರಾಮುಗ ಶೌರ್ಯದುನ್ನತಿಕೆಯೊಳಿರ್ದ್ದನು (ಕುರಾಸಾಂ. ೦೩-೩೬); ಚೆನ್ನೆಯ ನಿಟ್ಟಿಸಿ ಕಾವನಂಬಿ ನನ್ನಾನನ್ನಿಯಾದರು ನೋಟಕರು (ರಾಮವಿ. ೭-೧೪೨). ನನ್ನಾನಿನ್ನಿ: ಬಿನ್ನಣದಿಂದೆಚ್ಚರು ರಿಪು ಭಟರೆರ್ದೆ ನನ್ನಾನಿನ್ನಿಯಪ್ಪಂತೆ (ಚಂಪ್ರಸಾಂ. ೮-೩೩).
[ ←ಹಿಂ. ನನ್ನಾ, ನನ್ಹಾ ]

ನನ್ನಾನಿನ್ನಿ 'ನನ್ನಾನನ್ನಿ' ನೋ.

ನನ್ನಾರಿ (ನಾ). ಒಂದು ಬಗೆಯ ಸಸ್ಯ; ಸೊಗದೆ: ಸುಗಂಧೀಬೇರು, ಸೊಗದೆಬೇರು, ನಾಮದ ಬೇರು, ನನ್ನಾರೀಬೇರು (ಪ್ರಜೀಗಿ. ೪೨-೮೪೦).
[ ದೇ.॥ ತಮಿ. ಮಲ. ನನ್ನಾರಿ ]

ನನ್ನಿ (ನಾ). ೧. ಸಹಜವಾದುದು; ವಾಸ್ತವವಾದುದು; ಸತ್ಯ; ದಿಟ; ನಿಜ; ನಿಶ್ಚಯ: "ಸತ್ಯದೊಳ್ ನನ್ನಿಯಕ್ಕುಂ" (ಕರ್ಣಾನಿ. ೫೦); "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೦೩೦); "ನಿಶ್ಚಯದೊಳಂ ನನ್ನಿಯೆಂದಕ್ಕು" (ಕಶರ. ೫೩); ನನ್ನಿಯನೀ ಪಲ್ಲವಮನೆ ಸನ್ನುತರೂಪಂ ವಿಪರ್ಯಯೋಪಮಮಕ್ಕುಂ (ಕವಿರಾ. ೩-೬೨); ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೬೪); ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ ನನ್ನಿ ಚಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ (ಗದಾಯು. ೫-೧೭); ಇನ್ನರ ನಂಡಿ ಕನಸಿನೊಳೇ ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕಡೆಯಂಟೇ (ಕಾದಂಪೂ. ೪೧೫); ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೬೦೩); ಐವಣ್ಣಪೆನ್ನ ಮನದ ನನ್ನಿಯ ನೆಲೆಯಂ (ಚಿಕವಿ. ೩-೯೭).
೨. ಸತ್ಯವಂತಿಕೆ; ಸತ್ಯಸಂಧತೆ: ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಪಡೆಮಾತಿನೊಳ್ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ (ಪಂಪಭಾ. ೦೩-೩೦೭); ನನ್ನಿ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೩-೧೦೭); ನನ್ನಿ ವಿನಯಂ ನಯಂ ಜಯಮುನ್ನತಧೃತಿ ಸತ್ವಮೆಂಬ ರಾಜಗುಣಂಗಳ್ ನಿನ್ನೊಳ್ ನೆಲಸಿದುವಿನ್ನುಂ ಮುನ್ನಂ ನಿನ್ನನ್ನರೊಳರೆ ರಾಜಕುಮಾರಾ (ಲೀಲಾವ. ೯-೩೭); ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದನುತ್ತಮದ್ವಿಜರು

ಕೊಂಬುದೆಂದು (ಹಡಕಾ. ೧೧-೨೧). ೩. ಅಕ್ಕರೆ ; ಪ್ರೀತಿ ; ವಿಶ್ವಾಸ : ಎನ್ನ ಭವತಿಮಿರಭಾನುವೇ . . . ಎನ್ನ ನನ್ನಿಯೆಯೆನ್ನ ಚೆನ್ನಿಗನೆಯೆನ್ನ ಗತಿಯೇ ಮತಿಯೇ ಧೃತಿಯೇ ಪತಿಯೇ (ಪದ್ಮರಾ. ೭-೩೯) : ತನ್ನರಸಿ ವರಚಂದ್ರಮತಿಗೆ ವಿಭಿನ್ನ ನಾಲಕು ಜಂಬುಫಲವನು ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು (ಸಂಭಪ. ೧೯-೫೧) ; ನಿನ್ನಂಗಸಂಗಮನ ಗಲ್ದಾಯ್ತು . . . ಎಂತು ಸೈರಿಪರೊ ಕಾಂತನೊಳ್ನನ್ನಿಯುಳ್ಳರಸಿಯರ್ ದ್ರೌಪದಿ ಸುಭದ್ರೆಯರದೆಂತುಳಿವರಕಟೆಂದರು (ಜೈಮಿಭಾ. ೨೩-೫೯) ; ಬಲ್ಗಾಗಲಂಬಿಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಱುವೋದಂ (ರಾಮಾಶ್ವ. ೨೨-೮). ೪. ಕೊಟ್ಟಮಾತು; ಭಾಷೆ ; ವಚನ ; ಪ್ರತಿಜ್ಞೆ : ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿತ್ತಿ ಬಾಟಿತ್ತಿ ನನ್ನಿಯ ನುಡಿಯಂ ಕಿಡೆ ನೆಗೞೆ ನಾನು ಮೆರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೨) ; ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುರ್ಗೆಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨) ; ನಿನ್ನಂ ಬಿಡಿಸಿದಪೆಂ ನಂಬೆನ್ನಂ ಸಂದೇಹಮಿಲ್ಲವೆಂದೊಲವಿಂದಂ ನನ್ನಿಯನೀಯೆ (ದಶಕು. ೮-೨೮೪) : ಪುಸಿ ಪೊಂದದ ಪೊಸನುಡಿಯಂ ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂತಸುವಳಿಗುಮೆಂಬ ಬಗೆಯೊಳುಮುಸುರುವ ನನ್ನಿಗಳ ನಾಯಕರ್ಪೆಱರೊಳರೇ (ರಾಜಶೇ. ೧೪-೨೧). ೫. ಒಳ್ಳೆಯದಂ; ಸರಿಯಾದುದಂ ; ಸಮಂಜಸವಾದುದಂ : ನಿನ್ನಂ ತನ್ನೊಳ್ ಭೇದಂ ಮಾಡದೆ ನಲ್ಮೆಯನೆಸಗಿದ ನೀಱನೊಳು ಕೆನ್ನಮಿದಿರನಱಿಯದೆ ಹೋರುವುದಿದು ನನ್ನಿಯೆ (ಜಯಕಾ. ೭-೫೦). ೬. ಚೆಲುವು ; ಅಂದ; ಸೌಂದರ್ಯ.

ನನ್ನಿ ಕಂದರ್ಪ = ಚೆಲುವಿನಲ್ಲಿ ಮನ್ಮಥನಂತಿರುವವನು ; ಒಂದು ಬಿರುದು : ಸ್ವಸ್ತಿಶ್ರೀ ಸಾಮನ್ತರಾಮನ್ನಣ್ಣೆಕನ್ದರ್ಪ ಸಿರಿವುರದೊಆಣ್ಣೆಗನೊಳ್ ಕಾದಿ ಸತ್ತ ಆರಕೆಲ್ಲನ ಮಗ (ಮೈಆರಿ. ೧೯೩೨, ೩೭-೨ ; ಸು. 950). ನನ್ನಿಗಾಶ್ರಯಂ = ಸತ್ಯಕ್ಕೆ ಆಶ್ರಯನಾದವನು : ಒಂದು : ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಪಲ್ಲವಾನ್ವಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವಂ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬೨-೫ ; 918). ನನ್ನಿ ಚಳುಕಿ = ಸತ್ಯವಂತನಾದ ಚಾಲುಕ್ಯ ; ಒಂದು ಬಿರುದು : ಚಾಳುಕ್ಯಕರ್ಣ್ನಮಹಾರಾಜಂ ಧರಣೀಲೋಕಾಶ್ರಯನಭಿಮಾನ ಗಳ್ಳನಹಿತರ ಗಣ್ಡಂ ಮಾವನ ಗ ನ್ಧ ವಾ ರ ಣ ಂ ನನ್ನಿಚಳುಕಿ ಶ್ರೀಮತ್ ರಾಜಾದಿತ್ಯ (ಮೈಆರಿ. ೧೯೩೫, ೪೦-೫೧ ; 950?). ನನ್ನಿನಾರಾಯಣ = ಸತ್ಯಕ್ಕೆ ನಾರಾಯಣನಂತಿರುವವನು ; ಸತ್ಯರಕ್ಷಕ ; ಸತ್ಯಪಾಲಕ ; ಒಂದು ಬಿರುದು : ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ . . . ಎನಿಸಿ ಶ್ರೀಮತ್ಪಡೆವಳ್ಳ ತೈಲಪಯ್ಯಂ ಮಾಸವಾಡಿನೂಱನಾಲ್ವತ್ತುಮಂ ಬೀಳವೃತ್ತಿಯಿನಾಳುತ್ತುಮಿರೆ (ಸೌಇಇ. XI-1, ೫೨-೩೫ ; 1007). ನನ್ನಿಮಹಾರ್ಣವ = ಸತ್ಯಕ್ಕೆ ಸಾಗರದಂತಿರುವವನು ; ಒಂದು ಬಿರುದು : ವೀರಕ್ಷೇತ್ರನುಂ ನನ್ನಿಮಹಾರ್ಣ್ಣವನುಂ ಕನ್ದುಕಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆ (ಸೌಇಇ. XI-1, ೫೨-೧೪ ; 1008). ನನ್ನಿ ಮಾಡು = ದಿಟ ಮಾಡು; ಸತ್ಯವನ್ನಾಗಿಸು; ಸಾಬೀತುಗೊಳಿಸು : ಪೆಣನನಿಱಿದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ (ಪಂಪಭಾ. ೧೨-೨೯ವ) ; ಅಂತು ಪವಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾಮಿನಿಯಂತೆ ಯಾಮಿನಿ ತನ್ನ ಕ್ಷ ಣ ದಾ ಭಿ ಧಾ ನ ಮ ಂ ನನ್ನಿ ಮಾಡಿ (ಶಾಂತಿಪು. ೧೦-೧೫೫ ವ) ; ಕಳ್ಳಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೨-೧೨೪) ; ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣವೆಂಬ ನಾಳ್ನುಡಿಯಂ ನನ್ನಿ ಮಾಡಿ (ಸೌಇಇ. IX-;, ೨೭೩-೮೭ ; 1179) ; ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತ ನಕ್ಕುಮೊಯೆಂಬ ಸಮಯತ್ವಮಂ ನನ್ನಿ ಮಾಟಿಪ್ಪೆನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ (ಬೞಹರಿ. ೧-೫೬ ವ). ನನ್ನಿಮಾರ್ತಂಡ = ಸತ್ಯವನ್ನು ಪ್ರಕಾಶಪಡಿಸುವ ಸೂರ್ಯನಂತಿರುವವನು ; ಒಂದು ಬಿರುದು : ಶ್ರೀನನ್ನಿಮಾರ್ತ್ತಣ್ಡ ಪಟ್ಟಳಿಗೆಯ ಎಱೆಯಂಗರಸನ ಮಗ ಚಿಣ್ಣಮ್ಮರಸ (ಮೈಆರಿ. ೧೯೪೩, ೨೭-೧ ; 1080). ನನ್ನಿಯ ಗಂಗ = ಒಬ್ಬ ಪ್ರಭುವಿನ ಹೆಸರು : ಸತ್ಯವಾಕ್ಯ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಂಗೆಯ್ಯುತ್ತಂ × × × ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯಂ ಕುನ್ದೂರುಮನಿಱಿದು ಹೋಗೆ (ಎಕ. XII, ತಿಪಟೂ. ೫೫-೧ ; ಸು. 880) : ಶ್ರೀಮತ್ ಪಿಟ್ಟುವಿಪತಿಯ ಮಗ ನನ್ನಿಯ ಗಂಗನಣ್ಣೆಯೆಂಬ ಗಣ್ಡ ಬೀರನೊಟಿಪ್ಪಂ ತಾಗಿ ಶಾನ್ತರ ನೆಱೆಯರಟ್ಟಿದೊಡೆ (ಎಕ. X, ಗೋರೀಬಿ. ೪-೧೦, ಸು. 920) ; [ನ] ನ್ನಿಯ ಗಂಗಂ ಬೂತಯ್ಯಂ ಪುರಿಗೆಱೆ ಮೂನೂಱುಂ ಬೆಳ್ವೊಲ ಮೂನೂಱುಮನಾಳುತ್ತಿರೆ (ಸೌಇಇ. XI-i, ೩೭-೫ ; 946) ; ಜಯಲಕ್ಷ್ಮೀಪತಿ ಮಾರಸಿಂಗನನುಜಂ ಸತ್ಯಪ್ರಿಯಂ ಸನ್ದ ನನ್ನಿಯ ಗಂಗ ಕ್ಷಿತಿಪಾಳಕಂ (ಎಕ. VII, ಶಿವಮೊ. ೪-೭೧ ; 1122). ನನ್ನಿಯ ಮೇರು = ಒಂದು ಬಿರುದು : ಸ್ವಸ್ತಿ ಶ್ರೀಮನ್ಮಹಾಪ್ರಭು ನಂನಿಯ ಮೇರು ಕಲಿಕಾಲ ಧರ್ಮ್ಮರಾಜ ಕಬಾಹು ನಾಡಾಳುವ . . . ಬಾಚೆಯ ಹಳ್ಳಿಯ ಗಂಡನಾರಾಯಣಸೆಟ್ಟಿಯರು (ಎಕ. VI(R), ಕೃಷ್ಣರಾ. ೭೭-೩ ; 1179). ನನ್ನಿವೆಡಂಗ = ಸತ್ಯದ ಬೆಡಗುಳ್ಳವನು ; ಒಂದು ಬಿರುದು : ನನ್ನಿವೆಡಂಗಂ ತನ್ನಟಿತ್ತಿಯೆ ಕೊಟ್ಟು ಕೆಱೆಗೆ ಯಶಮಂ ಪಡೆದಂ (ಕಇ. II, ೪-೫ ; 918).

[ ದೇ.॥ ತಮಿ. ನನ್ಱಿ, ನನ್ಱು; ಮಲ. ತೆಲು. ನನ್ನಿ ]

**ನನಿ ಕರ್ತಾರ, ನನ್ನಿಕಾರ್ತರ** (ನಾ). ಒಬ್ಬಾತನ ಹೆಸರು . ಬಾಧಪರಿಹಾರಮ್ ನನ್ನಿಕರ್ತಾರ ಭಟರರ್ಗೆ ಧಾರೆ ಎಱೆದು ಕೊಟ್ಟಮ್ (ಮೈಆರಿ. ೧೯೧೭, ೧೩-೧೮ ; 900). ನನ್ನಿಕಾರ್ತರ : ಸರ್ವ್ವಬಾದಾಪರಿಹಾರ ನನ್ನಿಕಾರ್ತ್ತರ ಭಟರರ್ಗೆ ಎ × × × ಱೆದು ಕೊಟ್ಟ (ಎಕ. III, ಮೈಸೂರು. ೩೭-೫ ; ಸು. 990 ?). [ ನನ್ನಿ + ಕರ್ತಾರ ]

**ನನ್ನಿಕಾರ್ತರ** 'ನನ್ನಿಕರ್ತಾರ' ನೋ.

**ನನ್ನಿಕಾಱ** (ನಾ). ಸತ್ಯವಂತ ; ದಿಟವಂತ ; ಸತ್ಯನಿಷ್ಠ ; ದಿಟಗಾರ : ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಪ ತಿಂದಗಲದೆ ನಿಂದೀಯಮರ್ಕರಾವ ತೆಱದಿಂ ನೋಯಿಸರ್ಕೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-೪೮); ಹುಸಿಯಂ ಹುಸಿಮಾತಂ ಸೈರಿಸನೆಂದುಂ ನಂನಿಕಾಱ ನಂನಿಗೆ ಸಂತಸವೆಯ್ದುವನಿಂತಿದು ಭಾವಿಸೆ ಹಬ್ಬೆಯನಾಯಕಂಗೆ ಸಲೆ ಸಹಜಗುಣಂ (ಕಇ. I, ೨೫-೪೮ ; 1186) ; ಮುನ್ನೆಲ್ಲರಂ ಸು ಡು ವ ಕಾಡಾವುದೆಂದು ನೋಳ್ಪನ್ನೆಗಂ ಹಲವು ಕೆಲವುರಿಯ ಬಳಗಂ ಕಂಡು ನನ್ನಿಕಾಱಂ ಕಾವ ಕಾಡತ್ತ ನಡೆವಾಗ (ಹಚಕಾ. ೧೨-೩೧) ; ನನ್ನಿಕಾಱರ ದೇವ ಕೇಳ್ಸಾಕಿನ್ನೆನಗೆ ಸಾಮ್ರಾಜ್ಯಸುಖಸಂಪನ್ನತೆಯ ಸೌಭಾಗ್ಯ (ತೊರರಾ. ೧-೫-೧೭).

[ ನನ್ನಿ + – ಕಾಱ ]

**ನನ್ನಿಗ** (ನಾ).=ನನ್ನಿಕಾಱ : ನಿನ್ನನ್ನೆನೆದಾವೊನ್ನನ್ನಿಗ ಜಱುಚಿಲ್ಲದ ಚಾಗಿಗಳಾಣ್ಮ ಎನ್ನಯ ಮೊಗ ಮುಂದೇ ಬನ್ನಂಬೆತ್ತೆನ್ನಯ ಬಿನ್ನಪಮಂ ಮನ್ನಿಸು (ಉದ್ಭಟದೇ. ೩-೨೯) ; ನನ್ನಿಗರಿಂಪುಗಾಱರಿನಿವಾತುಗರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ (ಚಿಕವಿ. ೫-೧೧೦) ; ಇಂತೊಂದು ಮಾಟಿಕ್ಕೆಯಿಂ ಪೊಱನಲ್ಮೆಯಂ ಕವಡುಗಾರ್ತಿಯ ಕಲ್ಲೆರ್ದೆಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು (ರಾಮಾಶ್ವ. ೧೩೭-೫) ; ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ, ನಿಮ್ಮೊಲವು ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು, ಬೆನ್ನಟ್ಟಿ ಬೇಟೆಯಾಡಿತ್ತು (ಅಮತಂ. ೨೧-೬).

[ ನನ್ನಿ + – $ಗ_2$ ]

ಪುಚ್ಛೀ, ಕಲಶೀ, ಧಾವನೀ, ಗುಹಾ–ಈ ೯ ನರಿವಾಲವೊನ್ನೆ" (ನಾಚಿರಾ. ೦೦೯) : "ಕ್ರೋಷ್ಟು ವಿನ್ನಾ–ನರಿವಾಲವೊನ್ನೆ" (ಒಷಧಿ. ೪೨).

**ನರಿವಾಲಹೊನ್ನೆ:** "ಕ್ರೋಷ್ಟುವಿನ್ನೆ, ಸಿಂಹಪುಚ್ಛೆ, ಕಲಶಿ, ಧಾವನಿ, ಗುಹೆ" (ನಾಚಿರಾ. ೬); "ದೀರ್ಘವಾಲಾ–ನರಿವಾಲಹೊನ್ನೆ" (ಒಷಧಿ. ೭೭).
[ ನರಿವಾಲ + ಪೊನ್ನೆ ]

**ನರಿವಾಲಹೊನ್ನೆ** 'ನರಿವಾಲವೊನ್ನೆ' ನೋ.

**ನರಿಹೆಸರು (ನಾ).** ಒಂದು ಬಗೆಯ ಸಸ್ಯ : ನರಿಹೆಸರು, ಒಲ್ಲಿಪೆಸರ (ವ್ಯಾಔಗಿ. ೬೦–೧೨೬). [ ನರಿ + ಹೆಸರು$_2$ (<ಪೆಸರ್) ]

**ನರಿಹೊನ್ನೆ (ನಾ).** = ನರಿವಾಲ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ . . . ೪ ಕೋಲವೊನ್ನ ಎಂಬುವದು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೧೩೩). [ ನರಿ + ಹೊನ್ನೆ (<ಪೊನ್ನೆ) ]

**ನರು** 'ನಱು' ನೋ.

**ನರುಕು** 'ನಱುಂಕು' ನೋ.

**ನರುಗಂಪು** 'ನಱುಗಂಪು' ನೋ.

**ನರುಗಳ್ಳಿ (ನಾ).** ಕಮ್ಮನೆಯ ಹೆಂಡ; ಕಂಪುಳ್ಳ ಮದ್ಯ : ಸೇಸನಾಯ್ಕನ ಹುಳಿಗೆಂಪಿನ ನರುಗಳ್ಳನ್ನು ಕರಟ ತುಳುಕುವಷ್ಟರ ಮಟ್ಟಿಗೆ ಬೊಗ್ಗಿಸಿ (ಪುಲಿಮ. ೦೩). [ ನರು (<ನಱು) + ಕಳ್ಳು (<ಕಳ್$_3$) ]

**ನರುಗಾಳಿ (ನಾ).** ಕಂಪುಳ್ಳ ಗಾಳಿ ; ಪರಿಮಳ ಭರಿತವಾದ ವಾಯು : ಸಂದರ್ಭಾನುಸಾರವಾಗಿ ಸೂಸುವ ಕಾವ್ಯದ ನರುಗಾಳಿಯನ್ನು ವಾಚಕರು ಸೇವಿಸಬಹುದು (ನಾಡೋಜ. ೩೪೪) : ಕೆಚ್ಚೆದೆಯ ದಂಡಾಳುಗಳೇ, ನಮ್ಮ ದಾಳಿಯ ನರುಗಾಳಿಯಿಂದ ಕಂಪಣ್ಣನನ್ನು ಮುತ್ತಿ ಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ (ನಡದಾ. I, ೪೪೦).
[ ನರು (<ನಱು) + ಗಾಳಿ$_1$ ]

**ನರುಗು (ನಾ).** ಕಂಪು ; ಸುವಾಸನೆ : ಇಂಪು, ಸೊಂಪು, ಕಂಪು, ಸೌಸವ, ಅಲಂಪು, ನರುಗು, ಸೊಪಡು, ಮಗಮಗ (ಘಮಘಮ) (ಕಂನುಹು. ೭೯).
[ <ನಱು ]

**ನರುಗುಗಂಬಳಿ (ನಾ).** ಕಪ್ಪು ಮತ್ತು ಬಿಳಿ ಪಟ್ಟೆಗಳನ್ನುಳ್ಳ ಕಂಬಳಿ : (೬). [ ನರುಗು$_0$ + ಕಂಬಳಿ ]

**ನರುಚಲು** 'ನರಚಲು' ನೋ.

**ನರುಟು** 'ನರಟ್ಟು$_2$' ನೋ.

**ನರುಟುಗೊಳ್ (ಕ್ರಿ).** ಬೆಳೆವಣಿಗೆ ಕುಂಠಿತವಾಗು ; ನರಚಲಾಗು ; ಪೀಚಾಗು : "ಹ್ಲಸತಿ–ನರುಟುಗೊಂಡಪುದು" (ಕಾಶಕ್ಕ. ೬೨).
[ ನರುಟು (<ನರಟ್ಟು$_2$) + ಕೊಳ್$_1$ ]

**ನರುನೆಯ್ಮೆ** 'ನಱುನೆಯ್' ನೋ.

**ನರುಮಲ್ಲಿಗೆ (ನಾ).** ಸುವಾಸನೆಯಿಂದ ಕೂಡಿರುವ ಮಲ್ಲಿಗೆ : ಇದು ಮಣ್ಣಿನ ನರುಮಲ್ಲಿಗೆ, ಇದು ನೆಲದ ನಿಧಾನ (ಅರಳು. ೨೫೦–೫).
[ ನರು (<ನಱು) + ಮಲ್ಲಿಗೆ ]

**ನರುಲಿ** 'ನರವುಲಿ' ನೋ.

**ನರುವಂಜಿ** 'ನಱುಪಂಜಿ' ನೋ.

**ನರುವಲ** 'ನಱುವಲ್' ನೋ.

**ನರುವಲು** 'ನಱುಂಪಲ್' ನೋ.

**ನರುವಾಯ (ನಾ).** ಒಂದು ಬಗೆಯ ಬಾಣ (?) : ನೆಱೆದು ನಿರ್ವಾಯಂ ನರುವಾಯಂ ಮುಂ ಮೊನೆ ನೆರಕೆ ನಾರಾಚಂ . . . ಕಣಕಿನೆ ಪೋಪಂ[ಬು] ಕವಲ[ಂಬುವೆಂ]ಬಾಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೧೩–೩೯). [ ? ]

**ನರುಳಿ** 'ನರವುಲಿ' ನೋ.

**ನರೂಲಿ** 'ನರವುಲಿ' ನೋ.

**ನರೆ$_1$, ನರೆ$_4$ (ಕ್ರಿ).** ೧. ಕೂದಲು ಬೆಳ್ಳಗಾಗು ; ಪಲಿತವಾಗು : ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ಸರುಕಿದ ನರೆತ ಮೀಸೆಯು . . . ಮುಪ್ಪಿನ ಮುಗುದನೀತನು (ಕುವ್ಯಾಭೀ. ೧–೩೫) ; ನರೆತ ಮಂಡೆಯು ನೀರೊಗುವ ಕಂಗಳು . . . ಪತ್ತಿದ ಗಲ್ಲದ ನೆಱೆ ವೃದ್ಧನಡಯಿಟ್ಟನೊಲಿದು (ಜೀವಂಸಾಂ. ೧೬–೩೦) ; ನ[ಪಾಠಾಂ. ನೆ]ರೆತ ಮಂಡೆಯು ಕುಸಿದ ತೊಗಲಿನ ಜೋಲ್ವ ಹುಬ್ಬಿನ . . . ಶಬರಿಯ ಸುಪ್ರಸಿದ್ದೆಯು ಸಾರ್ದರೊಲವಿನಲಿ (ತೊರರಾ. ೩–೧೩–೨೯) ; ನವುಗೇನು ನರೆತ ಹುಬ್ಬುಗಳಿವೆಯೆ ? (ಕವಿಸೋ. ೮೯–೨೦). ೨. ಮುಪ್ಪಾಗು ; ವೃದ್ಧಾಪ್ಯವನ್ನು ಹೊಂದು : "ಜರಯತಿ–ನರೆತಪಂ" (ಕಾಶಕ್ಕ. ೧೧೪); ಬೆಳುಗಡ್ಡದಿಂ ನಡುಗುವ ನರೆದಲೆಯಿಂ ನರೆತು ಸಡಿಲ್ವ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬–೨೫) ; ಅಂದಿನೀಶ್ವರನಿಂದು ನರೆತನೆಯಂದಿನ ಚಳಿತಭಕ್ತಿಮಹಿಮೆಯದಿಂದು ನವೆಯಿತೆ (ಬಸವು. ೫೨–೩೦) ; ತನ್ನ ನರೆತ ಅಜ್ಞಾನದಲ್ಲಿ ತಾ ನೆರೆತ ಒಂದು ಪ್ರಾಣಿ ನೆರಳು ಬೆಳಕು ಅರ್ಥಾರ್ಥವಿರುವ ಮನ ; . ಬದುಕಿನೊಂದು ಕಾಣಿ (ಅರಳು. ೧೯೫–೫). **ನೆರೆ$_4$ :** ೧. ಪಲಿತಂ . . . ಕೂದಲು ನೆರೆತುಹೋಗುವಿಕೆ (ಸಿದ್ಧಾಂತಿ. ೧೫೭) ; ಅವರ ಗಡ್ಡ ಮೀಸೆಗಳು ನೆರೆತು ಹೋಗಿದ್ದವು (ಕಳಹು. ೧).
[ ದೇ. ॥ ತಮಿ. ನರ್ರೈ ; ಮಲ. ನರೆ ; ತುಳು. ನರೆವು, ನರೆ ; ತೆಲು. ನರಯು., ನರಿಯು ]

**ನರ್ರೆ, ನೆರೆ$_8$ (ನಾ).** ೧. ಬೆಳ್ಳಗಾದ ಕೂದಲು ; ನೆರೆಗೂದಲು : "ಪಲಿತಮೆಂಬುದು ನರೆ" (ಹಲಾಯು. ೮೮–೩೭೮) ; ಕಚ್ಚು–ಕೆರಕುಂ, ಜರ–ನರೆಯುಂ, ಖಾಸ–ಕೆಮ್ಮುಂ (ಪದ್ಮಾರಾ. ೫೩–೪) : ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದ ಯಶಮುಂ ಬೆರಸಿನ್ನೀವುದು ಹರಿಗರ್ಘ್ಯಮನೆಂದಾವನುಮಿಾ ಭೀಷ್ಮರಂತು ನುಡಿವರುಮೊಳರೇ (ಪಂಪಭಾ. ೬–೪೩) ; ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವು (ಪಂಪಭಾ. ೮–೫೪); ನರಪತಿ ನಿನ್ನಂಗಾಲೊಳ್ ನರೆ ಬರ್ಪನಮುತ್ತರೋತ್ತರಂ ಪುದುವಾಟುಂ (ಶಾಂತಿಪು. ೯–೫೨) ; ಅಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨–೬೯) ; ನರೆ ಬಂದನಿತಱೊಳ್ ನರರ್ ಪಿರಿಯರೆ (ಧರ್ಮಾಮ್ಮ. ೩–೧೯೮) ; ನಿವ್ಮ ನಿಜವನಱಿಯದ ಮನುಜಂಗೆ ನರೆ ಹಿರಿದಾದಡೇನು ಮನದವಗುಣ ಬಿಡದು (ಸಮಾವ. ೫–೧೭) ; ನರೆಯೆಂಬ ಹೊಱಸು ಮೊಗವೆಂಬರಮನೆಯಂ ಪೊಕ್ಕೊಡೆ (ಯಶೋಚ. ೨–೧೨) ; ಮನದ ಶುದ್ಧಿಕೆ ತಲೆದೋರ್ಪವೊಲು ನರೆ ಮೊಳೆತುದು (ಸಿದ್ರಾ. ೦–೩೪) : ಪಟಪು (ಪಟವು)–ನರೆಗಿಕ್ಕುವ ಕರ್ಪುರ (ಶಮುದ. ಪರಿ. ೧) ; ನರೆ ಶಿರದೊಳೊಗೆದುವು (ಕುಮುರಾ. ೫–೧೯); ನಾಯಿಗೆ ನರೆ ಬಂದರೆ ಅಜ್ಜಿ ಅನಿಸಿಕೊಂಡೀತೇ? (ಗಾದ). ೨. ಮುಪ್ಪು ; ವಾರ್ಧಕ್ಯ : "ಜರೆಯುಕ್ಕು ನರೆ" (ಮಂಗರಾ. ೯೦–೦೦) ; "ನರೆಯೆನಲ್ ಜರೆ" (ಕಶರ. ೫೩). **ನೆರೆ$_8$ :** ೧. ಭರತಂ ಕಂಡಂ ಕೆನ್ನೆಯ ನೆ[ಪಾಠಾಂ. ನ]ರೆಯಂ ದಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೬–೬೦) ; ನೆ[ಪಾಠಾಂ. ನ]ರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೦) ; ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರಕ್ಷಾಶ. ೩೪) ; ತೆರೆಯಿಲ್ಲದೆ ನೆರೆಯಿಲ್ಲದೆ ಸೆರೆಯಿಲ್ಲದೆ ಕಿಱಿದು ಮಾಗಿ ತೆಳ್ಳಗೆ ಮೊನೆಯಾಗಿರೆ ಕಿವಿಗಳೊಳಂ ನುಣ್ಣಾಗಿರೆ ಕಟಮುಂ ವಿಕಟಮಾಗದಿರೆ [ಹರಿ] ಶುಭದಂ (ಅಶ್ವಶಾ. ೧–೨೮) ; ಬಾಧಿಸುವುದೀ ದೇಹವಂ ನೆ[ಪಾಠಾಂ. ನ]ರೆ ತೆರೆಗಳಿನ್ನು ಸಾಧಿಸುವುದೇನು (ಜೈಮಿಭಾ. ೦೦–೩೮) : ತಲೆಯೊಳೊಂದು ನೆರೆಯಿಲ್ಲ (ಸೌಂದಕಾ. ೩–೫೨).
[<ನರೆ$_1$./ತಮಿ. ನರ್ರೈ; ಮಲ. ನರ; ಕೊಡ. ನೆರೆ; ತುಳು. ನರೆ; ತೆಲು. ನರೆ]

ನರೆಕೊಡಲ್ 'ನರೆಗೂದಲ್' ನೋ.

ನರೆಕೊದಲು 'ನರೆಗೂದಲ್' ನೋ.

ನರೆಗಡ್ಡ (ನಾ). ನೆರೆತ ಗಡ್ಡ ; ಬಿಳಿಯ ಗಡ್ಡ : ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ . . . ರತ್ನಹಾರ ದೊಳಿದ್ದನಾ ಮಂತ್ರಿ (ಭರತ. ೧೩-೯) ; ನರೆಗಡ್ಡ ನೆಲಕೆಳಲುವ ಧೋತ್ರ ಭಸಿತಾಂಗ ಧರಿಸಿದ ರುದ್ರಾಕ್ಷಿಗಳಿಂದೆ . . . ವಿಪ್ರರ ಮಧ್ಯಕೆಳ್ಳಂದ (ತ್ರಿಭುತಿ. ೯-೨೪) ; ನರೆಗಡ್ಡದ ವಿಪಾಸೆಯು ಮೇಲೆ ಕೈಯನಂಕೋರಣದಿಂದ ಪಾಯುತೆ ಪರಾಕ್ರಮವುಮಂ ಸಲೆ ತೋರ್ದಂ (ಹಾಲಾಸ್ಯ. ೩-೧೭-೯).

[ ನರೆ$_2$ + ಗಡ್ಡ$_1$ ]

ನರೆಗೂದಲ್, ನರೆಕೊದಲ್, ನರೆಕೂದಲು, ನರೆಗೂದಲು (ನಾ). ನೆರೆತ ಕೂದಲು ; ಬಿಳಿಕೂದಲು : ನರೆಗೂದಲ್ಗಿಕ್ಕಿ ನುಣ್ಪಂ ಮುಡಿಯಸಳ ವಡಲ್ಸೆಕ್ಕಿ . . . ಮುಸುಕನಿಟ್ಟೈದಿದಳ್ ವೃದ್ಧೆ (ದಶಕು. ೬-೧೭೬) ; ಒಂದು ನರೆಗೂದಲಂ ಪಱಿದು ತೋಱಿದಾಗಳೆ ವೈರಾಗ್ಯಂ ಪುಟ್ಟಿ (ಪುಣ್ಯಾಸ್ರ. ೧೧.೧೦ ವ). ನರೆಕೊದಲ್ : ಹೊತ್ತ ಬೆಳ್ನರೆಕೊದಲಾ ಮುದಿ ಸೂಳೆಯರ ಪೊತ್ತುಪೊಪ್ಪಿದುದಾಗಲ್ಲಿ (ಕಂನವಿ. ೬-೧೯೦) ನರೆಕೂದಲು : ಇಂದಿರೆಯು ಯಜಮಾನಿಯು ತಲೆಯು ನರೆಕೂದಲು ತೆಗೆಯುವುದೇ ಮುಂತಾದ ಕೆಲಸಗಳಿಂದ ಆವಳಿಗೂ ಅಚ್ಚುಮೆಚ್ಚಾದಳು (ಬಂಕಿಮ. ೧೧೯). ನರೆಗೂದಲು : ಪಲಿಕ್ನಿ-ನರೆಗೂದಲುಳ್ಳ ಮುದುಕಿ (ಗಂಗಾಮ. ೨೦೦) ; ನರೆಗೂದಲ ತಲೆಯನ್ನು ಬೋಳಿಸಿಕೊಂಡಿದ್ದ ಮನುಷ್ಯನನ್ನವಳು ಆದೆ ತಾನೆ ಮೊದಲ ಬಾರಿಗೆ ಕಂಡಿದ್ದಳು (ಪುನರು. ೧೮೬).

[ ನರೆ$_2$ + ಕೂದಲ್ (<ಕುಂದಲ್) ]

ನರೆಗೂದಲು 'ನರೆಗೂದಲ್' ನೋ.

ನರೆತನ (ನಾ). ಮುದಿತನ; ಮುಪ್ಪು. ಎಳೆತನಕ್ಕೂ ನರೆತನಕ್ಕೂ ಸಂಬಂಧವೇ ಇಲ್ಲ . . . ನರೆತನದ ಎಲೆಗಳ ಅಂಚು ನೀಟಾಗಿರುತ್ತದೆ (ಹಸುಹೊ. ೩೭).

[ ನರೆ$_2$ + -ತನ ]

ನರೆದಲೆ, ನೆರೆದಲೆ (ನಾ). ೧. ಕೂದಲು ನರೆತ ತಲೆ : ನಡುಗುವ ನರೆ ದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೩೫) ; ನರೆದಲೆ ಬೇರ್ಬಟಲ್ದ ಪಟವಲ್ . . . ಮಹೋದರಮೆಸೆಯಲ್ಕೆ ಶೋಕಿಸುತೆ ಪಿಂದನೆ ಬಂದಳ್ (ದಶಕು. ೬-೧೩) ; ನರೆದಲೆ ಜೋಲ್ದ ಪುರ್ಬು ಕುಳಿದಕ್ಷಿಯುಗಂ (ಧರ್ಮಪ. ೩-೩೬) ; ಸರಡುಪತ್ರದಲಾಳುಗೊಂಬ ಗಡ ನಮ್ಮನೀ ನರೆದಲೆಯ ಚಾಳಕನೆನುತ್ತ ಕೋಪಿಸಿದ ಸೌಂದಕುವರನಾ ವಿಪ್ರನ (ಸೌಂದಪು. ೫-೯). ೨. ಮುಪ್ಪಾ ದವಳು ; ಮುದುಕಿ : ತಾಯಿಲ್ಲದನನ್ ಸಾಕಿದ ಮುದಿಯಳ್, ಕಂದನ ಕೇಡನ್ ನೋಡಲೊ ಬಟ್ಟಳ್ ? ನರೆದಲೆ, ದುಃಖಿದ ಮಡುವೊಳ್ ಬಿಟ್ಟಳ್ (ಅಶ್ವತ್ಥಾ. ೩೫-೫೦೩). ನೆರೆದಲೆ : ೧. ನೆರೆದಲೆಗೆ ಮುಸಿದೊಡೆದು . . . ಬಾ ಜಾಣಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು (ಚಿಬಪು. ೧೦-೭೬). [ ನರೆ$_1$ + ತಲೆ$_1$ ]

ನರೆದಲೆಗ (ನಾ). ೧. ಕೂದಲು ಬೆಳ್ಳಗಾದವನು ; ನರೆತ ಮಂಡೆ ಯವನು. ೨. ರಾಗಿ : ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ಉರುತರದ ರವೆ ಯವೆ ನವಣೆಯಿದೂ ನವಧಾನ್ಯವೆಂದೆನಲು (ರಾಮಚ. ೧೧-೩) ; ಕೆಲರು ಗೋಧಿಯ ಸಾಮೆಯನು ಕೆಲಕೆಲರು ನವಣೆಯ . . . ಕೆಲರು ನರೆದಲೆಗನನು ಪತಿಕರಿಸಿರಲು (ರಾಮಚ.೧೦-೩೩); ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾಮೆ, ನವಣೆ, ಗೋಧಿ ಈ ನವಧಾನ್ಯಗಳನ್ನು ತಂದು ಸುರಿದರು (ನಾಡು.ಡಿ. ೩೦); ರೀಹಿ (ವ್ರೀಹಿ—ಬತ್ತ) ಹೆಚ್ಚೋ ನರೆದಲೆಗ (ರಾಗಿ) ಹೆಚ್ಚೋ ಎಂಬ ವಾದ ಹುಟ್ಟಿತು (ನನ್ನೂರು. ೫೫). [ ನರೆದಲೆ + -ಗ$_2$ ]

ನರೆದೊಡು (ಕ್ರಿ). ಬಿಳಿಯಂ ಕೂದಲನ್ನು ಹೊಂದು,-ಪಡೆ ; ಕೂದಲು ಬೆಳ್ಳಗಾಗು : ಕಿನ್ನೆ ನರೆದೊಟ್ಟು ಶಿಥಿಲತ್ವವಳವಟ್ಟು ನೆಱೆ ಮುಪ್ಪಿನಂಗ ವಿಕಾರಮಂ ಬಿಟ್ಟು ಹೋಗಿ ಧಾತುಗಳು ಪಲ್ಲಟವಾದವು (ಸಿದ್ಧರಾ. ೦-೯೦).

[ ನರೆ$_2$ + ತೊಡು$_1$ ]

ನರೆದೋಱು (ಕ್ರಿ). ೧. ಬಿಳಿಕೂದಲು ಕಾಣಿಸಿಕೊಳ್ಳು. ೨. ಮುಪ್ಪಾಗು; ವೃದ್ಧಾಪ್ಯವನ್ನು ಹೊಂದು.

ನರೆದೋಱದರ್ = ಮುಪ್ಪಿಲ್ಲದವರು ; ದೇವತೆಗಳು : "ಅಮರ್ದುಣಿಸುಗಳ್, ಕನಸಿಲ್ಲದರ್, ನರೆದೋಱದರ್, ಎವೆಯಿಕ್ಕದರ್ . . . ಅಚ್ಚರರ್ (ಜೋಳಿಯರ್)-ಈ ೯ ದೇವರ್ಕಳ ಪೆಸರ್" (ಕಶಸಾ. ೩-೯). [ ನರೆ$_2$ + ತೋಱು ]

ನರೆನವಿರ್ (ನಾ). ನರೆತ ಕೂದಲು ; ಬೆಳ್ಳಗಾದ ಕೂದಲು; ಬಿಳಿಯ ಕೂದಲು : ನರೆನವಿರ ಹೊತ್ತು ನಡುಗುವ ಮಂಡೆ ಬಿಳ್ದ ಮೊಲೆ ತೆರೆ ಮುಸುಂಕಿದ ಮುಖಂ . . . ಜೋಲ್ವ ಗಲ್ಲಂ ಮಿಸುಪ ವೃದ್ಧವಣಚರಿ ಯೊರ್ವಳಾಪಣ್ಣಗಳಂ ಸವಿದು . . . ಏಱಂಜವ್ವನಂಬಡೆದಳು (ಸಮ್ಯಕ್ತ್ವ. ೧೦-೪೩). [ ನರೆ$_2$ + ನವಿರ್ ]

ನರೆಪ (ನಾ). ಕೂದಲು ನರೆತವನು,-ಬೆಳ್ಳಗಾದವನು ; ಮುದುಕ : ಕಿವಿಗ್ಮ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದೆರ್ದೆಗಪ್ಪು ದತ್ತಳೆಗಮಾ ನರೆಪಂ ನೆರೆವಂದು [ಪಾಠಾಂ. ನರೆಬಂದ] ಪೊಂಗಳ ಸುರಿವೊಡ ಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ (ಪಂಪಭಾ. ೪-೧೦೦).

[ ನರೆಪು + -ಅ$_7$ ]

ನರೆಪು (ನಾ). ಕೂದಲು ನರೆಯುವಿಕೆ,-ಬೆಳ್ಳಗಾಗುವಿಕೆ. 'ನರೆಪ' ಪರಾ. [ ನರೆ$_1$ + -ಪು$_2$./ತಮಿ. ನರೈಪ್ಪು; ತೆಲು. ನರಪು ]

ನರೆಯಂಗಲ್ (ನಾ). ಒಂದು ಊರಿನ ಹೆಸರು; ಈಗಿನ ಧಾರವಾಡ ಜಿಲ್ಲೆಯ ನರೇಗಲ್ಲು: ಸ್ವಸ್ತಿ ವಿಕ್ರ(ಕ್ರ)ಮಾದಿತ್ಯ ಪ್ರಿಥು(ಥಿ)ವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನರೆಯಙ್ಗಲ್ಲ ಪನ್ನಾಸುಗಳಾನಿತ್ತ (ಇಆ. X, ೧೬೭-೩ ; 7ನೆಯ ಶತ) ; ನರೆಯುಂಗಲ್ಲ ಸಾಸಿರ್ವ್ವರ ತುಱುಪಿನ ಪುಯ್ಯಲೊಳ್ (ಎಇ. VI, ೧೬೩-೩ ; 780) ; ಆಚಾರ್ಯ ರಾಜಗುರು ವಿರ್ವಶಕ್ತಿದೇವರ್ಗಂ ನರೆಯಂಗಲ್ಲ ಮಹಾಜನಂಗಳುಂ . . . ಇನ್ನವರ ಸಮಕ್ಷದಲ್ಲಿ (ಕಕುಲ. ೧೭-೧೧ ; 10ನೆಯ ಶತ).

ನರೆಯಂಗಲ್ ಪನ್ನೆರಡು=ಒಂದು ಪ್ರಾಂತದ ಹೆಸರು : ನರೆಯಂಗಲ್ ಪನ್ನೆರಡಱೊಳಗಣ ಉಮ್ಮಚಿಗೆಯಂ ಸರ್ವ್ವಾಭ್ಯಂತರಸಿದ್ಧಿಯಾಗಿ . . . ಕುಡೆ (ಎಇ. XX, ೬-೧೧ ; 1012).

ನರೆಯೋಱು (ಕ್ರಿ). ೧. ಕೂದಲು ಬೆಳ್ಳಗಾಗು. ೨. ಮುಪ್ಪಾಗು : ಮಂದಿಯಾಗು. ೧, ೨ : ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್ ನಡೆಯದೆ ಪೊಟ್ಟೆ [ ಪಾಠಾಂ. ಪೋದೆ]ಪೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ಮುಱಿದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೧೩-೯೪) ; (ಕಾವ್ಯಸಾ. ೧೦೩೦ ನೋ).

[ ನರೆ$_2$ + ಏಱು$_1$ (< ಏಱ್$_1$) ]

ನರೆವೆಣ್ (ನಾ). ಕೂದಲು ನರೆತ ಹೆಣ್ಣು ; ಮುದುಕಿ : ನರೆವೆಣ್ಣಗೊಡ ನಾಡೆ ಮುಪ್ಪಹುದೈಸೆ (ಭರತ. ೭೬-೦೩). [ ನರೆ$_1$ + ಪೆಣ್ ]

ನರೇಂದ್ರ (ನಾ). ೧. ಅರಸ ; ದೊರೆ : ರುಂದ್ರಾಂಭೋಧಿವರೀತ ಮಹೀಂದ್ರರದಾರಿನ ರೀ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಟ್ದಂ ದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ (ಪಂಪಭಾ. ೦-೪೪) ; ಉದ್ವೃತ್ತ ನರೇಂದ್ರಕಂಠಕದಳೀಚ್ಛೇದೈಕದಕ್ಷಾಸಿ (ಶಾಂತಿಪು. ೩-೩೦) : ಚತುಷ್ಪಾದಿ ತದ್ವೇದದೊಳ್ ತಾನಿದು ಶುಂಡಾಳಂ ನರೇಂದ್ರಂ ನಿಮಗೆ ಕುಡುವ ನಾಗಿರ್ದಪಂ ನೋಡೆ ದೃಷ್ಟಂ (ಸುಕುಮಾ. ೩-೭). ೨. ವಿಷಚಿಕಿತ್ಸಕ ;

ವಿಷವೈದ್ಯ; ಗಾರುಡಿಗ. ೩. ಮಾಂತ್ರಿಕ; ಮಂತ್ರವಾದಿ: "ನರೇಂದ್ರ [ನೆನಲಾಹಿತಮಂಡಿಕಂ] ಪಾರ್ಥಿವನಂ" (ವಸ್ತುಕೋ. ೧೩೦-೧೭); "ನೃಪನಲ್ಲಿ ವಾದಿಯಲಿ ನರೇಂದ್ರನೆಂದೆನಿಕು" (ಮಂಗರಾ. ೧೮೪-೩೭).

[ ನರ₂ + ಇಂದ್ರ ]

**ನರೇಂದ್ರಚಂದ್ರ** (ನಾ). ರಾಜರಲ್ಲಿ ಚಂದ್ರನಂತೆ ಹೊಳೆಯುವವನು; ಶ್ರೇಷ್ಠನಾದ ರಾಜ: ಕೃತಿಪತಿ ನರೇಂದ್ರಚಂದ್ರಂ ಕೃತಿಯುಂ ಪೇಟ್ದಂ ಬುಧಾಬ್ಜವನಕಳಹಂಸಂ (ಕಾದಂಪೂ. ೭); ರವಿಕುಲನರೇಂದ್ರಚಂದ್ರಂ, ತನ್ನ ಕಿರುವೆಂಡಿತಿಯು ಮನವುನೆಂತಾದೊಡಂ ತನ್ನಾಸೆಗೇಳಲ್ಕೆ ತರಿಸಂದು ಹೊರಟನವಳೆಡೆಗೆ (ಶ್ರೀರಾಮಾ. ೬೬-೩೩೭). [ ನರೇಂದ್ರ + ಚಂದ್ರ₂ ]

**ನರೇಂದ್ರನಿಕಾಯ** (ನಾ). ರಾಜರ ಸಮೂಹ, -ಗುಂಪು: ಶಿವ ಎನುತಾ ನರೇಂದ್ರನಿಕಾಯ ನಡುಗಿತು (ಕುಮಾ.ದ್ರೋ. ೮-೪೨).

[ ನರೇಂದ್ರ + ನಿಕಾಯ ]

**ನರೇಂದ್ರವಧು** (ನಾ). ಅರಸಿ; ರಾಣಿ: ಬಾಣಸಿಗಂ ಮಾಡಮನಾ ನರೇಂದ್ರ ವಧುವಂ ತಕ್ಕಯ್ಸಿಕೊಂಡೇಟಿದಂ (ಬಂಹರಿ. ೯-೩೦).

[ ನರೇದ್ರ + ವಧು ]

**ನರೇಂದ್ರಾಸನ** (ನಾ). ರಾಜನ ಪೀಠ; ಸಿಂಹಾಸನ: "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಚತುನಿ. ೫೦). [ ನರೇಂದ್ರ + ಆಸನ ]

**ನರೇಯಣ** 'ನಾರಯಣ' ನೋ.

**ನರೇಶ್ವರ** (ನಾ). ಅರಸ; ದೊರೆ: ಸ್ವಸ್ತಿಸಮಸ್ತನರೇಶ್ವರಮಸ್ತಕವಿನ್ಯಸ್ತ ಶಾಸನಂ (ಆದಿಪು. ೦೩-೭೨); ಸಕಲಮೇದಿನೀತಳವನೇಕಚ್ಛತ್ರದಿಂ ಪಾಲಿಸುವ ನರೇಶ್ವರನವಂಗಚ್ಚಿದ್ರವಾಗಿ ನಡೆವುದು (ಜೈಮಿಭಾ. ೨-೩೭).

[ ನರ₂ + ಈಶ್ವರ ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ವೃತ್ತ; P ನಜಭಜಜಲಗ-ಹೀಗೆ ಗಣ ನಿಯಮವಿರುವ ವೃತ್ತ. ಇದಕ್ಕೆ 'ಕನಕಾಬ್ಜನೀಯ' ಎಂಬ ಹೆಸರೂ ಇದೆ. 'ಕನಕಾಬ ನೀಯ', 'ನತ್ಕುಟಕ' ಪರಾ. [ ಸಂ. ]

△ **ನರ್ಚು₁** 'ನಚ್ಚು₁' ನೋ.

△ **ನರ್ಚು₂** 'ನಚ್ಚು₂' ನೋ.

**ನರ್ತಕ** (ನಾ). ೧. ನೃತ್ಯ ಮಾಡುವವನು; ರಂಗದ ಮೇಲೆ ಕುಣಿಯುವವನು; ನಟ: ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ .ನರ್ತಕಂ ಸುರರಾಜಂ ಸಭೆ ದೇವಮರ್ತ್ಯಸಭೆ (ಆದಿಪು. ೭-೧೨೭): ಪಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ . . . ನಾಟ್ಯಗಾರನಿಗೆ ನರ್ತಕ ಎಂಬ ಹೆಸರಿದ್ದುದನ್ನು ತಿಳಿಸುತ್ತಾನೆ (ಭಾರದ. ೫೫೦). ೨. [ಜೈನ] ಸೈನ್ಯದ ಏಳು ವಿಭಾಗಗಳಲ್ಲಿ ಒಂದು. 'ನರ್ತಕಿ' ಪರಾ. [ ಸಂ. ]

**ನರ್ತಕಾಳಿ** (ನಾ). ನರ್ತಕರ ತಂಡ, -ಸಮೂಹ: ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ . . . ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ (ಪುಷ್ಪಪು. ೫-೨೦). [ ನರ್ತಕ + ಆಳಿ₄ ( = ಅಲಿ₄ ) ]

**ನರ್ತಕಿ** (ನಾ). ೧. ನೃತ್ಯ ಮಾಡುವವಳು; ನಟಿ: ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪೂರ್ವಿಂ ಜತಿಯಂ ತೊಡರದೆ ನಡೆಯಿಸಿ ಪೂರ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೨); ನರ್ತಕಿಯುರಾಟಗಳ ನೋಡಲು ಮುತ್ತುತಿಹ ಮೆಂತರರ ಜಡಿಕೈದತ್ತ ತೊಲಗಿಸಿ . . . ಓಜೆಗೊಳಿಸಿದರಮರಪಡಿಯಜಿರು (ಸಾಳ್ವಭಾ. ೩೩-೩೭); ಕಡುತೋರವಲ್ಲದಗ್ಗದ ನಿಡಿದಲ್ಲದ ಕಿಟಿದುಮಲ್ಲದತಿಬಡವಲ್ಲದ ಮುಡುಬಲ್ಲದವಯವಂಗಳನೊಡರಿಸುವಂಗನೆಯೆ ಲಲಿತನರ್ತಕಿಯೆನಿಪಳ್ (ಲಾಸ್ಯರಂ. ೦-೪೪); ರಂಭೆ ಮೊದಲಾದ ಅಪ್ಸರಸ್ತ್ರೀಯರೇ ಇವನ ನರ್ತಕಿಯರು (ನೀತಿಚಿಂ. IV, ೮). ೨. [ಜೈನ] ಸೌಧರ್ಮೇಂದ್ರನ ಏಳು ಬಗೆಯ ಸೇನಾಂಗಗಳಲ್ಲಿ ಒಂದು; P ಮರ್ತ್ಯಲೋಕದಲ್ಲಿರುವಂತೆ ದೇವಲೋಕದಲ್ಲೂ ರಾಜ್ಯಾಂಗವ್ಯವಸ್ಥೆ ಇದೆ. ಸೌಧರ್ಮೇಂದ್ರಾದಿ ಇಂದ್ರರಿಗೂ ಸೈನ್ಯವಿದೆ. ಆ ಸೈನ್ಯವನ್ನು ಅನೀಕವೆಂದು ಕರೆಯುತ್ತಾರೆ. ಆ ಸೈನಿಕರಿಗೆ ಅನೀಕದೇವತೆಗಳೆಂದು ಹೆಸರು. ಇವರಿಗೆ ವೈಕ್ರಯಿಕ (ನಾನಾರೂಪವನ್ನು ತಾಳಬಲ್ಲ) ಶಕ್ತಿಯಿದೆ. ಇವರು ಏಳು ಬಗೆಯ ರೂಪವನ್ನು ತಾಳಿ ಇಂದ್ರನನ್ನು ಸೇವಿಸುವ ಸೇನಾಂಗವೆನಿಸುತ್ತಾರೆ. ಅವು ಯಾವುವೆಂದರೆ ೧. ವೃಷಭ = ಎತ್ತು. ೨. ರಥ = ತೇರು. ೩. ತುರಗ = ಕುದುರೆ. ೪. ಮಂದಗಜ = ಆನೆ. ೫. ಪದಾತಿ ಅಥವಾ ಭೃತ್ಯವರ್ಗ=ಕಾಲುಬಲ. ೬. ನರ್ತಕ ಅಥವಾ ನರ್ತಕಿ = ನಾಟ್ಯವಾಡುವವರು. ೭. ಗಂಧರ್ವ = ಸಂಗೀತಗಾರರು. ಈ ವಿವರಗಳು ಸರ್ವಾರ್ಥಸಿದ್ಧಿ ಮೊದಲಾದ ಜೈನಗ್ರಂಥಗಳಲ್ಲಿ ದೊರಕುತ್ತದೆ: ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕಸಮೇತನುಂ (ಆದಿಪು. ೬-೦೩ ವ); ಗಜತುರಗಸ್ಯಂದನಪದಾತಿ ಗವೇದ್ರ ಗಂಧರ್ವ ನರ್ತಕೀಪ್ರಮುಖ ಪ್ರಥಿತಸಪ್ತಾನೀಕಸಂಯುತನುಂ (ನೇಮಿಪು. ೨-೩೨ವ); ಗಜತುರಗಪದಾತಿರಥಗಂಧರ್ವನರ್ತಕೀವೃಷಭವಿಕಲ್ಪದಿಂ ಸಪ್ತವಿಧಮಂಗರಕ್ಷಕರ್ ಪದಿನಾಱುಸಾಸಿರಂ (ತತ್ತ್ವಪ್ರ. ೧೯೪); ಸಿಂಧುರಘಟಾಸಂದೋಹದಿಂ . . . ನವನರ್ತಕೀನಿವಹದಿಂ ಗಂಧರ್ವಸಂದೋಹದಿಂದಿದು ಸಪ್ತಾಬ್ಧಿಯೆಸಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೭). ೩. [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜ ಕೌಶಿಕಿ ಧ್ರುವಮಾಳ ಪಂಚಮಧ್ರುವಮಾಳ ಪಂಚಮಗಾಂಧಾರ ರೂಪಸಾಧಾರಣವೆಂಬೀಳುರಾಗಂಗಳಿಂ ಸಪ್ತಸಾಧಾರಣಜಾತೀಯಂಗಳು (ವಿವೇಕ. ೨೩೩). [ ಸಂ. ನರ್ತಕೀ ]

**ನರ್ತನ** (ನಾ). ರಂಗದ ಮೇಲೆ ನಡೆಯುವ ನಾಟ್ಯಾಭಿನಯ; ನೃತ್ಯ; ನಾಟ್ಯವಾಡುವುದು; ಕುಣಿತ: ಬೇಡನನರ್ತನ ಹಾಸ್ಯವನಾಡಂಬರ ನಟನವೇಣುವಾದನಗೇಯಕ್ರೀಡೆಗಳಿಂ. . . ರಾಮಕೃಷ್ಣರಿರ್ದವಸರದೊಳ್ (ಜಗವಿ. ೪-೪೮); ಗಣನಾಥವಕ್ತ್ರಸರಸೀರುಹಕೇಳಿನಿವಾಸದಲ್ಲಿ ನರ್ತನಮನೊಡರ್ಚಿ . . . ಇನಿಸು ಬಟಲ್ದ ವಾಗ್ವನಿತೆ ವಿಶ್ರಮಿಸಿರ್ಕೆ ಮದಾನನಾಬ್ಜದೊಳ್ (ಪುಷ್ಪಪು. ೧-೭): ನರ್ತನದಿಂ ನವಶಕ್ತಿಯು ಹೊಮ್ಮಿ . . . ತೋರ್ಪುದು ಸುಖದುಃಖಗಳನು! (ಪಾಂಚಜ. ೧೯-೧೫); ಸರಳಳು ವೈದ್ಯನಾಥರಲ್ಲಿ ನರ್ತನವನ್ನು ಕಲಿಯುತ್ತಿದ್ದಳು (ಕಲಾಸ. ೨೦). [ ಸಂ. ]

**ನರ್ತನಗಾತಿ** 'ನರ್ತನಗಾರ್ತಿ' ನೋ.

**ನರ್ತನಗಾರ್ತಿ, ನರ್ತನಗಾತಿ** (ನಾ). ನೃತ್ಯಮಾಡುವವಳು; ನರ್ತಕಿ: ಸುರನರ್ತಕಿಯರೊಳು ಮತ್ಸರವಾಂತರೀ ನರನರ್ತನಗಾರ್ತಿಯರ ಪರಮೋತ್ಸವದೆ ನೋಡುತ ಬಂದ (ಮೋಹತ. ೧೨-೩೪). ನರ್ತನಗಾತಿ: ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತಶಬ್ದಗಳ ವಡಿ ತಪ್ಪದೆ ಕೋಲಚಾರಿಗಳಿಂದ ಜಕ್ಕುಡಿ ಮೆಟಿದುವು ದೇವಾಲಯದಿ (ಮೋಹತ. ೧೮-೭); ತಾಳಮದ್ದಳೆಗೀತ ನರ್ತನಗಾತಿಯ ಮೇಳ ವಿದ್ವತ್ಸಭೆ ಸುರರ ಜಾಲಕ್ಕೆ ಹಸೆಯಿತ್ತು ಬೀಳ್ಕೊಟ್ಟು (ಮೋಹತ. ೪೩-೩೭).

[ ನರ್ತನಗಾಱ + - ತಿ₁ ( < - ಇತ್ತಿ ) ]

**ನರ್ತನಗಾಱ** (ನಾ). ನೃತ್ಯ ಮಾಡುವವನು; ನರ್ತಕ. 'ನರ್ತನಗಾರ್ತಿ', ಪರಾ. [ ನರ್ತನ + - ಗಾಱ ( < - ಕಾಱ ) ]

**ನರ್ತನಗೃಹ** (ನಾ). ನೃತ್ಯಮಂದಿರ; ನಾಟ್ಯಶಾಲೆ: ಜಗದೊಳ್ ನಾಟ್ಯಪ್ರಭು ಶಾಂತಿವರ್ಮನೆಸೆವಂ . . . ಸಾಹಿತ್ಯಲೀಲಾಗೃಹಂ ಭಗವಜ್ಜೈನಮತೋಕ್ತಿ ನರ್ತನಗೃಹಂ (ಪುಷ್ಪಪು. ೧-೭೬). [ ನರ್ತನ + ಗೃಹ ]

**ನರ್ತನವಿದ್ಯೆ** (ನಾ). ನಾಟ್ಯ; ನೃತ್ಯಕಲೆ: ಮಕ್ಕಳು ನರ್ತನವಿದ್ಯೆಯ ಕಲಿತರು (ಇಂಚಾಪ. ೪೭-೨೦). [ ನರ್ತನ + ವಿದ್ಯೆ ]

ನರ್ತನಶಾಲೆ (ನಾ). = ನರ್ತನಗೃಹ : ಮತ್ತಮಾ ವನಂಗಳಲ್ಲಿ ಚಿತ್ರಶಾಲೆ . . . ನರ್ತನಶಾಲೆ ಗಾನಶಾಲೆ ಕ್ರೀಡಾಶಾಲೆ . . . ತರುವಾಟಗಳ ತಣ್ಣೆಳಲ್ಗಳೊಳಗೆಯುಂ (ವಿವೇಕ. ೨೨೮). [ ನರ್ತನ + ಶಾಲೆ ]

ನರ್ತನಸ್ಥಳ (ನಾ). = ನರ್ತನಸ್ಥಾನ : ರಂಗಃ – ನರ್ತನಸ್ಥಳವುಂ, ರಂಗವಲ್ಲಿಯುಂ (ಕಾಶಿಕ. ೨೦೪). [ ನರ್ತನ + ಸ್ಥಳ (= ಸ್ಥಲ) ]

ನರ್ತನಸ್ಥಾನ (ನಾ). ರಂಗಮಂಟಪ ; ರಂಗಸ್ಥಳ : "ನರ್ತನಸ್ಥಾನವಮದು ರಂಗಮಕ್ಕು" (ಮಂಗರಾ. ೨೪-೬). [ ನರ್ತನ + ಸ್ಥಾನ ]

ನರ್ತನೋತ್ಸವ (ನಾ). (ಒಂದು ದಿನ ಅಥವಾ ಅನೇಕ ದಿನಗಳು ನಡೆಯುವ) ನಾಟ್ಯಕ್ಕೆ ಸಂಬಂಧಿಸಿದ ಸಂತೋಷಸಮಾರಂಭ,-ಉತ್ಸವ: ೮೭ನೆಯ ಪ್ರಕರಣದ ನರ್ತನೋತ್ಸವದಲ್ಲಿ ಎಲ್ಲ ನವೀನ ಪಾತ್ರಗಳು ಸಾಮುದಾಯಿಕವಾಗಿ ನಮ್ಮ ಚಿತ್ತದಲ್ಲಿ ನೆಲಸುತ್ತವೆ (ಸಮಜೀ. ೨೪ ಟೀಕೆ). [ ನರ್ತನ + ಉತ್ಸವ ]

ನರ್ತಿಣಿ (ನಾ). ನರ್ತಕಿ ; ನಾಟ್ಯ ಮಾಡುವವಳು : ನರ್ತಿಣಿಯು ತೆರದೊಳಗೆ ಲೋಕವಿದೂರಿತ್ಪುದು ತ್ರ್ಯವಾಯು ಬಿಗಿಯೊಳು ಸುತ್ತಿಹುವು (ಪಶುಭಾ. ೧-೧೪) : ಸಿಡಿಲ ಮುರಜಂಬರವೆ ತೆರೆ ಅರಲ್ಪಿಡಿವ ಪುಷ್ಪಾಂಜಲಿಯ ಮಳೆ ಬೆಮರೊಡವ ತೆರದಿಂ ನಟಿಸೆ ಕುಡಿಮಿಂಚೆಂಬ ನರ್ತಿಣಿಯು (ಜಿರಾಮಾ. ೧೧೧-೪೬). 'ನಚ್ಚಣಿ' ಪರಾ. [ < ಸಂ. ನರ್ತಿನೀ ]

ನರ್ತಿಸು (ಕ್ರಿ). ೧. ಕುಣಿ ; ನಾಟ್ಯಮಾಡು : ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಪಂಪಭಾ. ೧೨-೦೪೪) : ಭೂತಗಣಂ ಪೇರಾನೆಯ ನೆಣಸಂ ತಿಂದೆರ್ದ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII. ಸಾಗರ. ೧೦೯-೩೯ ; 1042) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾಅ. ೧-೫) : ನರ್ತಿಸು, ತಾಯಿ, ಅಜಜಾಯಿ, ಮಮ ಮಸ್ತಕ ನೀರೇಜದಲಿ ! (ಅನಿಕೇ. ೧-೧). ೨. ಆಡು ; ಚಲಿಸು : ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೬೨). [ ನರ್ತನ + – ಇಸು$_3$ ]

ನರ್ದನ (ನಾ). (ದನಗಳ) ಗುಟುರು ; ಗರ್ಜನೆ : ಜನಾರ್ದನ ನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನ ವ್ಯಣ್ಮಿದುದದೊಂದು ವಜ್ರಾಶನಿವೊಲ್ (ಜಗವಿ. ೫-೩೪). [ ಸಂ. ]

ನರ್ಮ$_1$ (ನಾ). ೧. ಆಟ ; ಲೀಲೆ ; ಕ್ರೀಡೆ ; ವಿನೋದ. ೨. (ಶೃಂಗಾರದಲ್ಲಿನ) ಪರಿಹಾಸ; ನಗೆ; "ಸ್ತ್ರೀ ಪುರುಷರ ಪರಿಹಾಸ" (ಅಮರ. ಟೀಕೆ). ೩. ಚೆಲುವು ; ಸೊಗಸು : ಕೂರ್ಮೋನ್ನತಮೆನಿಸಿರ್ದ ಪದಂಗಳ್ ನರ್ಮಮನಾದರಿಸಿದವು ಮಡಂಗಳ್ (ಸುಕುಮಾ. ೫-೫೦ ರಗಳೆ). ೪. ಸಂತೋಷ ; ಉಲ್ಲಾಸ : ಧರ್ಮಮೆ ದೇಹಿಗ(ಮಿ)ಹಪರ ಶರ್ಮಕ್ಕೆ ನಿದಾನಂ . . . ನರ್ಮದಿನೆಸೆಗುತ್ಕಟಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಷ್ಪಪು. ೩-೧೦೪). [ ಸಂ. ನರ್ಮನ್ ]

ನರ್ಮ$_2$ 'ನರಮ್' ನೋ.

ನರ್ಮಕಥೆ (ನಾ). ವಿನೋದದ ಪ್ರಸಂಗ,-ಘಟನೆ : ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು (ಕಾವ್ಯಸ. ೪೯). [ ನರ್ಮ$_1$ + ಕಥೆ ]

ನರ್ಮಕುಂಜ (ನಾ). ವಿನೋದವಾಗಿ ಕ್ರೀಡಿಸುವ ಲತಾಮಂಟಪ ; ಕ್ರೀಡಾಸ್ಥಾನ ; ಕೇಳೀಸದನ : ಕವಿಯ ಹೃದಯವೆ ನರ್ಮಕುಂಜ ಕವಿತಾಸತಿಗೆ (೧೪ವಿಂ. ೨೧-೦೪). [ ನರ್ಮ$_1$ + ಕುಂಜ ]

ನರ್ಮಗೋಷ್ಠಿ (ನಾ). ವಿನೋದದ ಗೋಷ್ಠಿ ; ಸಂತೋಷಕೂಟ : ನಯಸಂಪನ್ನನತೀವಯುವ್ವನಯುತಂ ರೂಪಾನ್ವಿತಂ ನರ್ಮಗೋಷ್ಠಿಯ ನಾಳ್ದಂ . . . ಉತ್ಸಾಹಿಯೆನಿಪ್ಪನೊಳ್ಳರೆವ ಪೆಣ್ಗಾ ರಂಭೆಯೇಂ ಸಾಟಿಯೇ (ರಾಜಶೇ. ೧೦-೧೫೦). [ ನರ್ಮ$_1$ + ಗೋಷ್ಠಿ ]

ನರ್ಮದೆ (ನಾ). ೧. ಸಂತೋಷಪಡಿಸುವವಳು ; ನಗಿಸುವವಳು. ೨. ಒಂದು ನದಿಯ ಹೆಸರು ; P ಭರತಖಂಡದಲ್ಲಿ ಬಹಳ ಪವಿತ್ರವಾದುದೆಂದು ಭಾವಿಸುವ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬ ಏಳು ಮಹಾನದಿಗಳಲ್ಲಿ ಒಂದು : "ಮೇಖಳಕನ್ಯಾ, ನರ್ಮದಾ, ರೇವಾ – ಈ ೩ ನರ್ಮದೆ" (ಹಲಾಯು. ೧೦೦೦-೫೨) ; ನರ್ಮದೆಗೆ ಹೋದರೆ ಕರ್ಮ ತಪ್ಪೀತೇ? (ಗಾದೆ). [ ಸಂ. ನರ್ಮದಾ ]

ನರ್ಮದ್ಯುತಿ (ನಾ). ೧. ಸಂತೋಷಕರವಾದ ಬೆಳಕು : ನಿರ್ಮಲಜಲಕಲನಾದಾಹ್ಲಾದಿನಿ ನವಶಶಿನರ್ಮದ್ಯುತಿಸಂವಾದಿನಿ ಗಂಗೆ ತರಂಗಿಣಿ ಮಂಗಳವೆರೆಯ (ಗಹೇಶ. ೧೫-೩೪೦). ೨. [ಕಾವ್ಯವಿ] ನಾಟಕವೇ ಮೊದಲಾದ ರೂಪಕಗಳಲ್ಲಿ ಇರಬೇಕಾದ ಅರುವತ್ತನಾಲ್ಕು ಸಂಧ್ಯಂಗಗಳಲ್ಲಿ ಒಂದು ; ಪ್ರತಿಮುಖಸಂಧಿಯಲ್ಲಿ ಆರನೆಯ ಅಂಗ ; ಪರಿಹಾಸದಿಂದ ಹುಟ್ಟಿದ ಧೈರ್ಯ ಅಥವಾ ಸಮಾಧಾನ, ದೋಷವನ್ನು ಮುಚ್ಚಲು ಬಳಸುವ ಹಾಸ್ಯ. [ ಸಂ. ]

ನರ್ಮಲಿ (ನಾ). ಒಂದು ಬಗೆಯ ಗಿಡ : ಇಬ್ಬದಿಯ ಆಡಸೋಗೆ, ನರ್ಮಲೀಗಿಡಗಳ ಬೇಲಿಗಳಿಂದ ಬೆಲ್ಲಗೆಡ್ಡೆಯ ಬಾಳಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ ? ]

ನರ್ಮವಚನ (ನಾ). ವಿನೋದದ ಮಾತು,-ನುಡಿ : ನಾರಿಯರ ನರ್ಮವಚನಕ್ಕೆ ನಂದನದ ಮುದಾರದಂದದಿ ಕಾಡ ಜೇವು ಹೂವಪ್ಪುದೇ (ಸಮ್ಯಕ್ತ್ವಾ. ೫-೬೬). [ ನರ್ಮ$_1$ + ವಚನ ]

ನರ್ಮಸಖ (ನಾ).=ನರ್ಮಸಚಿವ : (ಶ). [ ಸಂ. (ನರ್ಮ + ಸಖಿ + –) ]

ನರ್ಮಸಚಿವ (ನಾ). ಅರಸನ ಶೃಂಗಾರ ಮತ್ತು ವಿನೋದದ ಕ್ರೀಡೆಗಳಲ್ಲಿ ಜೊತೆಯಲ್ಲಿರುವವನು,-ಸಹಾಯಕ ; ವಿದೂಷಕ ಮೊದಲಾದವರು ; ಆಪ್ತಸಚಿವ ; ಅಂತರಂಗದ ಸಹಾಯಕ : ಭೀಮಸೇನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದಂ (ಗದಾಯು. ೨-೮ ವ); ಅವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ . . . ಮಂಗಳಗಾಯಿನೀಮಧುರಗೀತಮನಾಲಿಸುತ್ತುಮಿರ್ಪಿನಂ (ಮಲ್ಲಿಪು. ೫-೨೪) ; ಅಂತವರ್ ನರ್ಮಸಚಿವರಂತಿಚ್ಛೆಯಂ ಪ್ರತಿಪಾಲಿಸಿ ನುಡಿವುದುಂ (ಪಂರಾಮಾ. ೧೨-೫೦ ವ) ; ನರ್ಮಸಚಿವಪ್ರಕೋಪ್ಪನಿವೇಶಿತ ಸವ್ಯಪಾಣಿಪಲ್ಲವನುಂ (ಚಂದ್ರಪ್ರ. ೭-೯೩ ವ) ; ನರ್ಮಸಚಿವಪ್ರಸಾರಿತ ಕರಪಲ್ಲವನ್ಯಸ್ತಹಸ್ತಕಮಳನುಂ . . . ಆಗಿ ನಡೆತರ್ಪಾಗಳ್ (ರಾಜಶೇ. ೧೦-೧೫ ವ) ; ಅವನು ನಯಾಜನ ಅಂತರಂಗದ ಮಿತ್ರನೂ ನರ್ಮ ಸಚಿವನೂ ಆಗಿದ್ದನು (ರಾಜ್ಯೋದ. ೦೪೩) ; ಗೋವಿಂದಭಟ್ಟ, ಗೌಡರ ನರ್ಮಸಚಿವ. ಗೌಡರ ಯೋಜನೆ – ಹಂಚಿಕೆಯ ಅಲಿಖಿತ ರೆಕಾರ್ಡ್‌ಕೀಪರ್ (ದೀಪಹ. II, ೪೫). [ ಸಂ. ]

ನರ್ಮಸಹಾಯ (ನಾ).=ನರ್ಮಸಚಿವ : ಅತನುವನತಿಶಯದಿಂ ಋತುತತಿಗಳ್ ಬಳಸುವವೊಲೆಳಸಿ ಬಳಸಿದರಂತಾ ಕ್ಷಿತಿಪತಿಸುತನಂ ವಿಟಪಂಡಿತನಟಪರಿಹಾಸಕಾದಿ ನರ್ಮಸಹಾಯರ್ (ಅರ್ಧನೇ. ೪-೦೩೩).
[ ನರ್ಮ$_1$ + ಸಹಾಯ ]

ನರ್ಮಾಲಾಪ (ನಾ). ವಿನೋದದ ಮಾತು ; ನಗೆನುಡಿ : ಪಲವುಂ ನರ್ಮಾಲಾಪಂಗಳಿಂದವೆ ಸುಖಾಯಮಾನಸ್ವಾಂತನಾಗಿ ರಾಜಾಧಿರಾಜಂ . . . ಪೋಪುದುಂ (ಕಾದಂಉ. ೪೦೭). [ ಸಂ. ]

ನರ್ಮೋಕ್ತಿ (ನಾ).=ನರ್ಮಾಲಾಪ: ಪರಿಪಂಥಿಯ ನರ್ಮೋಕ್ತಿಗಳ ಬಂಧುರವಿಹಾರಂಗಳನು ನೆನೆದಂಬುರುಹಮುಖಿಯರು ತಾಳಿದರು ಕೃಷ್ಣಾತ್ಮಭಾವನೆಯ (ನಿಭಾಗ. ೧೦-೨೬-೨೪). [ ಸಂ. ]

ನರ್ವಲ್ 'ನಱುವಲ್' ನೋ.

**ನರ್ವಾಳಿ** (ನಾ). ಒಂದು ಬಗೆಯ ಗಿಡ : ನರ್ವಾಳಿ, ಕಿರಿಚಳ್ಳಿ (ವೈಜಿಗ. ೨೪–೪೫೪). [ ? ]

**ನರ್ಸ್**, **ನರಸು**, **ನರ್ಸು** (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ದಾಯಿ : ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್ . . . ನರ್ಸ್ ಕೂಡಾ ನಾನೇ ನಾನು (ಸೀತಾರ. ೯೨) ; ಗುಲಾಬಿಯಂಥ ಚಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಕಾಯಿಲೆಯ ಜನ ಬಂದಾರಲ್ಲ ? (ಜಾರುದಾ. ೧೮೦). ನರಸು: 'ನರಸಮ್ಮ' ಪರಾ. ನರ್ಸು: ಓರ್ವ ನರ್ಸಿನ ಸಹಾಯದಿಂದ ಪರೀಕ್ಷೆ ನಡೆಯಿಸಿದ ಡಾಕ್ಟರು .... ಗಾಬರಿಯ ಧ್ವನಿಯಲ್ಲಿಯೇ ಹೇಳಿದರು (ಸಮಜೀ. ೧೧೧೯). [ ← ಇಂ. Nurse ]

**ನರ್ಸು** 'ನರ್ಸ್' ನೋ.

**ನಲ್** (ಗು). ೧. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : "ನಲ್ಲೆಂದೊಳ್ಳಿತು"(ಚತುನಿ. ೧೦೦). 'ನಲ್ಗುಣ', 'ನಲ್ಗುದುರೆ', 'ನಲ್ತಪ' ಪರಾ. ೨. ಅಂದವಾದ ; ಸೊಗಸಾದ ; ಮನಸೆಳೆಯುವ : "ನಲ್ ನಯುಕ್ಕೆಸಕಮದು" (ಕಶಿರ. ೧೨೫). 'ನಲ್ಗಾಡಿ', ನಲ್ಜವ್ವನೆ', 'ನಲ್ವೆಱಿ' ಪರಾ. ೩. ಹಿತವಾದ ; ಪ್ರಿಯವಾದ ; ಪ್ರೀತಿಯ. 'ನಲ್ನುಡಿ$_2$', 'ನಲ್ವರಕೆ'. 'ನಲ್ವಾತು' ಪರಾ. ೪. ಸವಿಯಾದ ; ಮಧುರವಾದ. 'ನಲ್ಗಂಪು'. 'ನಲ್ಗಳಲ್', 'ನಲ್ನುಡಿಟುಕು', 'ನಲ್ದಂಬುಲ', 'ನಲ್ಲುಣಿಸು' ಪರಾ. ೫. ಹರಿತವಾದ ; ತೀಕ್ಷ್ಣವಾದ. 'ನಲ್ಲಂಬು' ಪರಾ. ೬. ಅತಿಶಯವಾದ ; ಹೆಚ್ಚಾದ. 'ನಲ್ಸೊಗ' ಪರಾ.

ನಲ್ಲದು = ಒಳ್ಳೆಯದು : ನಲ್ಲದು ನನ್ನುಮನ್ ನನ್ನೆಗ್ಗತನಮುಮನ್ ಬಿಟ್ಟು ಕಳೆಯಿೀಗಳ್ (ಅಂತಿಗೊ. ೫–೮೦). ನಲ್ಲವರ್ = ಒಲಿದವರು ; ನಲ್ಲರು : ಅಂತೆ ಮಾತಾಡುವ ರಾಜಕೀರ ಒಲವಟ್ಕಿಸಲಾಜಿದಗಲ್ದು ಪೂವಿನಂಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ (ಎಇ. XIII, ೪೪–೪೬ ; 1112 ; ಶಾಪಮಂ. ೨೧೬ ನೋ). ನಲ್ಲವಳ್ = ಪ್ರಿಯೆ ; ನಲ್ಲೆ : ಅಳುರ್ವತನುಸಂತಾಪಕ್ಕುಳ್ಳಳ್ಕಿ ನಲ್ಲವಳಿಂಬುಕೆಯ್ವಳಿವಸಲೆಯುಂ ಕೇಳೀಶೈಳಂಗಳಂ . . . ಸೆಱಿಗೆಯ್ದನಾಕುಳಮೆನೆ ಕುಳಿಕೊರ್ಣೀಡಿತ್ತಾಗಳ್ ಮನಂ ಮನುಜೇಂದ್ರನಾ (ವರ್ಧಪು. ೪–೭೨). ನಲ್ಲಾತ = ಸ್ವಾಮಿ; ಒಡೆಯ: ನಲ್ಲಾತಂ ಶ್ರೀಮತ್ ಸೋಮಯ್ಯ (ಎಕ. XI, ಚಿತ್ರದು. ೪೯–೭೦ ; 947); ಆನೆವೆಡೆ(ಡ)ಙ್ಗಂ ಮದಗಜಮಲ್ಲಂ ಧಾಲಕೆ ನಲ್ಲಾತಂ ಶ್ರೀ ಕನ್ನರದೇವನ ರಾಜ್ಯಂ (ಇಆ. XII, ೨೫೭–೨; 951); ಯಸಕ್ಕೆ ನಲ್ಲಾತಂ ಶ್ರೀಕೊಟ್ಟಿಗದೇವನ ರಾಜ್ಯಂ (ಸೌಇಇ. XI–I, ೪೩–೪; 970) ; ಪರಬಳಧೂರ್ತ್ತಂ ಕೃತಯುಗ ಚರಿತನಾಳ್ಗೆ ನಲ್ಲಾತಂ (ಸೌಇಇ. XI–I, ೯೨–೭ ; 1054).

[ ದೇ.॥ ತಮಿ. ಮಲ. ನಲ್; ತುಳು. ನಲ್, ನಲು ; ಕೊಡ. ನಲ್ಲೆ; ಗೊಂಡಿ. ನೆಲಾ ]

**ನಲ$_1$** (ನಾ). ೧. ನಲಿವು ; ಸಂತೋಷ. 'ನಲಂದಳೆ', 'ನಲವೆಚ್ಚು' ಪರಾ. ೨. ಪ್ರೀತಿ ; ಮಮತೆ. 'ನಲವರಕೆ' ಪರಾ.

[ ದೇ.॥ ತಮಿ. ನಲ; ಮಲ. ನಲ = ಒಳ್ಳೆಯತನ, ಸೌಂದರ್ಯ; ತುಳು. ನಲ = ಒಳ್ಳೆಯ ]

**ನಲ$_2$**, **ನಳ$_1$** (ನಾ). ೧. ಒಂದು ಬಗೆಯ ಜೊಂಡು,- ಹುಲ್ಲು ; ಲಾಳದ ಕಡ್ಡಿ ಹುಲ್ಲು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ಪ್ರಸಿದ್ಧ ರಾಜ; ವೀರಸೇನನ ಮಗ; ದಮಯಂತಿಯ ಗಂಡ. ೪. ರಾಮಾಯಣದಲ್ಲಿ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿ. ೫. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು. ನಳ$_1$ : ೩. ಹರಿಶ್ಚಂದ್ರ ನಳ ಪುರು . . . ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ (ಮಂಗರಾ. ೭೮–೨); ನಳನ ನಹುಷನ ಶಾಲಿಹೋತ್ರನ ಬಲುಮೆಗಳು ಕಿಱಿದೆಂಬ . . . ಹಯಪ್ರೌಢಪ್ರತಾಪರು ಹೊಳೆವ ಮಕುಟದ ಸಾಲುಗಳಲೊಪ್ಪಿದರು ರಾವುತರು (ಕುವ್ಯಾಉ. ೮–೪೧) ; ವಿತಱಣಯಾಸವಿವ್ರ ಜಗದ್ವಿಖ್ಯಾತನಲ್ಲಾ ರಾಯರಲ್ಲಿ ನಳನಾತಗಾದಾಪತ್ತ ಬಲ್ಲೈ ಕೇಳಿ ಪೂರ್ವದಲಿ (ತೊರರಾ. ೩–೨–೧೩). ೪. ಒದೆದ ಕೆಡಹಿದ ನಳನ ಮೈಂದನ ಸದೆದ ನೀಲನ ತುಳಿದ (ಕಾಶಿರಾ. ೨೫–೨೨); ಇಟ್ಟ ಗಿರಿಗಳ ಹಿಡಿಹಿಡಿದು ನಳನೊಟ್ಟಿದನು ಮೆಟ್ಟಿದನು ಕಟ್ಟಿದನಿಟ್ಟಣಿಸಿ ಬಹ ಗಿರಿಯನಾ ಬಳಿಸಲಿಸಿ ಬಹ ಗಿರಿಯ (ತೊರರಾ. ೬–೫–೨೨) ; ನಳ ನೀಲ ಅಂಗದ ಜಾಂಬವಂತ ದಳಪತಿಯಧಿಕ ಸುಗ್ರೀವ ಬಲವಂತ (ಪುರಂದ. ೩–೮೭–೫). ೫. ಮತ್ತಮಾ ವರುಷವೇ ಪ್ರಭವ . . . ನಳ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೧). ೬. ಒಂದು ಬಗೆಯ ವಿಮಾನ ; ಕಿರುವಿಮಾನ : ಬಕ ಮರಾಳ ರಥಾಂಗ ಸಾರಸನಿಕರ ಪುಳಿನಸ್ಥಳದೊಳಿರೆ ನಳಮುಕರನಕ್ರಜಳೂಕ ಮಡುಗಡಲೊಳಗೆ ಸಂಚರಿಸೆ (ಅಕ್ರೂಚ. ೫–೨೬). 'ನಳವಿಮಾನ' ಪರಾ. ೭. [ಜ್ಯೋತಿ] ಒಂದು ಬಗೆಯ ಯೋಗ. 'ನಳಯೋಗ' ಪರಾ. [ ಸಂ. ]

**ನಲಂದಳೆ** (ಕ್ರಿ). ಸಂತೋಷಪಡು ; ಸಡಗರಿಸು ; ಸಂಭ್ರಮಿಸು : ಅಕಂಪನೃಪಂ ಅಲಘುಪ್ರಿಯದಿಂದಿದಿರ್ವಂದು ನಲಂದಳೆದು ಪೊಳಲನೆಯ್ದಿಸಿ . . . ಸಕಲಸನ್ಮಾನಂ ಮಾಡಿದನು (ಜಯಕಾ. ೪–೪೬). [ ನಲ$_1$ + ತಳೆ$_1$ ]

**ನಲಕ**, **ನಳಕ** (ನಾ). ೧. ದೇಹದ ಉದ್ದವಾದ ಎಲುಬು,- ಮೂಳೆ. ೨. ಕೈಯ ಅಥವಾ ಕಾಲಿನ ಎಲುಬು ; ಶಾಖಾಸ್ಥಿ. ನಳಕ : ೨. "ಕೆಯ್ಯ ಕಾಲ ಎಲ್ವು ನಳಕಯೆಂಬುದು" (ಹಲಾಯು. ೧೦೪–೧೨) ; "ನಳಕಮೆನೆ ಶಾಖಾಸ್ಥಿಯೆಂದೆನಲು ಕೈಕಾಲ ಯೆಲುವು" (ಮಂಗರಾ. ೧೧೭–೬). [ ಸಂ. ]

**ನಲಕುಪ್ಪ** (ನಾ). (?) : ಮೃಗಶಿರೆ ನಲಕುಪ್ಪಿನ ಹಾಗೆ ೩ ಆದ್ರೆ ಹವಳದ ಹಾಗೆ ೧ (ಭಾಸ್ಕರ. ೬೦–೨). [ ? ]

**ನಲಕೂಬರ**, **ನಳಕೂಬರ** (ನಾ). ಕುಬೇರನ ಮಗ. ನಳಕೂಬರ: ಪೆಱತೇನುಮಂ ಬಗೆಯದೆ ನಳಕೂಬರನೊಳ್ ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮುಮಂ ಪತ್ತುವಿಡಿಸಿ (ಪಂರಾಮಾ. ೧೦–೧೯೫ ವ) ; ಸುರರಮಣ ನಳಕೂಬರಾಧಿಕಸರಸಕಾಮುಕರಂ ಸಮಸ್ತಾಮರರನೆಲ್ಲರ ಬಗೆಯದನಿಮಿಷ ಸತಿಯರು ಸಹಸ್ರ ನೆರೆದು ನಿನ್ನಂ . . . ಮನಸಿಜಸುಖಾಮೃತಶರನಿಧಿಯೊಳೋಲಾಡಿಸುತ್ತಿರಲ್ (ಬಸಪು. ೪೧–೧೮) ; ಉರ್ವ ನಳಕೂಬರ ಜಯಂತಾದಿ ಸುರತನುಜರುರ್ವರೆಗದೇಕೆ ಬಹರು (ಜೈಮಿಭಾ. ೩೦–೨೧).

[ ಸಂ. ]

**ನಲಕೆ** (ನಾ). ಒಂದು ಬಗೆಯ ಸುಗಂಧದ್ರವ್ಯ: (ಶ). [<ಸಂ. ನಲಿಕಾ]

**ನಲಗು** 'ನಲುಗು$_1$' ನೋ.

**ನಲದ** (ನಾ). ಲಾಮಂಚ ; ಉಶೀರ. [ ಸಂ. ]

**ನಲಭರಿತ** (ನಾ). ನಲಿವಿನಿಂದ ಕೂಡಿದುದು ; ಸಂತೋಷಭರಿತವಾದುದು ; ಸುಖಮಯವಾದುದು : ಅರರೆ ನೆಲ ನಲಭರಿತವಮೃತದ ಶರಧಿ ಸಾವಿರವಪ್ಪುವಂಗಡಿ ಮೆಱೆವ ಗಣಿಕಾಭವನ ಕೋಟೆಯ ಸುತ್ತಲುದ್ಯಾನ (ಕಾಶಿರಾ. ೧–೨೩). [ ನಲ$_1$ + ಭರಿತ ]

**ನಲವಿಮಾನ**, **ನಳವಿಮಾನ** (ನಾ). ಒಂದು ಬಗೆಯ ವಿಮಾನ ; ಚಿಲಿಚಿಮ : "ನಲವಿಮಾನ ಚಿಲಿಚಿಮ ಎಂದೊಡೆ ಸಿಸಿಲು, ಚಿಳಿಯ ವಿಮಾನೆಂದು ಎಂಬರು" (ನಾಚಿರಾ. ಶ). ನಳವಿಮಾನ: "ನಳವಿಮಾನಃ, ಚಿಳಿಚಿಮಃ–ಈ ೨ ಕಿಱುವಿಮಾನ್" (ಹಲಾಯು. ೧೦೮–೩೬) ; "ಚಿಳಿಚಿಮವೆನಲು ನಳವಿಮಾನವೆನೆ ಕಿಱುವಿಮಾನ ಪೆಸರೆನಿಪ್ಪುಂ" (ಮಂಗರಾ. ೧೨೧–೬). [ ಸಂ. ]

**ನಲವತ್ತು** 'ನಾಲ್ವತ್ತು' ನೋ.

**ನಲವರಕೆ** (ನಾ). ಪ್ರೀತಿಯಿಂದ ಮಾಡಿದ ಆಶೀರ್ವಾದ : ಅರಸಿ ನಲವರಕೆಯಿಂದಂ ಪರಸುತ್ತಿಂದೆನ್ನ ತಂದೆ ಬಂದನೆನುತ್ತಂ (ಕಾದಂಪೂ. ೪೯೯) ; ಕುಮಾರನನಜಿತಸೇನಮಹಾದೇವಿ ನಲವ[ಪಾಠಾಂ. ನಲ್ವ]ರಕೆಯಿಂ ಪರಸಿ

ಮೋಹರಸಪರವಶತೆಯಿಂ . . . ಅಪ್ಪಿ (ಚಂದ್ರಪು. ೬-೯೦ ವ): ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮಂ ನಿಜಕುಲಕ್ಕಿದುವೆ ಚೂಡಾರತ್ನಮೆಂದು ನೋಡಿ ಪಾರಯ್ಸಿ ಪಲವುಂ ನಲವ[ಪಾಠಾಂ. ಪಲವಂ ನಲ್ವ]ರಕೆಯುಂ ಪರಸಿ (ವರ್ಧಪು. ೫-೪೭ವ) ; ನಿಜಜನನೀಜನಕರಿರ್ಪೆಡೆಗೆ ರಮಣಿವೆರಸೆಯ್ತಂದು ಪೊಡಮಟ್ಟು ನಿಂದಾಗಳ್ . . . ಇರ್ವರುಂ ನಲವರಕೆಯಿತ್ತು ಪರಿತೋಷದಿಂ ಬರಿಸಿ ಕುಳ್ಳಿರಿಸಿ (ರಾಜಶೇ. ೯-೪೩ ವ) ; ನಲವರಕೆಯಿತ್ತು ಸಂತೋಷದಿಂ ನಡೆ ನೋಡಿ ನಲಿದು (ಕುವರಾಪು. ೭-೩೧೪). [ ನಲ₁ + ಪರಕೆ₁ ]

**ನಲವರಿ** (ಕ್ರಿ). ಸಂತೋಷಗೊಳ್ಳು ; ಆನಂದಿಸು : ಭರದಿಂ ತಲೆಯೆತ್ತಿಯುಬ್ಬಿ ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ ದೆಸೆದೆಸೆಯುಂ ಪಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದದಿರಾಂಪರೊರ್ವರುಮಂ ಕಾಣದೆ (ಪಂಚತಂ. ೪೬-೭). 'ನಲಿವರಿ' ಪಾಠಾ.
[ ನಲ₁ + ಪರಿ₂ ]

**ನಲವರಿಕೆ** (ನಾ). ಅಭಿನಂದನೆ: "ಅಭಿನಂದಿಸುವುದು . . . ನಲವರಿಕೆ" (Congratulation. ಇಂಕನಿ) ; ಈಗೆಲ್ಲರೂ ನಲವರಿಕೆ ಸಲ್ಲಿಪರು (ಮೂರುನಾ. ೧೧೮-೬೫೦). [ ನಲವು + ಅರಿಕೆ (<ಅಱಿಕೆ) ]

**ನಲವಾನ್** (ಕ್ರಿ). ಸಂತೋಷವನ್ನು ತಳೆ; ಆನಂದಿಸು; ಪ್ರಸನ್ನಚಿತ್ತನಾಗು : ಏಂ ತಾಳ್ದುದೋ ಚೆಲ್ವನೀ ದೇಶವೆಂದು ನಲವಾಂತು ಮುಂದಳೆಯುತಿರೆ (ಜೈಮಿಭಾ. ೩-೧೩). [ ನಲವು + ಆನ್₁ ]

**ನಲವು** (ನಾ). ೧. ಹಿಗ್ಗು ; ಸಂತೋಷ ; ಸಡಗರ : "ನಲವೆಂದೆನೆ ಸಂತೋಷಂ" (ಭಾರನಿ. ೩೩); ನಲವಿಂ ಕೃತಾರ್ಥಭಾವವನೆಯ್ದುತಿರೆ ಕಂಡು ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೀದಿರ. ದೀ. ೬೪-೧೩) ; ಕೊಬ್ಬಿ ನಲವಿಂದೆ ಮಡಲಿಱಿದಡಸಿ ಬೆಳೆದು (ಸಿದ್ಧರಾ. ೩-೨೩) ; ನಲವಿಂ ಪಂದಿಯು ಬೇಂಟೆಯಾಡಿ (ಉದ್ಭಟ. ೨-೬೯) ; ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ (ಕಬ್ಬಿಗಕಾ. ೮೩) ; ಫಲವ ತಲೆಯಲಿ ಹೊತ್ತು ಬೇಗದಿ ನಲವು ಮಿಗೆ ನಡೆತಂದು (ಕುವ್ಯಾಆ. ೭೦ಇ. ೪-೧೬) ; ಪರಿಮಳದಲರ ಪನ್ನೀರಿನಲಿ ತವಕದಿ ನಲವು ಇಂಗಿದ ಸತಿಯನುಪಚರಿಸಿದರು ಪಲತೆಱದಿ (ನಳಚ. ೧-೩೯) ; ಅರ್ಥಲಾಲಿತ್ಯವೆನುವ ಸತೀತ್ವವಿರದೊಡನುಗೊಳಿಸುವಳೆ ಕವಿತಾರಮಣಿ ರಸಿಕನಿಗೆ ನಲವು ? (೧೪ವಿಂ. ೨೩-೨೪). ೨. ಪ್ರೀತಿ ; ಆದರ : ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ನೆಗಟ್ಟಲ್ ತಗುಳ್ಚಿ ಬಿತ್ತರಿಸಿದು (ಕಾದಂಪೂ. ೭೪೩) ; ಸಕಲಬುಧಸಮಿತಿ ನೆಱೆ ಕೊಂಡುಕೊನೆವು ನಲವಿಂದೆ ಕೀರ್ತಿಸುತ್ತಿರೆ ಮುದದಿಂ . . . ಕಾವ್ಯಾವಲೋಕವಮಂ ವಿರಚಿಸುವೆಂ (ಕಾವ್ಯಾವ. ೩) ; ಯತಿಪಸಮಂತಭದ್ರನನಿಳಾ (ವಳಯುಂ) ನಲವಿಂದೆ ಕೀರ್ತಿಕುಂ (ವರ್ಧಪು. ೧-೧೩) ; ನಲ್ಲನ ನಲವಿಂ ನಡೆ ನೋಡಿ (ಉದ್ಭಟ. ೨-೭೭) ; ಕಂದುಮೋಱೆಯ ರಾಯನನು . . . ಆಲಿಂಗಿಸುತ ನಲವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ(ಕುವ್ಯಾಭೀ. ೧-೧೭). ೩. ಚೆಲುವು; ಸೌಂದರ್ಯ ; ಮನೋಹರತೆ : ಸುಲಲಿತಮಹನಾನಾವರ್ಣಜ್ಝರ ಪಲವಿಧವಾಂತ ಕೇರಿಗಳು ನಲವಿಂದ ಮೆಱೆದಿಹುವು (ಕೇನವಿ. ೨-೭೪). [ ನಲ₁ + – ವು./ತಮಿ. ನಲವು; ತೆಲು. ನಲುವು ]

**ನಲವುಗೆಡು** (ಕ್ರಿ). ಸಂತೋಷಗುಂದು ; ಹಿಗ್ಗು ಇಲ್ಲವಾಗು : ಎನ್ನೋಪಳಾ ಕಂದಿದೊಂದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್ ಪೊರೆದಾಲೋಕನವಾ ಬಟಲ್ವಧರವಾ ಸುಯ್ಯೊಂದು ಪಾಂಗಾ ಸ್ಮರಾತುರಮಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ (ಜಗವಿ. ೧೬-೧೩೧) ; ಮುಂದುಗೆಟ್ಟಿರ್ದೆಯ ಗುಂಡಿಗೆಗಳೊಡೆದರಬರಾಚರಿಸಿದರ್ ನಡುಗಿದರ್ ನಲವುಗೆಟ್ಟಸಿಬರು (ಚಬಪು. ೩೦-೩೭). [ನಲವು+ಕೆಡು₁]

**ನಲವುದಾಳು** (ಕ್ರಿ). ಸಂತೋಷವನ್ನು ತಾಳು ; ಪ್ರಸನ್ನತೆಯನ್ನು ಹೊಂದು : ಭೂಸುರರಿಗೆ ನಿತ್ಯದಾನವ ಮಾಡಿ ನಲವುದಾಳಿದ ಭೂಮಿಪಾಲ (ಕಂನವಿ. ೩೨-೭೭). [ ನಲವು + ತಾಳು₁ (<ತಾಳ್₁) ]

**ನಲವುಮುತ್ತು** (ನಾ). ಆನಂದದ ಅಮಲು ; ಸಂತೋಷದ ಗುಂಗು : ಪರವನಿತ್ತು ನಲವುಮುತ್ತು ನಮಗೆಂದಿಗು ಇರೆ ಹರಸೈ ಗೋಕುಲಾನಂದನಾ (ಗೋಕುನಿ. ೬೩). [ ನಲವು + ಮುತ್ತು₁ ]

**ನಲವೆ** (ನಾ). ಸಂತೋಷಚಿತ್ತೆ ; ಹರ್ಷಿತೆ : ನುಣ್ಣನಿಯ ನೂತನೆ ಭಾಳದ ಭಾಮಿನಿ . . . ನಗೆಗಣ್ಗಳ ನಲವೆ ನಾಸಿಕದ ನೀಱೆ (ಉದ್ಭಟ. ೫-೫೩ ವ).
[ ನಲವು + – ಎ₂ ]

**ನಲವೆಚ್ಚು** (ಕ್ರಿ). ಹಿಗ್ಗು ಹೆಚ್ಚು ; ಸಂತೋಷವು ಅಧಿಕವಾಗು : ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು . . . ಬೇಂಟೆಯಂ ನೋಡುತ್ತ ನಲವೆಚ್ಚುತಂ ಪೋದಳು (ರಾಘಚ. ೧೭-೭೧).
[ ನಲ₁ + ಪೆಚ್ಚು₁ (<ಪೆರ್ಚು₁) ]

**ನಲವೆರೆ** (ಕ್ರಿ). ಪ್ರೀತಿಯನ್ನು ಸುರಿಸು ; ಮಮತೆಯನ್ನು ತೋರು : ಶಿವದ ನೆಲೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ, ನೆನೆದೊಡನೆ ಕೈಳೆ ತೊಳೆದು ನಲವೆರೆದು ನಿಲ್ಲೆನ್ನ ಮನದ ತುಂಬ (ಮಲೆದೇ. ೪೦-೨೦).
[ ನಲವು + ಎರೆ₁ (<ಎಱೆ₁) ]

**ನಲವೇರು** 'ನಲವೇಱು' ನೋ.

**ನಲವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು ; ಹರ್ಷಗೊಳಿಸು : ಕೆಂದಾವರೆಗಳ ಮುಗಿಸುತ ಚಾಳಕವೃಂದವ ನಲವೇರಿ[ಱಿ]ಸುತ ಚಂದ್ರಕಾಂತವ ಕರಗಿಸುತಾಗ ಪರಿಪೂರ್ಣೇಂದುವದನೆಯುರ್ಕೈದಿದರು (ಕಂನವಿ. ೩೦-೭೬). [ ನಲವು + ಏಱಿಸು ]

**ನಲವೇಱು, ನಲವೇರು**(ಕ್ರಿ). ಅಧಿಕವಾದ ಸಂತೋಷವನ್ನು ಹೊಂದು : ಉದಯಗಿರೀಂದ್ರಮನಿನನೇಱೆ ಸರೋಜಸಮಿತಿ ನಲ[ಪಾಠಾಂ. ಯು]ವೇಱುವವೊಲ್ (ಚಂದ್ರಪು. ೭-೩) ; ಹೊಸಪರಿಯ ಬಿರಿಮುಗುಳ್ಗಳಿರೆ ಬೀಗಿ ನಲವೇಱಿ ಮಲ್ಲಿಗೆಯರಳ್ಗಳಂ ಮನವಾರೆ ಶಿಱಿಯುತಂ (ಪುಷ್ಪರ. ಹ. ೫೨೪-೧೮); ಆಗಲದೆ ನೋಡಿನೋಡಿ ನಲವೇಱುವ ದೇವಿಯ ಭೂಪಚಕ್ರಿಯಾ ಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ (ಕುಸುಮಾ. ೬-೧೨೩) ; ದೇಗುಲಕೆ ನಲವೇಱಿ ನಡೆತಪ್ಪಾಗ (ಬಸಪು. ೨೭-೬) ; ದಶರಥನಂದನರ ನಿರೀಕ್ಷಿಸುತ ನಲವೇಱಿದನು ಕಲಿಹನುಮ (ತೊರರಾ. ೬-೩೦-೦೬). ನಲವೇರು : ತೆಂಗಿನ ಗರಿ ತಲೆದೂಗಲಿ ಬಾಗಲಿ ಗಿಡಮರಗಳು ಸಹ ನಲವೇರಿ (ಕಪಪು. ೬-೧೪೯). [ ನಲವು + ಏಱು₁ (<ಏಱ್₁) ]

**ನಲಾವು** 'ನಲ್ಲಾವು' ನೋ.

**ನಲಿ₁** (ಕ್ರಿ). ೧. ಕುಣಿ ; ನೃತ್ಯ ಮಾಡು : ಸುತ್ತಲುಂ ಪರಿವ ಜರಿಪೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೩) ; ನಡುವಿರುಳವರ್ ನಾಟಕಂ ನಲಿದು ಮಱೆದೊಱಗಿರ್ದ ಸಮಯದೊಳ್ (ಪಂಚತಂ. ೩೭೪-೧) ; ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಪಂರಾಮಾ. ೧-೬). ೨. ಹಿಗ್ಗು ; ಸಂತೋಷಪಡು ; . ಆನಂದಿಸು ; ಉಲ್ಲಸಗೊಳ್ಳು : ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೀ ಮುಗುಳೊಳಮಾ ಮಾಟ್ಕೆ ಯನಜಿಸಿ ಸುಟ್ಟುವುದಳಿ ಕಲಕಿಲದೊಳ್ (ಕವಿರಾ. ೩-೧೨೭) ; ಮೆಯ್ಬೆರ್ಚಿ ತನ್ನನಿಜಂ ಬಂದೊಡೆ ನಲ್ಲಳೇಂ ನಲಿದಳೊ ನಾನಾವಿಳಾಸಂಗಳಿಂ (ಆದಿಪು. ೧೩-೪೩).: ಗಗನತಳಮ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧-೫೮); ದೀನವೃದ್ಧದ್ವಿಜನಟಭಟಸಚ್ಚಕ್ರಯುಗ್ಮಂ ಸರುಗ್ಮಂ ನಲಿಯುತ್ತಂ ನೋಡೆ ತನ್ನಂ ಬೆಳಗುವನೆಳೆಯೊಳ್ಬೆಳ್ವಲಾದಿತ್ಯದೇವಂ (ಸಾಇಇ. XI-i, ೪೫-೧೭ ; 980) ; ಅರರೆ ಇಂದ್ರಾಣಿಯರು ನಲಿದು

ಸೀಗುರಿಯಿಕ್ಕೆ (ಬಸರ. ೧-೧೩) ; ನಗುತ ನಲಿಯುತ್ತ, ಹಾಡುತ್ತಾಡುತಾನಂದ ವೊಗೆಯುತಿರಲು (ಹದಕಾ. ೬-೪೪) : ಮರುಳ್ಗಳ ತಂಡಂ ನಲಿವಂತೆ ಕೊಂದಂ (ಉದ್ಭಟ. ೪-೫೪) : ದುಶ್ಶಾಸನಂಗುಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮನ ನಲಿಯೆ (ಕುವ್ಯಾ.ಕ. ೧-೬೦). ೩. ಸಂತೋಷದಿಂದ ಸುಳಿದಾಡು ; ಲೀಲೆಯಿಂದ ಓಡಾಡು : ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಟ್ಕೊಳುತುಂ ನಂದನರಾಜಿಯೊಳ್ನಲಿಯುತುಂ ತದ್ರಾಜಹಂಸಂ ನಿರಾಕುಳವಿಾ ಮಾಟಕ್ಕಿಗಳಿಂದೆ ಪೊಟ್ಟುಗಳೆವಂ ಸಂಸಾರ ಸಾರೋದಯಂ (ಆದಿಪು. ೧-೫೪) ; ಪೊಸಕೊಳಂಗಳೊಳೊಲಿದು ನಲಿವಂಚೆಯಿಕ್ಕೆಯಿಂ (ತಿರುಶ. ದೇ. ೧-೧೪) ; ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುವ್ಯಾ.ಆ. ೦-೩) : ಹೊಱವೊಳಲ ರಮ್ಯೋದ್ಯಾನವೆಸೆದುದು . . . ನಲಿವ ಕಿನ್ನರಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ ಹೆಕ್ಕಳಿಪ ಕೋಗಿಲೆಗಳಲಿ (ತೊರರಾ. ೧-೯-೧೧) : ತಾಯೆ . . . ನಲಿದೊಲಿದು ನರ್ತನಂಗೈಯೆನ್ನ ಜಿಹ್ವೆಯಲಿ (ಚಿತ್ರಾಂಗ. ೧-೯). ೪. ಮೆಂಚ್ಚು ; ಇಷ್ಟಪಡು ; ಒಲಿ : ದರ್ಪ್ಪ ವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನಚ್ಚಿರ್ಸಲ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಸೌಇಇ. XI-I, ೯೭-೩೪ ; 1062) ; ಸಕಲಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳುವೆನು (ಕಂನವಿ. ೧-೧೩) ; ಪೊಲುನೆಯ್ಕೆಸಿನ ಪೆಣಮನ್ ಮಣ್ ಮಾಡದಿರ್ಶಾರುವ್, ಅಱದಿರ್ಕೆ, ಅಱದೆ, ಪೊಱದೆ, ಬಯಸಿ ಪಾರ್ದ್ದು, ನಲಿದೆಱಪ ಪರ್ದಿಂಗೆ ಸವಿಯೆರೆಯ ನಿಧಿಯಾಗಿ ಬಿಸುಟಿರ್ಕೆ ಬಯಲೊಳ್ (ಅಂತಿಗೂ. ೨-೨೩). ೫. ತೂಗು ; ಅಲ್ಲಾಡು ; ಸಂಚಲವಾಗು : ಅಲರ್ಗಣ್ಗಳವರ್ದುರ್ಗಂ ತೊದಳ್ನುಡಿಯ ತವಕಿಗಂ ನಲಿವ ಮಾಗಾಯ ನವನರ್ತನದ ಹಸನಿಗಂ (ಬಸರ. ೦-೧೫೦) ; ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದ ಪೊಲ್ ಭುಜದೊಳ್ ನಲಿವಂತು . . . ಪಾಳಿಸಿದನುರ್ವ್ವರೆಯಂ ನರಸಿಂಹ ಭೂಭುಜಂ (ಎಕ. III, ಮಂಡ್ಯ. ೧೨೦-೧ ; 1235). ೬. ಸಂತೋಷದಿಂದ ಕೂಗು ; ಕುಕಿಲು : ಫಣಿಯುಂ ನವಿಲ್ಗಳುಂ ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱದೆಯ್ದೆ ವೈರಮಂ ನೆರೆದೊಡನಿರ್ದವು (ಧರ್ಮಾಮೃ. ೩-೯೦).

**ನಲಿನಲಿ** (ದ್ವಿರುಕ್ತಿ) : ಪಲರಂ ನಲಿನಲಿದಾಟಂದು ಕೊಂದಪಂ ಯಮರಾಜಂ (ಅಜಿಪು. ೧೧-೨೭); ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿರ. ೩-೧೪) ; ನಲಿನಲಿದು ಹೆಚ್ಚಿ ಮೆಚ್ಚುತ್ತ . . . ಲಲನೆಯರು ನೃಪನ ಪದಯುಗಜಲರುಹದೊಳ್ ಮೆಯ್ಯನಿಕ್ಕೆ (ನನ್ನಚಾ. ೪-೨೦೫). **ನಲಿದಾಟ** = ಹಿಗ್ಗುವಿಕೆ ; ಸಂತೋಷಪಡುವಿಕೆ. **ನಲಿದಾಡಿಸು**=ಸಂತೋಷದಿಂದ ಕುಣಿದಾಡುವಂತೆಮಾಡು : ನಿಮ್ಮವರ ಮಾರ್ಗಣೆಗಳುಬ್ಬರಿಸಿದವು ಗಗನಾಂಗಣವ. . . ನಲಿದಾಡಿಸಿದವಾ ನಾರದಾದಿಗಳ (ತೊರರಾ. ೧-೧೧-೧೦) ; ಸೊಗಯಿಸುವ ಮರಶಿಶುವ ನಲಿದಾಡಿಸುವ ರೂಢಿಯಿಲ್ಲೆಂದು ನೆಱ ನೊಂದು ಮಱುಗುವಳಜಸ್ರುಮವಳು (ಜೈಮಿಭಾ. ೨೮-೧೪). **ನಲಿದಾಡು** = ೧. ಸಂತೋಷದಿಂದ ಆಟವಾಡು : ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಪಿಡಿದು ತೆಗೆವ ಕರಿಕಳಭಂಗಳುಮಂ (ಪಂಪಭಾ. ೧-೧೧೫ ವ) ; ಹರಿಣಂಗಳ್ ನಲಿದಾಡುತಿರ್ದುವು ಕರಂ ವ್ಯಾಘ್ರಂಗಳಂ ಪೊರ್ದಿ (ಸುಕುಮಾ. ೮-೬೦) ; ಜಳನಿಧಿಯಲ್ಲಿ ಪುಟ್ಟಿ ಜಲಜಾಕ್ಷನ ಪೇರುರಮೆಂಬ ತೊಟ್ಟಿಲೊಳ್ ಬಳೆದು ವಿಲಾಸದಿಂ ಜಲಜದೊಳ್ ನಲಿದಾಡಿ ಬಱಿಕ್ಕ ಯೌವನಂ ಮೊಳೆವುದುಮಾರುಮುಂ ಬಗೆಯದಾ ನೃಪನೊಳ್ ಸಿರಿ ಕೂರ್ತು ಬಂದು ಕೋಮಳೆ ನೆರೆದಿರ್ದಳ್ (ಕಾವ್ಯಸಾ. ೨೦೭). ೨. ಬಹಳ ಹಿಗ್ಗು ; ತುಂಬ ಸಂತೋಷಪಡು : ನೆರೆ ಶುದ್ಧಾಂತಕಾಂತೆಯರ್ ನೆರೆದೊಸಗೆಯಂ ಮಾಡೆ ವೃದ್ಧಕಂಚುಕಿಗಳೆಂದವರೊಡನೆ ನಲಿದಾಡೆ (ಅಜಿಪು. ४-೭೮ಗಳ) ; ತಿರಿಕಂ ನಿಧಿವಡೆದೊಡೆಂತು ನಲಿದಾಡುಗುಮಂತಿರೆ ಜಿನಪದಾಬ್ಜಸೇವನೆ ದೊರೆಕೊಳೆ ಸಂಸಾರಿ ನಲಿವುದೊಲವಡೆ ಸುಖಿವಂ (ಸಮಪು. ೧-೧೦೩) ; ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ (ಮಹಾದೇ. ಬ. ೭೯-೧೯೩) ; ಭೋಯೆಂದಾಗಲರಸಂಚೆಗಳುಮಳಿವಿಂಡುಗಳು ನಲಿದಾಡೆ (ನಳಚ. ೧-೩೭). ೩. ಸಂತೋಷದಿಂದ ಕುಣಿದಾಡು,-ನೃತ್ಯಮಾಡು : ಸಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ (ಪಂಚತಂ. ೧೧೮-೧೦) ; ಆಡುವ ನಲಿದಾಡುವ ನಡೆ ನೋಡುವ ಕೊರಲಪ್ಪಿಕೊಳ್ವ . . . ಬಾಳಕ್ರೀಡೆಗಳಂ ನೋಡುತಿರ್ಪುದೊಂದಿರವಲ್ತೆ (ಸುಕುಮಾ. ೯-೧೦೦) ; ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೦೫-೩) ; ನಾರದನು ನಲಿದಾಡಿದನು ಗಗನದಲಿ (ತೊರರಾ. ೪-೧೩-೩೭) ; ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ (ಪುರಂದ. ೧-೧೯೧ ಪಲ್ಲವಿ) ; ಲಕ್ಷ್ಮಿ ನನ್ನ ಮನೆಯಲ್ಲಿ ನಲಿದಾಡುತ್ತಿದ್ದಾಳೆ (ಕಂಬಹು. ೧೩೪); ಅವಳ ತಲೆಯಲ್ಲಿ ಹಿಂದಿನ ಎಷ್ಟೋ ಘಟನೆಗಳು ನಲಿದಾಡಿದವು (ಹಳ್ಳಹಾ. ೧೧೭). **ನಲಿನಲಿದಾಡು** = ೧. ಚಲಿಸಿ ಸುತ್ತು : ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ವಿಮಾನಸಚ್ಚಮಾಕೆಗೆ ಗಂಡನಕ್ಕುಂ (ಪಂಪಭಾ. ೩-೩ ವ). ೨. ಬಹಳ ಸಂತೋಷಪಡು, -ಹಿಗ್ಗು : ಜಾಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ (ಮಹಾದೇ. ಬ. ೪೭-೧೯೯) ; ಆನಂದದಿಂದ ನಲಿನಲಿದಾಡುವೆ (ಬಸವ. ೩೭೭).

[ ದೇ.II ತುಳು. ಕೊಡ. ನಲಿ; ಕುರುಖ್. ನಲ್ನಾ ]

**ನಲಿ₂, ನಳಿ₄** (ನಾ). ಒಂದು ಬಗೆಯ ಸುಗಂಧ ದ್ರವ್ಯ : "ನಳಿಯೆಂಬ ಗಂಧ-ನಟಿ, ನಲಿ" (ನಾಚಿರಾ. ೫) ; "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟಿಃ, ನಲೀ, ಧಮನೀ, ಅಂಜನಕೇಶೀ – ೭ ನಳಿ ಎಂಬುವ ಗಂಧದ್ರವ್ಯದ ಹೆಸರುಗಳು ; ಗೂವಗುತ್ತಿಗೆ" (ಸಿದ್ಧಾಂತಿ. ೩೪). **ನಳಿ₄** : ಮೇಲಿನ ಪ್ರಯೋಗಗಳನ್ನು ನೋಡಿ. [ ಸಂ. ನಲೀ ]

**ನಲಿಗಚ್ಚು** 'ನಲಿಗರ್ಚು₂' ನೋ.

**ನಲಿಗರ್ಚು₁** (ಕ್ರಿ). ಪ್ರೀತಿಯಿಂದ ಕಚ್ಚು : ಆ ಶುಕಶಿಶುಪ್ರಕರಚಂಚೂಪುಟಸಂಚಯಮಂ ಚೂತಕಳಿಕಾಕುಳಮೆಂದು ನಲಿಗರ್ಚಲೆಂದವ್ವಳಿಪ ಕಲಕಂಠಜಾಲಕಂಗಳುಂ (ಕುಸುಮಾ. ೨-೭೦ ವ) ; ಕೆಳಕೆಗಳಂ ಪಿಕಾಳಿ ನಲವಿಂ ನಲಿಗರ್ಚುತುಮುನ್ಮದಾಳಿಸಂಕುಳಮಲರ್ಗೊಂಚಲಂ ತು ಡು ಕು ತಂ ತನಿವಣ್ಗಳ ಸಾರಮಂ ಶುಕಾವಳಿ . . . ಪೀರುತುಂ ವಿಳಸಿತ ಚುಂಬನಾಭಿನಯಮಂ ನೆಱ ತೋರ್ಪವೊಲಿರ್ದುದಾಮ್ರದೊಳ್ (ಕುಸುಮಾ. ೫-೮೯). [ ನಲಿ₁ + ಕರ್ಚು₁ ]

**ನಲಿಗರ್ಚು₂, ನಲಿಗಚ್ಚು** (ನಾ). ಪ್ರೀತಿಯಿಂದ ಕಚ್ಚಿದುದಂ ; ದಂತಕ್ಷತ : ನಲಿಗರ್ಚುಂ ನಖರೇಖೆಯುಂ . . . ಮಯ್ದೋಱ ರತಾಲಯಾಂಗಣದೊಳೊರ್ವಳ್ ನೀಱ . . . ನಿಂದಿರ್ದಳ್ (ಸೂಕ್ತಿಸು. ೧೪-೭೪). **ನಲಿಗಚ್ಚು** : . . ನಲಿಗಚ್ಚು ಕಚ್ಚಿ ಕುಡಿಯಾಗಡೆಯಾಳನೆ ಸೀಳ್ದು ಸಿಱುಂಬಳಾಡದಂತದ ನೆಱನೆಂದು ಭಾವದೊಳೆ ಬಳ್ಕುವ ಸೋಂಬೆಯನಿಕ್ಕು ಕಚ್ಚಿನೊಳ್ (ಸೂಕ್ತಿಸು. ೮-೩೪). [ < ನಲಿಗರ್ಚು₁ ]

**ನಲಿಗಱ** (ನಾ). ಪ್ರೀತಿಯಿಂದ ಕಚ್ಚಿದುದರ ಕಲೆ ; ದಂತಕ್ಷತದ ಗುರುತು : ನುಂಗಿಯುಗುಟ್ವಬಲೆಯರ ದಶನಂಗಳ ನಲಿಗಱಗಳ್ಗಲ್ಲದೆಳ್ಳಿ ಕ್ಕಳ್ಕಿಲ್ಲಂಗಮೆನೆ ಸಂದ ಸೊಬಗಿನ ಜಂಗಮಶಾಸನಮೆನಿಪ್ಪ ಸುರತವಿಳಾಸಂ (ಅನಂಪು. ೧-೫೯). 'ನಲಿಗರ್ಚು₂' ಪರಾ. [ ನಲಿ₁ + ಕಱ₂ ]

**ನಲಿಗೆದಱು** (ಕ್ರಿ). ಸಂತೋಷದಿಂದ ಕೆದಕು,-ಬೆದಕು : ಕದಲೆಗೆದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆವೊಯ್ದು ನಖದಿಂ ನಲಿಗೆದಱ ಕೋಡಗಱಿಯಿನೀಡಿಱದು (ಅನಂಪು. ೭-೮೦ ವ).

[ ನಲಿ₁ + ಕೆದಱು₁ (<ಕೆದಱ್₁) ]

**ನಲಿತ** (ನಾ). ನಲಿಯುವಿಕೆ ; ಕುಣಿದಾಟ : ಒಲಿತ, ಅಲಿತ, ನಲಿತವೊ ! ಎಲ್ಲಿ ಇದನು ಕಲಿತವೊ ? (ಸೂರ್ಯಶಾ. ೧೧೩-೧೧). [ ನಲಿ$_1$ + – ತ$_2$ ]

**ನಲಿನ, ನಳಿನ** (ನಾ). ೧. ತಾವರೆ ; ಕಮಲ. ೨. ನೀರು ಹೂವು ; ಆವಲು. ೩. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೭). **ನಳಿನ :** ೧. "ಸಹಸ್ರಪತ್ರಂ, ಶತಪತ್ರಂ . . . ಅಬ್ಜಂ, ನಳಿನಂ, ಪುಷ್ಕರಂ, ರಾಜೀವಂ, ಅರವಿಂದಂ, ಪದ್ಮಂ, ಪಂಕಜಂ–ಈ ೧೭ ತಾವರೆ" (ಹಲಾಯು. ೧೧೩-೫೭) ; ವಿಜೃಂಭಮಾಣ ನವನಳಿನಪರಿಕರಾಸ್ವಾದಮುಧುಕರ ರಮಣೀಯು. . . ಧರಾತಳಮನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀಕರೋದ್ದಾಮ ದುರ್ದಿನ ವನಮನೆಯ್ದೆವಂದು (ಪಂಪಭಾ. ೫-೧೧ ವ) ; ಅವನತಾರಾತಿನೃಪ ಮಣಿಮಯ ಕಿರೀಟಪ್ರಭಾಲೀಢ ಚಳನನಳಿನಯುಗ್ಮಂ (ಸುಕುಮಾ. ೧-೭೯ ವ) ; ನಳಿನದ ಕರ್ಣಿಕೆಯೊತ್ತಿನೊಳ ಳವಡೆ ಕಣ್ಮುಚ್ಚಿ . . . ನಿದ್ರಾಸುಖದಿಂ ಕಳಹಂಸೆಯು ಮಱಗಿರ್ಪುವು (ಗಿರಿಕ. ೨-೫೫) ; ನಳಿನಂ ಕುಂದೆ . . . ಮೂಡಿದುದು ತೇಜೋಮಂದಿರಂ ಚಂದಿರಂ (ರಾಜಶೇ. ೧೧-೪೩). [ ಸಂ. ]

**ನಲಿನಗರ್ಭ, ನಳಿನಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಲಿನಗರ್ಭಾಂಡ' ಪರಾ. **ನಳಿನಗರ್ಭ :** 'ನಳಿನಗರ್ಭಾಂಡ' ಪರಾ. [ ನಲಿನ + ಗರ್ಭ ]

**ನಲಿನಗರ್ಭಾಂಡ, ನಳಿನಗರ್ಭಾಂಡ** (ನಾ). ಬ್ರಹ್ಮಾಂಡ ; ವಿಶ್ವ : ನಲಿ[ಪಾಠಾಂ. ಳಿ]ನಗರ್ಭಾಂಡಂಗಳೆಂಬಗಳದ ಘಟಸಳಶಾದಿಗಳೊಳಗೆಪಲತೆಬಿದ ಪಕ್ವಾನ್ನ ದಿವ್ಯಾನ್ನಂಗಳಂ ತೀವಿ (ಬಸಪು. ೮-೩೭). **ನಳಿನಗರ್ಭಾಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನಗರ್ಭ + ಅಂಡ$_2$ ]

**ನಲಿನಜ, ನಳಿನಜ** (ನಾ). = ನಲಿನಗರ್ಭ. **ನಳಿನಜ :** ನಳಿನಜ ಹರಿ ವಾಸವ ನತಪದಪಂಕರುಹ ನವಿತ ಶುಭವಾಸಂ . . . ಗಳಿಲನೆ ಜಗಮಂ ಸಲಹುಗೆ ಸಲಿ ತೋಂಟದ ಗುರು ನಿರುತವಿಲಾಸಂ (ಹಾಲಾಸ್ಯ. ೨-೦-೨). [ ಸಂ. ]

**ನಲಿನದಲ, ನಳಿನದಳ** (ನಾ). ೧. ತಾವರೆಯ ಎಸಳು ; ಕಮಲದ ದಳ. 'ನಲಿನದಲಲೋಚನ' ಪರಾ. **ನಳಿನದಳ :** ೧. 'ನಳಿನದಳಲೋಚನ' ಪರಾ. ೨. ಕಮಲದ ಎಲೆ : ನಳಿನದಳದೊಳ್ ತೀವಿರ್ದಜ್ಝಂಬು ತಳ್ತಲರ್ವಾಸು . . . ಪೂಗಂಪು ರಾಗದಲಂಪನಗ್ಗಳಿಸೆ (ಪುಷ್ಪಪು. ೨-೪೩). 'ನಳಿನದಳಪುಟ' ಪರಾ. [ ನಲಿನ + ದಲ ]

**ನಲಿನದಲಲೋಚನ, ನಳಿನದಳಲೋಚನ** (ನಾ). ತಾವರೆಯ ಎಸಳಿನಾಕಾರದ ಕಣ್ಣುಳ್ಳವನು ; ವಿಶಾಲಾಕ್ಷ ; ಕೃಷ್ಣ : ಸುಧನ್ವನ ಶಿರವನೆರಡುಕೈಗಳಿಂ ನಲಿನದಲ[ಪಾಠಾಂ. ನಳಿನದಳ]ಲೋಚನಂ ಪಿಡಿದೆತ್ತಿಕೊಂಡು ನೋಡಿದು (ಜೈಮಿಭಾ. ೦೩-೫೦). **ನಳಿನದಳಲೋಚನ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನದಲ + ಲೋಚನ ]

**ನಲಿನನಾಭ, ನಳಿನನಾಭ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ನಲಿ[ಪಾಠಾಂ. ಳಿ]ನನಾಭನ ಮಗನ ಕೂರ್ಗಣೆಗಳ ನನುಕರಿಸಿ ತೊಳತೊಳಗುವವು . . . ವಿಶಾಲವಿಲೋಚನದ್ವಯವು (ಬಸಪು. ೪-೨೬). **ನಳಿನನಾಭ :** ನಳಿನನಾಭನ ಮಧುರವಾಣೀಲುಳಿತಪರ ಮಾಶೀರ್ವಚನಪರಿಕಲಿತ ಕವಚಿತಕಾಯ ಪಾಂಡವರಾಯ ಹೊಜಿಮಂಟ (ಕುಮಾಭೀ. ೮-೩) ; ನಳಿನನಾಭನ ನೀನು ಪಾಡೊ ಬೇಗ ಒಳಕಣ್ಣಿಂದ ಅವನ ಕಂಡು ನಲಿದಾಡೊ (ಪುರಂದ. ೨-೨೦೫ ಪಲ್ಲವಿ). [ ಸಂ. (ನಲಿನ + ನಾಭಿ + –) ]

**ನಲಿನಬಾಂಧವ** (ನಾ). ತಾವರೆಯ ಮಿತ್ರ ; ಸೂರ್ಯ. [ ನಲಿನ + ಬಾಂಧವ ]

**ನಲಿನಭವ, ನಳಿನಭವ** (ನಾ). = ನಲಿನಗರ್ಭ. 'ನಲಿನಭವಾಂಡ' ಪರಾ. **ನಳಿನಭವ :** ಆಕ್ಷಣ ನಳಿನಭವ ತಾನಂದು ಕೊಟ್ಟನು ಕಶ್ಯಪಾತ್ಮಜನಿಂದೆ ವರಗಳ (ಸಂಭಪ. ೮-೧೧) ; ಆ ನಳಿನಭವ ಶಂಕರರ ಸುಯ್ವಾನವಾಯ್ತು ಸಕಲ ವಾನರಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ (ತೊರರಾ. ೬-೬-೯) ; ಹರಿಹರ ನಳಿನಭವರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಿತಾ. ೧೩-೬೯). [ ಸಂ. ]

**ನಲಿನಭವಾಂಡ, ನಳಿನಭವಾಂಡ** (ನಾ). = ನಲಿನಗರ್ಭಾಂಡ : ಅವಿರ್ಭವಿಸಿ ನಲಿ[ಪಾಠಾಂ. ಳಿ]ನಭವಾಂಡನಿಚಯಮನುರುಪುತುರವಣಿಸಿ ಕವಿದ ವಿಷಮಂ ನುಂಗಿದನು ಮಾಪ್ರುವರನೆನಲು (ಬಸಪು. ೦೩-೨). **ನಳಿನಭವಾಂಡ :** ರಾಘವನನುಜನಗ್ಗದ ಚಾಪವಮೌರ್ವಿಣಿನಿದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು (ತೊರರಾ. ೬-೪೩-೯). [ ನಲಿನಭವ + ಅಂಡ$_2$ ]

**ನಲಿನಮಿತ್ರ** (ನಾ). = ನಲಿನಬಾಂಧವ. [ ನಲಿನ + ಮಿತ್ರ ]

**ನಲಿನಮುಖಿ, ನಳಿನಮುಖಿ** (ನಾ). ಕಮಲದಂತೆ ಮುಖವುಳ್ಳವಳು ; ಚೆಲುವೆ : ತನ್ನಿನಿಯನಂ ನೋಡಿ ನಲಿ[ಪಾಠಾಂ. ಳಿ]ನಮುಖಿ ನಗುತಂ (ಬಸಪು. ೪೭-೨೩). **ನಳಿನಮುಖಿ :** ನಳಿನಮುಖಿಯರ ಸಕಲ ಸೃಷ್ಟಿಗೆ ಕಳಸವಿದು (ಕುಮಾಅ. ೦೩-೨೩) ; ಚೆಲುವೆಯೋರ್ವಳು ಬಂದು ಹೊಳೆಯೊಳಗೆ ಈಜಾಡಿ ನಲಿವುದನು ನೋಡಿ ನಳಿನಮುಖಿಯನು ಮೇಲೆ ಕರೆಸಲು (ಪುರಂದ. ೩-೦೫೦-೩). [ ಸಂ. ನಲಿನಮುಖೀ ]

**ನಲಿನಲೋಚನೆ, ನಳಿನಲೋಚನೆ** (ನಾ). ತಾವರೆಯಸಳಿನಂತೆ ಕಣ್ಣುಳ್ಳವಳು ; ಸುಂದರಿ : ನಲಿ[ಪಾಠಾಂ. ಳಿ]ನಲೋಚನೆಯನೊರ್ವಳನೊಸೆದು ಮಿಗೆ ಕೊಟ್ಟ (ಬಸಪು. ೨೪-೯). **ನಳಿನಲೋಚನೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ನಲಿನಲೋಚನಾ ]

**ನಲಿನವೈರಿ, ನಳಿನವೈರಿ** (ನಾ). ತಾವರೆಯ ಶತ್ರು ; ಚಂದ್ರ : (ಕ). **ನಳಿನವೈರಿ :** ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಬಂದುದು (ಕುಮಾವಿ. ೨-೫೨). [ ನಲಿನ + ವೈರಿ ]

**ನಲಿನಸಂಭವ, ನಳಿನಸಂಭವ** (ನಾ). = ನಲಿನಗರ್ಭ : ನಲಿ[ಪಾಠಾಂ. ಳಿ]ನಸಂಭವಲಿಖಿತದುರ್ಲಿಪಿಗಳನೊರಸಿ (ಬಸಪು. ೪೯-೩). **ನಳಿನಸಂಭವ :** ಕೃಪಾಳುವನೊಲಿದು ಹೊಗಳಿದನಜನು ವೇದಸಹಸ್ರಸೂಕ್ತದಲಿ ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬ ಹೆಸರಾಯ್ತೆಂದು ಮೊದಲಾಗಿ (ಕುಮಾಅ. ೦೪-೩೦). [ ನಲಿನ + ಸಂಭವ ]

**ನಲಿನಸಖ, ನಳಿನಸಖ** (ನಾ). = ನಲಿನಬಾಂಧವ : ಘನಜಿನಭವನವದು ನಲಿ[ಪಾಠಾಂ. ಳಿ]ನಸಖನುದಯಕ್ಕೆ ಮುನ್ನವೆ ಗೋಡೆಗಳುಮೆರಸಿ ನೆಲನ ಸರಿಸಕೆ ಬಿದ್ದು (ಬಸಪು. ೫೨-೩೨). **ನಳಿನಸಖ :** ನಳಿನಸಖಕೋಟಿತೇಜವ ಮಿಱುತೆಂಬವನ ಚರಣಾಂಬುಜಕ್ಕೆ ಶರಣು (ಅಶಿಚಂ. ೦೦-೭) ; ನಳಿನಸಖ ನಪರಾಂಬುರಾಸಿಯ ನಿಲುಕುತ್ತೈದನೆ ಹಸಿದುದೀ ಮುನಿಬಳಗವಾರೋಗಣೆಗೆ ಚಿತ್ತವಿಸೆಂದ ಯಮಸೂನು (ಕುಮಾಅ. ೦೭-೪೭). [ ಸಂ. (ನಲಿನ + ಸಖಿ + –) ]

**ನಲಿನಾಂಗ** (ನಾ). [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತುನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗುಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ, ಪದ್ಮಾಂಗ ಮತ್ತು ಪದ್ಮ, ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೭). [ ನಲಿನ + ಅಂಗ$_2$ ]

**ನಲಿನಾಕ್ಷ, ನಳಿನಾಕ್ಷ** (ನಾ). ೧. ತಾವರೆಯ ಎಸಳಿನಂಥ ಕಣ್ಣುಳ್ಳವನು ; ಚೆಲುವ ; ಸುಂದರ. ೨. ವಿಷ್ಣು ; ಕೃಷ್ಣ : (ಕ). **ನಳಿನಾಕ್ಷ :**

೨. ನಳಿನಾಕ್ಷನ ಪದಪದ್ಧತಿಗಳ ಬಟಿಯೊಳಲಕ್ಷ್ಮಕಾಂಕ ಪದಪದ್ಧತಿಗಳ್ ಪೊಳೆವುವು (ಜಗವಿ. ೩-೩೬) ; ನಳಿನಾಕ್ಷ ನಿನ್ನ ಮಱೆಯ ಹೊಕ್ಕು ತಪಿಸಲು ಒಲಿದು ಧ್ರುವಗೆ ನಿಜಲೋಕವಿತ್ತವನು (ಪುರಂದ. ೨-೧೧೯-೩) ; ನಳಿನಾಕ್ಷನಿಲ್ಲ ದಧ್ವರಕುವಕ್ರಮಿಸೆ ನಡೆಯದು (ಜೈಮಿಭಾ. ೨-೪೫).

[ಸಂ. (ನಲಿನ + ಅಕ್ಷಿ + – ) ]

**ನಲಿನಿ, ನಳಿನಿ** (ನಾ). ೧. ತಾವರೆ ; ಕಮಲ. ೨. ತಾವರೆಗಳಿಂದ ತುಂಬಿರುವ ಕೊಳ ; ಕಮಲಗಳು ಹೆಚ್ಚಾಗಿ ಇರುವ ಸ್ಥಳ. ೩. ತಾವರೆಯ ದಂಟು.–ನಾಳ. **ನಳಿನಿ :** ೧. ನಳಿನಿಯ ಬಿರಿಮುಗುಳ್ಗೊಳ್ಪಿನ್ನಳಿಕಳಭಂ ಬೆಂಡು ನೆಗೆದು ಬಂಡುಣ್ಬವೊಲ್ . . . ಯಶೋದೆಯ ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ (ಅರ್ಧನೇ. ೭-೫೫); ನಳಿನಿಯನಪ್ಪಿ ತುಂಬಿಗುರುಳಂ ನೆಱೆ ನೇರ್ಪಡೆ ತಿರ್ದಿ . . . ಅದೇಂ ಸುಳಿದುದೊ ಮೆಲ್ಲನಾಳ್ದ ಪೊಲತಿ ಶ್ರಮಮಂ ವನಮುಂದಮಾರುತಂ (ಶಬಶಂ. ೧-೫೩). ೨. ನಳಿನೀತೀರ ಲತಾಗೃಹಂಗಳ ನೆಟಿಲ್ ನೇರ್ಪಟ್ಟಿರಲ್ ಪಟ್ಟು . . ಪಥಾರ್ತರಿರ್ಪರ್ (ಜಗವಿ. ೯-೮೮). ೩. ನಳಿನಿಯ ನಳಿನವುನಿನನಾಕಳಿಪಂತಿರೆ ಕರದೆ ವಧುವ ಕರಮಂ ಕರದಿಂ ತಳೆದಂ ಕುಮಾರನಾದ್ರ್ಯಾಂಗುಳಿದಳಕಂಟಕಿತಬಾಹು ನಾಳಾನ್ವಿತಮಂ (ಚಂದ್ರಪು. ೬-೭೪). ೪. ತಾವರೆಯ ಗಡ್ಡೆ : "ಕಂದಃ, ಬಿಸಿನೀ, ನಳಿನೀ – ಈ ೩ ಅವಱ ಗೆಡ್ಡೆ" (ಹಲಾಯು. ೧೧೨-೭೦).

[ ಸಂ. ನಲಿನೀ ]

**ನಲಿನೀಮಿತ್ರ, ನಳಿನೀಮಿತ್ರ** (ನಾ).=ನಲಿನಬಾಂಧವ: ಸರೋಜಾಸನಂ ನಲಿ[ಪಾಠಾಂ. ೪]ನೀಮಿತ್ರ ಸುಪರ್ವರೆಂಬಿವು ವಿಪಸ್ವಂತಾಹ್ವಯಂ (ನಾನಾರ. ೧೧೧) . **ನಳಿನೀಮಿತ್ರ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ನಲಿಪ** (ನಾ). ಸಂತೋಷ ; ಆನಂದ ; ಉಲ್ಲಾಸ : ಕುತುಕಿನಿಂದಾಹಾರಮಂ ಸ್ಥಾನದಿಂ ನೆಲೆಯುಂ ಕೂಟಮಂ ನಲಿಪದಿಂದಂ ನಲ್ಮೆಯುಂ ಗಲ್ಲದಿಂ ಗೆಲವಂ . . . ಪೇಟಿಲ್ಲಿಯುಂ ತದ್ವಿದಂ (ಲೋಕೋಪ. ೧೨-೭). [ ನಲಿ$_1$ + –ಪ$_2$ ]

**ನಲಿಬಾಳು** (ನಾ). ಸುಖಮಯವಾದ ಜೀವನ ; ಸಂತೋಷದ ಬದುಕು : ಕಂಡೊರೆ ನುಂಗುವ ಜವನನ್ . ಕಂಡರ್, ಈ ನಲಿಬಾಳನ್. ಕಡೆ ಬೀಳ್ಕೊಂಡರ್, ಬಯಲಾದರ್ (ಪಾರಸಿ. ೩೭-೮೫೧).

[ ನಲಿ$_2$ + ಬಾಳು$_2$ (<ಬಾಟ್$_2$) ]

**ನಲಿಯಿಸು, ನಲಿಸು** (ಕ್ರಿ). ೧. ಸಂತೋಷಗೊಳಿಸು ; ಉಲ್ಲಾಸಗೊಳಿಸು : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸಿಯುಂ (ಆದಿಪು. ೮-೩೪ ವ) ; ಶ್ರೀಯೆರ್ದೆಗೊಂಡಿರೆ ಮುನ್ನಿಟಿದಾ ಯೆಳೆಯ ನೆಗಪಿ ದಾಡೆಯಿಂ ನಲಿಯಿಸಿದಾ ವಾಯಾವರಾಹನಖಿಲಶ್ರೀಯಮ ನೊಲ್ದೀಗೆ ವೀರನರಪತಿಗೀಗಳ್ (ಚಕವಿ. ೯-೧) ; ಈ ವರದ ಕರವೆ . . . ನಸುಮಲರ್ದ ಲಸಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಕುವೆಮ್ಮಂ (ವಸ್ತುವಂ. ೮). ೨. ಅರಳಿಸು ; ಪ್ರಫುಲ್ಲಗೊಳಿಸು : ನಲಿಯಿಸುಗೆಯ್ದೆ ಮತ್ತುತಿಕುಮುದ್ವತಿಯಂ ಕಳೆಗುಂದದಾವಗಂ ನಲುಗದೆ . . ಕಂದನಾನದೀ ಬಲಮುರಿಸುಕುಮೆಯ್ಯುಮರೆ ಮೈಮೆಯನಾಂತ ನವೀನಚಂದ್ರಮಂ (ಚಕವಿ. ೧-೭). **ನಲಿಸು :** ೧. ಮಿತ್ರಂ ಮದಯತಿ ಗೆಳೆಯನಂ ನಲಿಸಿದಪಂ(ಶಾಶಕ್ಕ. ೧-೪೩). [ ನಲಿ$_1$ + – ಇಸು$_3$ ]

**ನಲಿವರಿ** (ಕ್ರಿ). ಹಿಗ್ಗಿನಿಂದ ಓಡಾಡು ; ಸಂತೋಷದಿಂದ ಓಡಾಡು ; ಸಡಗರಿಸು : ಪಲದಿವಸಕ್ಕೆತಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೊಲೆಗೊತ್ತಿ ತೀವಿ ತೆಗೆದೇಂ ನಲಿವರಿದುದೊ ಜವನ ದೂತರೆನಿಸಿ ಕಿರಾತರ್ (ಪಂರಾಮಾ. ೯-೫೭) ; ಸಿರಿಸದ ಬಾಸಿಗದೊಳ್ ನಲಿವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ಪರಿವಮಱಿಯಾಡಿದುವು ತನೂದರಿಯ . . . ದೋರ್ವಲ್ಲರಿಯೊಳ್ (ಪಂರಾಮಾ. ೯-೮೦) ; ನಲಿವರಿದು ನವೀನಮೆನಲ್ ಜಲಜಾಕ್ಷನ ಮುಂದೆ ಕುಣಿದು (ಮಹಾನೀ. ೬-೭೪) ; ಮೆಲ್ಪು(ಳ್ಪು)ವಡೆದತಿವ್ಯಾಲತೆಯಿಂದೋದಿ ನಲಿವರಿದು ಬಲ ವರ್ಪಂದಾ ಮಱಗೆರಡು ತಿಂಗಳ್ (ಅಶ್ವಶಾ. ೫-೪). 'ನಲವರಿ' ಪರಾ.

[ ನಲಿ$_1$ + ಪರಿ$_2$ ]

**ನಲಿವಾಜಿಸು** (ಕ್ರಿ). ಸಂತೋಷದಿಂದ ಹಾರಾಡುವಂತೆ ಮಾಡು : ಮದನದವಾಗ್ನಿತಪ್ತಯರ ಸುಯ್ಯ ಸಮೀಪಚವಾಗಿ ಬರ್ಪ ತಣ್ಣದಿರನಲರ್ಚಿ ಚಂಚುವಿನೊಳ್. . .ಉತ್ಪಲಾಗ್ರಪತ್ರದೆ ಪೊಗೆದೂಡಿಪಾಡಿ ನಲಿವಾಜಿಸಿ ತೋಱಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಹಿಳ ಗಾಡಿಸ ದತ್ತೊ ನಿಜಾಗ್ರುಶಾಬಮಂ (ಅನಂಪು. ೭-೪೧).

[ನಲಿವಾಜು$_1$ + – ಇಸು$_3$]

**ನಲಿವಾಜು$_1$** (ಕ್ರಿ). ಹಿಗ್ಗಿನಿಂದ ಮೇಲಕ್ಕೆ ಹಾರು ; ಸಂತೋಷದಿಂದ ಹಾರಾಡು ; ಆನಂದದಿಂದ ಏರು : ಇರ್ಪೋಡಿದ ಚಂಚುವಂ ತೆಱೆ ದೆಱಂಕೆ ನೆಱಿಲ್ದಿರೆ ಕಂಠನಾಳಮಂ ನೀಡಿ ವಿಯತ್ತಲಕ್ಕೊಗೆದು ಕಾರ ಮುಗಿಲ್ವನಿಯಂ ಮನಂ ಕುಳಿರ್ಗೋಡುವಿನಂ ಕರ್ದುಂಕಿ ನಲಿವಾಜಿದುವಾಜಿ ದುಪಂದುಚಾತಕಂ (ಪಂರಾಮಾ. ೭-೧೯೭) ; ಇಂತಿದು ಗಗನಕ್ಕೆ ನಾಡೆ ನಲಿ ವಾಜಿದದೊಂದು ಕಪೋತವುಂತುಮಲ್ತಿದು ಪರಿದಿರ್ದ ಪಾವಸೆ ಮುಗಿಲ್ಮುಱಿಯೆಂಬಿನಮಿಂಬುಗೆಟ್ಟು ಕಂದಿದ ಪಟಗಂಚುಗನ್ನಡಿವೊಲೆನಿಱ ದಾದುದೊ ಚಂದ್ರಮಂಡಲಂ (ಚಂದ್ರಪು. ೯-೫) ; ಚಕೋರವಯೂರ ರಥಾಂಗ ಭೃಂಗಮಂಡಳಿ ನಲಿವಾಜಿದಪ್ಪುವು ತರಂತರದಿಂದೆನಿಸಿತ್ತು ಕಣ್ಗೆ (ವರ್ಧಪು. ೫-೩೮). [ ನಲಿ$_1$ + ಪಾಱು$_1$ ]

**ನಲಿವಾಜು$_2$** (ನಾ). (ಹಕ್ಕಿಗಳ) ಸಂತೋಷದ ಹಾರಾಟ ; ಸಂಭ್ರಮದ ಹಾರಾಟ. 'ನಲಿವಾಜುವಾಜು' ಪರಾ. [ ನಲಿ$_1$ + ಪಾಱು$_2$ ]

**ನಲಿವಾಜುವಾಜು** (ಕ್ರಿ). ಸಂತೋಷದಿಂದ ಹಾರಾಡು ; ಉಲ್ಲಾಸದಿಂದ ಹಾರಾಡು: ಒಸಗೆಗಳೆಂದು ಬಿಟ್ಟ ಶುಕಶಾರಿಕೆಗಳ್ ನಲಿವಾಜುವಾಜಿ ರಾಗಿಸಿ ದವಿ ತಾರಿನಾಪು ಪರಿಪಾಱಿಯನೋಳಿಯಿನೋದೆ ಕೇಳ್ದು (ಶಾಂತಿಪು. ೩-೪೮). [ ನಲಿವಾಜು$_2$ + ಪಾಱು$_1$ ]

**ನಲಿವು** (ನಾ). ಹಿಗ್ಗು ; ಸಂತೋಷ ; ಆನಂದ : ನಿನ್ನ ಸುಖವೇ ಸುಖಂ ನಿನ್ನ ನಲಿವೇ ನಲಿವು (ನಂಬಿರ. ೧-೭೦); ವ್ಯಾಗೀಬಾಳಕಜಾಲದೊಳ್ ನಲಿವಿನಿಂ ನೆಗೆದಾಡುತುಂ (ಪುಷ್ಪಪು. ೩-೯೭) ; ಪಲವುದಿನಂ ಮನಂ ಬಯಸಿ ಕಯ್ಯಿಡಿ ದಂಗನೆಯಂಗಸಂಗದಿಂ ನಲಿವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್ (ನಳಚಂ. ೪೮೮) ; ನಲಿವು ಮಿಗೆ ತಾನವರಡಿಗಳಂ ತೊಳೆದು ಮದಿಸು ವೆಡೆಯೊಳು (ಬಸಪು. ೫೭-೩೩); ನಲಿವು ಹಿಂಗಿದ ತಾಯ ಕಂಗಳ ಜಲವ ಸೆಱಗಿನೊಳೊರಸಿದನು (ಕುಮಾರರ್ದ್ರಾ. ೬ರಿ೩. ಪರಿ. ೨೭೮) ; ನೋವು, ನಲಿವುಗಳು ಪರಮಾತ್ಮನ ಇಷ್ಟವೆಂದು ತಿಳಿಯುತ್ತದೆ (ಧರ್ಮಸಾ. ೮೭). 'ನಲವು' ಪರಾ. [ ನಲಿ$_1$ +– ವು ]

**ನಲಿಸು** 'ನಲಿಯಿಸು' ನೋ.

**ನಲುಗಂಟಿ** (ನಾ). ಜಾನುವಾರಗಳ ಮೇಲೆ ಹಾಕುವ ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪರಿಧಾನ ಬೆಡುಂಗೊಳು ಚಳಾಯ ದಾಯದೆಱೆ ಹಡುವರ ಬೀರವಣ ನಲ್ಲೆತ್ತು ನಲುಗಂಟಿ ನಲ್ಲಾವು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಡಃಪೆಲ್ಲವಂ . . . ಧಾರಾಪೂರ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ ; 1117). [ <ನಲ್ + ಗಂಟ$_1$ ]

**ನಲುಗಿಡು** (ಕ್ರಿ). ಅರಿಸಿನ, ಕುಂಕುಮ ಮುಂತಾದುವುಗಳಿಂದ ಪಾದದ ಮೇಲೆ ಚಿತ್ರವನ್ನು ರೇಖಿಸು : ದಿನಾಂತದಲಿ ನದಿಯ ದುಡೆಯನ್ನು ನಾವ್ ಸೇರಿ ಬಿಳಿಮಳಲಮಧ್ಯದಲಿ ನಲುಗಿಟ್ಟುದನ್ನು ತಿಳಿನೀರ ವಾಹಿನಿಯು ಹರಿವುದೊ ನಿಂದಿಹುದೊ ಬಳಿ ಸೇರಿ ಪರಿಕಿಸುವೆವೆಂದು ಹೋದುದನು (ವಿಸೀಗೀ. ೭೯-೧೨). [ ←ತಮಿ. ನಲಙ್ಕಿಟು ]

**ನಲುಗಿಸು** (ಕ್ರಿ). ೧. ಸುಕ್ಕುಗೊಳಿಸು; ಮುದುರಿಸು; ಮುದುಡಿಸು: ಹೂವನ್ನು ಅಷ್ಟು ಗಟ್ಟಿಯಾಗಿ ಹಿಡಿದು ನಲುಗಿಸಬೇಡ (ರೂಢಿ). ೨. ಸೊರಗುವಂತೆ ಮಾಡು; ಕೊರಗಿಸು; ಶೋಷಿಸು: ಈ ರೀತಿಯಲಿ ಮುೞುಗುತಲನುದಿನವು ತತ್ಪಾಂಡುನೃಪನಂದನರು ದುಃಖದಿ ರಾಜಭೋಗಂಗಳನು ನೆಱೆ ಬಿಟ್ಟು ತನುವ ನಲ[ಲು]ಗಿಸಿಕೊಂಬರು (ತಿಮ್ಮಕೃ. ೩-೧೯): ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಿಕ್ಕಂದವಿರುವ (ಸರ್ವಜ್ಞ. ೬೨೭): ಹೊಟ್ಟೆಗೆ ಹಾಕದೆ ನಲುಗಿಸಿದ್ದಾಳೆ ಅಂತಾ ಸಾರಿಕೊಂಡು ಬಂದಾರು! (ನೀದನೆ. ೪೮).
[ ನಲುಗು$_1$ +-ಇಸು$_3$ ]

**ನಲುಗು$_1$** (ಕ್ರಿ). ೧. ಸುಕ್ಕುಸುಕ್ಕಾಗು; ಮುದುರು: ಬಟ್ಟೆಯ ಮಡಿ ನಲುಗದಂತೆ ತೆಗೆದುಕೊಂಡು ಬಾ (ರೂಢಿ). ೨. ಅಲ್ಲಾಡು; ಅಲುಗು; ಸ್ಪಂದಿಸು: ಆವೇಶ ಅಂಗಾಂಗ ತುಂಬಿ ನರನರ ನಲುಗಿ ಅಲುಗಿ ಗೊಂದಣ ತಾಂಡವಲಾಸ್ಯ ನೃತ್ಯದಲ್ಲೀ (ಸೂರ್ಯಪಾ. ೪-೧): ಬೇಗ ಬೇಗ ಹೆಜ್ಜೆಹಾಕಿದಾಗ ಎದೆ ನಲುಗಿ ನಲುಗಿ ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕೆ . . . 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಷಿ. ೪೭). ೩. ಒಯ್ಯಾರ ಮಾಡು; ಬಳುಕು: ಕುಟ್ಟುವ ನೆವದಿಂದ ರಟ್ಟೆಯನು ತಿರುಹುವಳು ನಿಟ್ಟಿಸಿ ನಲುಗಿ ಹಾಡುವಳು ಹಾದರದ ಮೊಟ್ಟೆ ಕಾಣಯ್ಯ (ಸರ್ವಜ್ಞ. ೧೮೪೧): ರತ್ನಾ ಮತ್ತೆ ನಾಚುತ್ತ ನಲುಗುತ್ತ ಎರಡು ವಿಡಾ ತಂದಿಟ್ಟು ಹೋದಳು (ಗಾಮಾಯಿ. ೫೭). ೪. ಕಷ್ಟಕ್ಕೆ ಗುರಿಯಾಗು; ಬಾಡು; ಕಂದು: ಕಾಕಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ ನಲುಗಿ ಕತ್ತಲೆಯೊಳಿರ್ದ ಶೀತಳಮರೀಚಿಲಾಂಛನದಂತೆ . . . ಬಾಲಕನಿರ್ದನವರೆಡೆಯೊಳಂಜುತಳುತೆ (ಜೈಮಿಭಾ. ೨೮-೩೧): ಕಳೆಗುಂದದಾವಗಂ ನಲುಗದೆ ವಾಮದೇವನುರಿಗಣ್ಣೆಡೆವಾವುಗಳಿಂ . . . ಕಂದನಾನದೀ ಬಲಮುರಿಸಂಕುಮೆಯ್ಯುಮುರೆ ಮೈಮೆಯನಾಂತ ನವೀನಚಂದ್ರಮಂ (ಚಿಕವಿ. ೧-೭): ಒಡೆದ ಕೊಳಲ ಪಾಡ ನೋಡು ಇನ್ನೆಲ್ಲಿದೆ ಸುಗ್ಗಿ ಎಂದು . . . ಮುಗ್ಗಿ ಮುರುಟಿ ನಲುಗಿತು (ನಡಬಂ. ೩೭-೮): ಕಾಯಿ, ತಾಯಿ . . . ನಲುಗಿ, ನಿನ್ನ ನೆರಳ ಸೇರಿ ನಲಿವ ಹೆಣ್ಣನು (ಹೊಂಗಳು. ೧೨-೫). ೫. ಸೊರಗು; ಕೊರಗು; ಕೃಶವಾಗು: ನಲುಗಿದಿರಿ ಹಿರಿದಾಗಿ ಜಡೆ ವಲ್ಕಲ ಫಲಾಶನದಿಂದ . . . ತನ್ನಿಂದಾದುದೀಯಾಪತ್ತು ನಿಮಗೆ (ತೊರರಾ. ೬-೫೫-೬): ನಿರ್ಬಂಧಕಿಕ್ಕಲುರೆ ತಿರಿದುಂಡು ನಲುಗಿದಂ (ಪರಶು. ೧೪-೨೩): ಒಲಿದವರು ಬೇರಾಗಿ . . . ಕೆಲಕಾಲ ನೂಕುವರು. ನಲುಗದೆಯೆ ಕಾಣುವರು (ಇಂಗೀತ. ೫೦-೧೭): ಬಡತನದ ಬವಣೆಯಿಂದ ನಲುಗಿದ್ದ ಬಳಗದ ಗೆಳೆಯರಾರೂ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ (ಜೀವನ. ೨ ಅರಿಕೆ). ೬. ಬಾಗು; ನಮಸ್ಕರಿಸು: ನಾನೇನಾಡಿದೆ ನಾ ನಿನ್ನ ಪಾಡಿದೆ ನಾ ನಿನ್ನ ನೋಡಿ ನಲುಗಿದೆ ಭೈರೂವಾಸ್ವಾಮಿ ದೊಡ್ಡವನೆಂದು ಮಾರೀ ಬಿದ್ದೆ (ಹುಟ್ಟಿಹ. ೧೧೦).
[ ದೇ.॥ ತಮಿ. ನಲಙ್ಕು, ನಲಕ್ಕು =ಮುದುಡಿಸು; ತುಳು. ನಲಗು; ತೆಲು. ನಲುಗು, ನಲಗು, ನಲಿಯು, ]

**ನಲುಗು$_2$** (ನಾ). ಹಾಡುವಾಗ ಧ್ವನಿಯನ್ನು ನಡುಗಿಸುವುದು; ಕಂಪನ; ಪಲುಕು: ಚಿಕ್ಕಪುಟ್ಟ ಕಲಹಗಳು ಬಾಳಿನ ಏಕತಾನಕ್ಕೆ ನಡುನಡುವೆ ನಲುಗಾಗಿ ಬಂದು ಸೊಗಸನ್ನು ಹೆಚ್ಚಿಸುತ್ತಿದ್ದವು (ಗಂಮಾಯಿ. ೭).
[<ನಲುಗು$_1$ ]

**ನಲುಮೆ** 'ನಲ್ಮೆ' ನೋ.

**ನಲುಮೆಕೂಟ** (ನಾ). ಪ್ರೀತಿಯ ಮೇಳ; ಸ್ನೇಹದ ಗೋಷ್ಠಿ: ಮಧುರೆ ಹೆಣ್ಣ ಬೇಟವುಳಿದು ಮರಳಿ ಬರುವೆಯಾ ನಲುಮೆಕೂಟ ಕುಣಿತಗಳಲಿ ನಮ್ಮನರಿವೆಯಾ (ಗೋಕುನಿ. ೫೪-೨).
[ ನಲುಮೆ (<ನಲ್ಮೆ) + ಕೂಟ$_1$ ]

**ನಲುಮೆಯೋಲೆ** (ನಾ). ಪ್ರೇಮಪತ್ರ: ನೀಳವಾದ ನಲುಮೆಯೋಲೆಗಳನ್ನು ಅವನು ಸುಶೀಲಾನಿಗೆ ಬರೆಯುತ್ತಿದ್ದ (ಸಮಜೀ. ೬೬೪).
[ನಲುಮೆ (<ನಲ್ಮೆ) + ಓಲೆ ]

**ನಲುವು** (ನಾ). ಬಲಹೀನತೆ; ಅಶಕ್ತತೆ: (+).
[ <ನಲುಗು$_1$./ತಮಿ. ನಲಿವು=ತೊಂದರೆ, ನಾಶ ]

**ನಲ್ಕಳೆ** (ನಾ). ಒಳ್ಳೆಯ ಶೋಭೆ,-ಚೆಲುವು,-ಸೊಗಸು: ಕವಿ ಗಂಟಾತೀತನ ಸ್ತರಕ್ಕೆ ಏರಿದಾಗ ಮಾತ್ರ ಆತನ ಕೃತಿ ನಲ್ಕಳೆಯಿಂದ ಮೆರೆಯುತ್ತದೆ (ಕಾವ್ಯಕು. ೨೦). [ ನಲ್ + ಕಳೆ$_6$ (=ಕಲೆ$_3$) ]

**ನಲ್ಕುಂಚ** (ನಾ). ಸುಂದರವಾದ ಚವರ,-ಚಾಮರ: ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ ಮಿಗೆ ನಲ್ಕುಂಚ ಕಾಳಾಂಜಿ ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹತ. ೧೫-೨೦).
[ ನಲ್ + ಕುಂಚ ]

**ನಲ್ಕೆ** (ನಾ). ನಲ್ಮೆ; ಅನುರಾಗ: ಮನ ಮೆಚ್ಚಿ ನಚ್ಚಿನ ನಲ್ಕೆಯಲಿ ಮನದನ್ನಳೆನಿಸಿದಳು (ಸಾಳ್ವಭಾ. ೧೮-೩೭). [ ನಲ್ +-ಕೆ ]

**ನಲ್ಗಂಪು** (ನಾ). ಸುವಾಸನೆ; ನರುಗಂಪು: ಧೂಪಮಂ ನಲ್ಗಂಪುಣ್ಮಿ ತಿರಲಾಗಳರ್ಪಿಸಿದನಾ ಗಂಗಾಧರಂಗಟ್ಟಿಯಿಂ (ಉದ್ಭಟ. ೧೧-೭೯): ಚಂದನಂಗಳ ಧೂಪಧೂಮದಾಮೋದಮುಂ ಮೂಗಿಂಗೆ ನಲ್ಗಂಪನೀಯದಿಹುದಿತ್ತಣ್ಗೆ (ಶ್ರೀರಾಮಾ. ೧೧೫-೧೫೭). [ ನಲ್ + ಕಂಪು ]

**ನಲ್ಗಂಪುವೀಱು** (ಕ್ರಿ). ಸುವಾಸನೆಯನ್ನು ಬೀರು; ನರುಗಂಪು ಸೂಸು: ನಲ್ಗಂಪುವೀಱೆ ಮೋಹಿಸುವ ಚೆಂಗಣಗಿಲೆಯರಲ್ಗೊಳಂ . . . ತಣ್ಗೊಳಂ ಮೆಱೆದುವು (ಪದ್ಮರಾ. ೮-೩೮). [ ನಲ್ಗಂಪು + ಬೀಱು ]

**ನಲ್ಗಡಲು** (ನಾ). ಸಿಹಿಯಾದ ಕಡಲು; ಇಂಗಡಲು: ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ (ಫಲಸಂ. ೪೮).
[ ನಲ್ + ಕಡಲು (<ಕಡಲ್$_2$ ) ]

**ನಲ್ಗತೆ** (ನಾ). ಒಳ್ಳೆಯ ಕಥೆ; ಸ್ವಾರಸ್ಯವಾದ ಕಥೆ: ಏನಾನುಮೊಂದು ನಲ್ಗತೆಯಂ ಪೇೞ? (ರಾಮಾಶ್ವ. ೪-೧೬). ಮೇಣಾವ ನಲ್ಗತೆಯಂ ಪೇೞ್ವೆನೋ (ರಾಮಾಶ್ವ. ೫-೧). [ ನಲ್ + ಕತೆ ]

**ನಲ್ಗಬ್ಬಿಗ** (ನಾ). ಒಳ್ಳೆಯ ಕವಿ; ಸತ್ಕವಿ: ಅನಿಬರ್ನಲ್ಗಬ್ಬಿಗರೊಳಮನಿತರಸಾಧಾರಣಾಭಿಮಾನಂ . . . ಬಳೆಯಿಕುಂ (ಅಪ್ರತಿ. ೩-೩).
[ ನಲ್ + ಕಬ್ಬಿಗ ]

**ನಲ್ಗಳಲ್** (ನಾ). ರುಚಿಕರವಾದ ಮಜ್ಜಿಗೆ: ಎಳನೀರ್ಗಳ ತನಿಗರ್ಬಿನ ತಿಳಿರಸದ ರಸಾಲಪಕ್ವ ಫಳಸಾರದ ನಲ್ಗಳಲ ಬಹುವಿಧದ ಪಾನಂಗಳನಲ್ಲಲ್ಲೆಱೆವರಾ ಪ್ರಪಾಪಾಲಿಕೆಯರ್ (ವೃಷವಿ. ೪-೩೦).
[ ನಲ್ + ಕಳಲ್$_0$ (<ಕಟಲ್$_3$) ]

**ನಲ್ಗಳವು** (ನಾ). ಲಾಭ ತರುವ ಕಳ್ಳತನ; ಹೆಚ್ಚು ಧನ ಸಿಗುವ ಚೌರ್ಯ: ತಾನುಂ ತತ್ಸಖನುಂ ಭೃತ್ಯಾನೀಕಂಬೆರಸು ಪೋಗಿ ನಲ್ಗಳವಿಂದು ತಾನಧಿಕ ಲಾಭಮಾದೊಡನೂನಗುಣರ್ ಮಗುೞ್ದು ಲಾಭದಿಂದಂ ಬರುತುಂ (ಧರ್ಮಾಮೃ. ೨-೧೯೦). [ ನಲ್ + ಕಳವು ]

**ನಲ್ಗಾಡಿ** (ನಾ). ಮನಸೆಳೆವ ಚೆಲುವು; ಮೋಹಕವಾದ ಸೌಂದರ್ಯ: ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊಳ್ಪೋಟಂ ನಲ್ಗಾಡಿಯಂ ಪುಟ್ಟಿಸೆ . . . ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ ನಲ್ + ಗಾಡಿ$_1$ ]

**ನಲ್ಗಾದೆ** (ನಾ). ಉತ್ತಮವಾದ ನಾಣ್ಣುಡಿ,-ಜಾಣ್ಣುಡಿ. 'ನಲ್ಗಾದೆಗಾಱ' ಪರಾ. [ ನಲ್ + ಗಾದೆ ]

**ನಲ್ಗಾದೆಗಾಱ** (ನಾ). ಉತ್ತಮವಾದ ನಾಣ್ಣುಡಿಗಳನ್ನು ಬಲ್ಲವನು,-ಕಟ್ಟಬಲ್ಲವನು: (ಚತುನಿ. ೬. I, ೪೩). [ ನಲ್ಗಾದೆ + -ಕಾಱ ]

**ನಲ್ಗಾಪು** (ನಾ). ಉತ್ತಮವಾದ ರಕ್ಷಣೆ ; ಭದ್ರವಾದ ಕಾವಲು: ಅಗುಳ್ತಿ ಮದಿಲ್ ಬಾಗಿಲ್ ಬಿಯ್ಯಗವೆಂಬಿವಱಿಂದೆ ಕಾವ ಕಾಪೇವುದೊ ಪೆಣ್ ಮಿಗೆ ಪಾತಿವ್ರತ್ಯದೆ ನೆಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕು (ನೀತಿಮಂ. II, ೨೭). [ ನಲ್ + ಕಾಪು ]

**ನಲ್ಗಿರಿ** (ನಾ). ಶ್ರೇಷ್ಠವಾದ ಪರ್ವತ ; ಪವಿತ್ರವಾದ ಗಿರಿ : ವಿಪುಲ ಶ್ರೀಕಟವಪ್ರ ನಲ್ಗಿರಿಯ ಮೇಲ್ನೋನ್ನೊಂದು ಸನ್ಮಾರ್ಗ್ಗದಿನ್ ಉಪ ವಿಾಲ್ಮ ಸುರಲೋಕಸೌಖ್ಯದೆಡೆಯಾನ್ನಾವೆಯ್ದಿ ಇಟ್ಸ್ವಾಳ್ ಮನವ್ (ಎಕ. II, ೯೮-೩ ; ಸು. 700). [ ನಲ್ + ಗಿರಿ$_1$ ]

**ನಲ್ಗುಟುಕು** (ನಾ). ಸವಿಯಾದ ಗುಟುಕು ; ರುಚಿಯಾದ ತುತ್ತು : ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪುದೇ ನಿಂದೆಲೆ ರಾಜಪತ್ನಿ ಪೊಸಪಣ್ಗಳ ನಲ್ಗುಟು[ಪಾಠಾಂ. ಟ]ಕಿತ್ತು . . . ಎಂದು ಸಾರಿಕಾಬ್ಬಂದಮರಾತಿಮಂದಿರದೊಳೆಂಬುದು ಬಂದ ಪುಳಿಂದಿಯರ್ಕಳಂ (ರಾಜಶೇ. ೫-೧೨). [ ನಲ್ + ಕುಟುಕು$_2$ ]

**ನಲ್ಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಕೃತಿಪತಿಯ ನಲ್ಗುಣಂಗಳ್ ಕೃತಿವೇಟ್ಟನ ಮನಮನಲೆದು ನಲಿಯಿಸೆ ಪೇೞ್ವ ಕೃತಿಯೆ ಕೃತಿ (ಚಕವಿ. ೧-೫೧). [ ನಲ್ + ಗುಣ ]

**ನಲ್ಗುದುರೆ** (ನಾ). ಒಳ್ಳೆಯ (ಲಕ್ಷಣಗಳಿಂದ ಕೂಡಿದ) ಕುದುರೆ; ಶ್ರೇಷ್ಠವಾದ ಅಶ್ವ : ಅಧ್ವರದ ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೊಳು . . . ಪೊಕ್ಕೊಡೆ (ಜೈಮಿಭಾ. ೨೦-೫). [ ನಲ್ + ಕುದುರೆ ]

**ನಲ್ಗುನಿಗುಂಜಿ** (ನಾ). ಒಳ್ಳೆಯ ಗುಲಗಂಜಿ : ನಲ್ಗುನಿಗುಂಜಿಯೊರ್ಚರ ಮನೊಯ್ಯನೆ ನೇರ್ಪಡಿಸುತ್ತುಮೆತ್ತಲುಂ ಪಲ್ಗಳ ಕಾಂತಿಯಂ ಪರಪುತುಂ ನಗುತುಂ ನಡೆದರ್ ಪುಳಿಂದಿಯರ್ (ಉದ್ಭಟ. ೨-೬೧).

[ ನಲ್ + ಗುನಿಗುಂಜಿ (< ಗುರುಗುಂಜಿ) ]

**ನಲ್ಗೆಯ್** (ಕ್ರಿ). ಶುದ್ಧಗೊಳಿಸು ; ಶುಭ್ರಗೊಳಿಸು : ಪಾಲ್ಗಡಲ ಚೆಲ್ವ ನೆಯನೀಳ್ಕೊಂಡು ನಲ್ಗೆಯ್ದು ತಪರಾಜದೊಡವೆರಸಿದಿನಿದದೇಂ ಸಾಲ್ಗೆ ಜೇನೆಯ್ಯ ಕಂದಲ್ ಸೊಗಸು ಸಾಟಿಯೇ (ಭಾವಚಿಂ. ೭-೮) ; "ಒಳ್ಳೆಯದನ್ನು ಮಾಡು. ಉತ್ತಮವಾಗಿ ತಯಾರಿಸು, ಹಿತವನ್ನು ಮಾಡು" (ಪ್ರಭಣ್ಣ). [ ನಲ್ + ಕೆಯ್$_1$ ]

**ನಲ್ಗೆಳದಿ** (ನಾ). ಪ್ರೀತಿಯ ಗೆಳತಿ ; ಪ್ರಿಯಸಖಿ : ಹಾ ನಲ್ಗೆಳದಿ . . . ಮಗುೞ್ದು ನಿನ್ನನಾವೆಡೆಯೊಳ್ ಕಾಣ್ಬೆಂ (ಮಿತ್ರಗೋ. ೫೦) : ತಾನುಂ ನಲ್ಗೆಳದಿ ಚಂದ್ರಮತಿಯುಂ ಸಲ್ಲಾಪಂಗೊಳುತಿರೆಯಿರೆ (ರಾಮಾಶ್ವ. ೧೭-೩೦).

[ ನಲ್ + ಕೆಳದಿ ]

**ನಲ್ಗೆಳೆಯ** (ನಾ). ಪ್ರೀತಿಯ ಗೆಳೆಯ ; ಪ್ರಿಯಸಖ : ಸಿರಿಯಾಳ್ವನ ಸೂನುವಿಂಗೆ ನಲ್ಗೆಳೆಯನೊ ಸೌಂದರಾಧಿಪನ ದೂತನೊ (ವೃಷವಿ. ೩೨-೩೬).

[ ನಲ್ + ಕೆಳೆಯ ]

**ನಲ್ಗೆಱೆ** (ನಾ). (ಕೈಗಳಲ್ಲಿರುವ) ಒಳ್ಳೆಯ ಲಕ್ಷಣವನ್ನು ಸೂಚಿಸುವ ರೇಖೆ ; ಶುಭರೇಖೆ : ನೀಳ್ದಿಸವೆಳಗೈ ಕಾಲ್ಗಳ್ ತಾಳ್ದಿರ್ಪುವು ಕೆಂದಳಂಗಳೊಳ್ ನಲ್ಗೆಱೆಯಂ (ಚಕವಿ. ೪-೭೨). [ ನಲ್ + ಗೆಱೆ ]

**ನಲ್ಗೊಣಸು** (ನಾ). ಮುದ್ದಾದ ಮರಿಹುಲ್ಲೆ,- ಜಿಂಕೆಯ ಮರಿ : ನಸು ಮುಗುಳ್ಚಿದ ೞಣ್ ಕಡೆವಾಯ ದೂರ್ವೆ . . . ನೆಱೆಯೊಪ್ಪೆ ನಲ್ಗೊಣಸು ಪಟ್ಟೆಸೆದಿರ್ದುದದೊಂದು ತಾಣದೊಳ್ (ಶಬಶಂ. ೨-೪೦).

[ ನಲ್ + ಕೊಣಸು$_1$ ]

**ನಲ್ಜವ್ವನೆ** (ನಾ). ಚೆಲುವೆಯಾದ ಯುವತಿ ; ಸುಂದರ ತರುಣಿ : ಬಂದರಂದು ಬಲೆಸ್ಸೇಕೆವಡೆದು . . . ನಲ್ಜವ್ವನೆಯರ ಮಿಾನ್ಗಣ್ಣ ಬೆಳರ್ವಣ್ಣ ಮೂವಣ್ಣಗೊಳಿಸಲ್ಚತಿಗಳ (ಉದ್ಭದೇ. ೫-೨೬). [ ನಲ್ + ಜವ್ವನೆ ]

**ನಲ್ಜೋಡು** (ನಾ). ಒಳ್ಳೆಯ ಜೊತೆ : ಇದು ಕಣಾ ಧರ್ಮಜನ ಸತಾಭ್ಯುದಯಕೋಸುಗವೂರ್ವಶಿಯ ಶಾಪದಲಿ ಬಂದುದು ಹೊತ್ತು ನೂಕಿದೆ ನೊಂದುವತ್ಸರವ ಇದಕೆ ನಲ್ಜೋಡಾಯ್ತು ನಿರ್ವಿಘ್ನದಲಿ ದಾಂಟಿದೆವವಧಿಯನು (ಕುಮಾವ್ಯವಿ. ಒರಿಇ. ೭-೫೩). [ ನಲ್ + ಜೋಡು ]

**ನಲ್ತದ** (ನಾ). (?) : ನಮಿಲೂರಾ ಸಿರಿಸಂಘದಾಜಿಗಣದಾ ರಾಜ್ಞೀಮತೀಗನ್ತಿಯಾರ್ ಅಮಲಂ ನಲ್ತದ ಶೀಲದಿಂ ಗುಣದಿನಾಮಿಕ್ಕೋತ್ತಮ ವಿನ್ಮಾಳೆದೊರ್ ನಮಗಿನ್ನೊಟ್ಟಿದುಯೆನ್ದು ಏಱಿ ಗಿರಿಯಾನ್ಸನ್ಯಾಸನಂ ಯೋಗದೊಳ್ (ಎಕ. II, ೯೭-೨ : ಸು. 700).

[ ☞ ಇದು 'ನಲ್ತಪ' ಎಂಬುದರ ಅಪಲಿಖಿತ ]

**ನಲ್ತಪ** (ನಾ). ಉತ್ತಮವಾದ ತಪ ; ಶ್ರೇಷ್ಠವಾದ ತಪಸ್ಸು : ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ ಸ್ವಾಧ್ಯಾಯಸಮ್ಪತ್ತಿನಿಮ್ ಕಟ್ ಇಲ್ಲಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯರ್ (ಎಕ. II, ೭೬-೨ : ಸು. 700). [ ನಲ್ + ತಪ$_3$ ]

**ನಲ್ತೆತ್ತು** (ನಾ). ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪರಿಧಾನ ಬೆಡುಂಗೊಳು ಚಳಾಯ ದಾಯದೆಱೆ ಹೆಡುವರ ಬೀರವಣ ನಲ್ತೆತ್ತು ನಲುಗಂಟಿ ನಲ್ಲಾವು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ : 1117). [ ☞ ಇದು 'ನಲ್ಲೆತ್ತು' ಎಂಬುದರ ಅಪಲಿಖಿತವಿರಬಹುದೆ ? ]

**ನಲ್ದಂಬುಲ** (ನಾ). ಸವಿಯಾದ ವೀಳೆಯ ; ರುಚಿಯಾದ ತಾಂಬೂಲ ; ನರುದಂಬುಲ : ಪೆರ್ಚುತೊಯ್ಯಗೆ ನಲ್ದಂಬುಲವಿಾವಳೊತ್ತಿ ಸೊಗಸುಣ್ಮಲ್ಬುಂಬಿಪಳ್ . . . ಕಾತರು ಮಿಗೆ ತಾಂ ಕೊಡುವಳೆಂದು ಸೌಂದರಿ ಲಸತ್ಪುಂಭಾವದಿಂ ಕಾಂತನಂ (ಉದ್ಭಟ. ೮-೧೨೩). [ ನಲ್ + ತಂಬುಲ ]

**ನಲ್ದಾಣ** (ನಾ). ಒಳ್ಳೆಯ ನೆಲೆ,- ಆಶ್ರಯ : ಮುಂದಣವಧಿಯ ವನದ ವಾಸಮಂ ಕಳೆಯೆ ನೆಮ್ಮದಿಯ ನಲ್ದಾಣವೊಂದಂ ಕೃಪೆಯಿಂ ಬೆಸಸಿಂ (ಶ್ರೀರಾಮಾ ೧೯೨-೪೪೭). [ ನಲ್ + ತಾಣ ]

**ನಲ್ದಾಯಿ** (ನಾ). ಅಕ್ಕರೆಯ ತಾಯಿ ; ಪ್ರೀತಿಯ ಜನನಿ : ಶ್ರೀಯೆ ವಾಗ್ದೇವಿಯೆ ಸೌಭಾಗ್ಯದಾಯಿಯೆ . . . ಅಕ್ಕರೆಯ ನಲ್ದಾಯಿಯೆ ಕೃತಿಗೆ ಉನ್ನತಿಯನು ಈಯೆ (ಇಂಚಾಪ. ೩-೧).

[ ನಲ್ + ತಾಯಿ (<ತಾಯ್) ]

**ನಲ್ದೊಟ್ಟಿಲು** (ನಾ). ಅಂದವಾದ ತೊಟ್ಟಿಲು : ತಾಯ್‌ವಸಿರ್ ನೀನಾದೆ ಪುಟ್ಟುವಾಗಳ್ ಮತ್ತೆ ನಲ್ದೊಟ್ಟಿಲಾದೆ, ಜೋಗುಳವಾದೆಯಳಿಯಂಗೆ (ಶ್ರೀರಾಮಾ. ೩೧೭-೪೧೦). [ ನಲ್ + ತೊಟ್ಟಿಲು$_1$ (<ತೊಟ್ಟಿಲ್$_1$) ]

**ನಲ್ದೊಡವು** (ನಾ). ಅಂದವಾದ ಆಭರಣ : ಮುಡಿಯಿಂದಡಿವರೆಗಂ ನಲ್ದೊಡವುಗಳಂ ತುಡಿಸಲೆಂದು ದಾದಿ . . . ನುಡಿದಳಿಂತಚ್ಯುತನಂ (ಗೀತಗೋ. ೭-೧೭). [ನಲ್ + ತೊಡವು ]

**ನಲ್ನಯ** (ನಾ). ಒಳ್ಳೆಯ ರೀತಿ ; ಸರಿಯಾದ ಕ್ರಮ : ಕರಂ ರಸಿಕರಿನೆಯ್ದೆ ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ ತಿರ್ದಿಸುವುದೆ ನಲ್ನಯಂ (ಜಗವಿ. ೧-೧೫). [ ನಲ್ + ನಯ$_2$ ]

**ನಲ್ನಿಶೆ** (ನಾ). ಸರಿರಾತ್ರಿ ; ಮಧ್ಯರಾತ್ರಿ : ನಲ್ನಿಶೆಯೊಳ್, ಆಱತಿರೆ ಸಂಜೆಯುರಿ. ಇರ್ಬಾಯ, ಖಡ್ಗಮನ್ ತುಡುಕಿ ಗುಱಿಯಿಲ್ಲದೆತ್ತಲೋ ತೆರಳ್ವನನ್ ನಾನ್ ತಡೆದು (ಅಶ್ವತ್ಥಾ. ೧೨-೨೪೯). [ ನಲ್ + ನಿಶೆ$_1$ ]

**ನಲ್ನುಡಿ$_1$** (ಕ್ರಿ). ಹಿತವಾದುದನ್ನು ಹೇಳು ; ಹಿತವನ್ನು ನುಡಿ : ಆಗಳಾನ್ ನೆಲ ಮುಗಿಲ ಮಕ್ಕಳಾ ದೈತ್ಯರನ್ ನಲ್‌ನುಡಿದು ನಡಪಲ್ಕೆ ನೆಗಟ್ದಿನ್ (ಬದ್ಮಪ್ರ. ೧೨-೨೩೭). [ ನಲ್ + ನುಡಿ$_1$ ]

**ನಲ್ನುಡಿ$_2$** (ನಾ). ೧. ಹಿತವಾದ ಮಾತು ; ಸವಿನುಡಿ : ಸುಧರ್ಮ ಭೂಮಿಪನಂ ನಲ್ನುಡಿಯಿಂ ಬೀಳ್ಕೊಂಡು (ಉದ್ಭಟ. ೭-೭೮) ; ಅವನ

